

ಕುಮಾಂಡೂರು ರಾಮಸ್ವಾಮ್ಯಯಂಗಾರ್ಯರಿಂದ

ಬರೆಯಲ್ಪಟ್ಟ

ರಾಜಸಭಾ ಭೂಷಣ ರಿಟೈರ್ಡ್ ಚೀಫ್ ಇಂಜಿನಿಯರ್

**ಕರ್ಪೂರ್ ಶ್ರೀನಿವಾಸರಾಯರಿಂದ**

ಪರಿಶೋಧಿಸಲ್ಪಟ್ಟಿದೆ.



1918.



[ಬೆಲೆ

# ಮಹಾಭಾರತ ಸಂಗ್ರಹ

## ಅರಣ್ಯಪರ್ವ

# Mahabharatha Sangraha.

# ಮಹಾಭಾರತ ಸಂಗ್ರಹ.

## ವಿರಾಟಪರ್ವ.

(೨)

ಆಸ್ಥಾನ ವಿದ್ವಾನ್ ಕನ್ನಡ ಸ್ಕೂಲ್ ಹೆಡ್‌ಮಾಸ್ಟರ್

ಕುಮಾಂಡೂರು ರಾಮಸ್ವಾಮ್ಯಯ್ಯಂಗಾರ್ಯರಿಂದ

ಬರೆಯಲ್ಪಟ್ಟು

ರಾಜಸಭಾ ಭೂಷಣ ರಿಟೈರ್ಡ್ ಚೀಫ್ ಇಂಜಿನಿಯರ್

**ಕರ್ಪೂರ್ ಶ್ರೀನಿವಾಸರಾಯರಿಂದ**

ಪರಿಶೋಧಿಸಲ್ಪಟ್ಟಿದೆ.

1918

 [ಬೆಲೆ 1 ರೂಪಾಯಿ



# ಮುನ್ನುಡಿ.

ನಮ್ಮ ಆರ್ಯಗ್ರಂಥಗಳಲ್ಲಿ ಮಹಾಭಾರತದಂತೆ ಧರ್ಮಬೋಧಕವಾದ ಪುಸ್ತಕವು ಮತ್ತೊಂದೂ ಇಲ್ಲ. ಆದುದರಿಂದಲೇ ಇದಕ್ಕೆ "ಭಾರತಃ ಪಂಚಮೋವೇದಃ" ಎಂದು ಹೆಸರು ಬಂದಿದೆ. ಇಂತಹ ಉದ್ಗ್ರಂಥವನ್ನು ಲೋಕಾನುಗ್ರಹಾರ್ಥವಾಗಿ ವೇದವ್ಯಾಸ ಮಹರ್ಷಿಗಳು ಸಂಸ್ಕೃತ ಭಾಷೆಯಲ್ಲಿ ವಿರಚಿಸಿದರು. ಆ ಭಾಷೆಯರಿಯದ ಜನರಿಗೆ ಈ ಮಹಾಭಾರತದ ಧರ್ಮನೀತಿಗಳೆಲ್ಲಾ ತಿಳಿದು ಲೋಕೋಪಕಾರವಾಗಲೆಂದು, ಆ ಗ್ರಂಥವನ್ನು ಮೈಸೂರು ಸಂಸ್ಥಾನದಲ್ಲಿ ಆಳಿದ ಮಹಾಸ್ವಾಮಿಗಳಾದ ಮುಮ್ಮಡಿ ಶ್ರೀಕೃಷ್ಣರಾಜೇಂದ್ರ ಒಡೆಯರವರು ಕನ್ನಡದಲ್ಲಿ ಭಾಷಾಂತರಿಸಿದರು. ಈ ಕೃಷ್ಣರಾಜವಾಣೀವಿಲಾಸವೆಂಬ ಪುಸ್ತಕವು ಸಂಸ್ಕೃತಮೂಲಪ್ರತಿಯ ಪರಿವರ್ತನವೇ ಆಗಿರುವುದರಿಂದ ಬಹುದೊಡ್ಡದಾಗಿರುವುದು. ಇದು ಪ್ರತ್ಯೇಕ ಪರ್ವಪರ್ವಗಳಾಗಿ ಮುದ್ರಿಸಲ್ಪಟ್ಟಿದ್ದರೂ ಸಾಮಾನ್ಯ ಜನರು ಕೊಳ್ಳಲಿಕ್ಕೆ ಬೆಲೆ ಹೆಚ್ಚಾಗಿರುವುದು ; ಸಮಗ್ರ ಪ್ರತಿ ಸಿಕ್ಕುವುದೂ ಕಷ್ಟ ; ಶೈಲಿಯೂ ಕಠಿನ.

ಹದಿನಾರನೆಯ ಶತಮಾನದಲ್ಲಿ ಕುಮಾರವ್ಯಾಸನೆಂಬ ಕವಿಯು ಕನ್ನಡ ಭಾರತವನ್ನು ಪದ್ಯರೂಪದಿಂದ ವಿರಚಿಸಿದನು. ಈ ಗ್ರಂಥವು ರಸಭರಿತವಾಗಿಯೂ, ಶ್ರಾವ್ಯವಾಗಿಯೂ, ಮನೋರಂಜಕವಾಗಿಯೂ ಇರುವುದರಿಂದ ಬಹುಶಃ ಕನ್ನಡಿಗರು ಇದನ್ನು ಓದಿ ಆನಂದಗೊಳ್ಳುತ್ತಿರುವರು. ಆದರೂ ಗ್ರಂಥವು ಪದ್ಯರೂಪವಾಗಿರುವುದರಿಂದ ಸಾಮಾನ್ಯ ಜನರಿಗೂ ವಿದ್ಯಾರ್ಥಿಗಳಿಗೂ ಇದರ ಅರ್ಥ ಮಾಡಿಕೊಳ್ಳಲು ಶಕ್ತಿಯಿಲ್ಲದೆ ಕೇವಲ ಶುಕಪಾಠವಾಗುತ್ತಲಿದೆ.

ಈ ಕೊರತೆಯನ್ನು ತಪ್ಪಿಸಬೇಕೆಂಬ ಉದ್ದೇಶದಿಂದ ಸಾಮಾನ್ಯ ಜನರಿಗೆಲ್ಲ ಉಪಯೋಗವಾಗುವಂತೆ ಸುಲಭ ಶೈಲಿಯಲ್ಲಿ ಈ ಭಾರತ ಸಂಗ್ರಹವು ಬರೆಯಲ್ಪಟ್ಟಿರುವುದು. ಗದುಗಿನ ಭಾರತವನ್ನು ಮೂಲವಾಗಿಟ್ಟುಕೊಂಡು, ಈ ಗ್ರಂಥವು ಗದ್ಯರೂಪದಲ್ಲಿ ಬರೆಯಲ್ಪಟ್ಟಿದೆ. ಆವಶ್ಯಕವಿದ್ದಕಡೆ ಅಲ್ಲಲ್ಲಿ ಸ್ವಲ್ಪ ಮಟ್ಟಿಗೆ ಬದಲಾವಣೆಯೂ ಮಾಡಲ್ಪಟ್ಟಿರುವುದು.

ಭಾರತದ ಹದಿನೆಂಟು ಪರ್ವಗಳಲ್ಲಿ ಪರಮಮಂಗಳಕರವಾದ ವಿರಾಟಪರ್ವವು ಪ್ರಥಮತಃ ಪ್ರಾರಂಭಿಸಲ್ಪಟ್ಟಿದೆ. ಉಳಿದ ಪರ್ವಗಳೂ ಶ್ರೀ ಕೃಷ್ಣಾನುಗ್ರಹದಿಂದ ಇದರಂತೆಯೇ ಜಾಗ್ರತೆಯಲ್ಲಿ ಪ್ರಕಟಿಸಲ್ಪಡುವುವು.

ಈ ಗ್ರಂಥವನ್ನು ಬರೆಯಿಸಿ, ಸ್ವತಃ ಪರಿಶೋಧಿಸಿ, ಪ್ರಚಾರಪಡಿಸಲು ಮ|| ರಾ|| ರಾಜಸಭಾ ಭೂಷಣ, ರಿಟೈರ್ಡ್ ಚೀಫ್ ಇಂಜನಿಯರ್ ಕರ್ಪೂರ್ ಶ್ರೀನಿವಾಸರಾಯರವರು ಕೇವಲ ಪಾರಮಾರ್ಥಿಕ ಬುದ್ಧಿಯಿಂದ ಪ್ರವರ್ತಿಸಿದ್ದಾರೆ. ಈ ಮಹನೀಯರೇ ಮುದ್ರಣ ಮುಂತಾದ ಯಾವತ್ತೂ ವೆಚ್ಚವನ್ನೂ ವಹಿಸಿಕೊಂಡಿರುವುದರಿಂದ ಗ್ರಾಹಕರಿಗೆ ಹೆಚ್ಚು ಬೆಲೆ ಬೀಳದಂತೆ ಸುಲಭವಾಗಿ ದೊರೆಯುವ ಹಾಗೆ ಮಾಡಬೇಕೆಂದು ಇದರ ಬೆಲೆಯು ಬಹು ಸುಲಭವಾಗಿ ಇಡಲ್ಪಟ್ಟಿದೆ. ಕನ್ನಡ ಭಾಷೆಯಲ್ಲಿ ವಿಶೇಷಾಭಿಮಾನವುಳ್ಳ ರಿಟೈರ್ಡ್ ಸಬ್‌ಜಡ್ಜರು ಶ್ರೀಮಾನ್ ಸೂಲಿಕುಂಟೆ ಜಮೀನ್‌ದಾರ್ ದೇಶಕುಲಕರಣಿ ವರದರಾಜೈಯ್ಯಂಗಾರ್ಯರವರೂ ಈ ಗ್ರಂಥದ ಬರಹ ಪ್ರತಿಗಳನ್ನು ನೋಡಿ ಅಲ್ಲಲ್ಲಿ ಸರಿಪಡಿಸಿ ಸಹಾಯ ಮಾಡಿದ್ದಾರೆ. ಇದರಲ್ಲಿ ಕಂಡು ಬರುವ ನ್ಯೂನಾತಿರೇಕಗಳನ್ನು ವಾಚಕ ಮಹಾಶಯರು ದಯಮಾಡಿ ತಿಳಿಸಿದರೆ ತುಂಬ ಕೃತಜ್ಞತೆಯಿಂದ ಅಂಗೀಕರಿಸಲ್ಪಡುವುದು.

———:0:———

# ವಿಷಯ ಸೂಚನೆ.


| ಸಂಧಿ | ಪುಟ |
|---|---|
| | ೧ |
| ಪೂರ್ವಕಥಾಸಾರ | |
| ಪಾಂಡವರು ವೇಷಾಂತರಗಳಿಂದ ವಿರಾಟರಾಯನ ಆಶ್ರಯುವನ್ನು ಪಡೆದದ್ದು | ೭ |
| ಭೀಮನು ಹಸ್ತಿನಾಪುರದ ಜಟ್ಟಿಗಳನ್ನು ಕೊಂದದ್ದು | ೨೪ |
| ಕೀಚಕನು ದ್ರೌಪದಿಯನ್ನು ಕಾಮಿಸಿದ್ದು | ೩೬ |
| ಭೀಮನು ಕೀಚಕನನ್ನೂ ಅವನ ತಮ್ಮಂದಿರನ್ನೂ ಕೊಂದದ್ದು | ೪೯ |
| ದಕ್ಷಿಣಗೋಗ್ರಹಣದಲ್ಲಿ ಭೀಮನು ಸುಶರ್ಮನನ್ನು ಗೆದ್ದದ್ದು | ೭೯ |
| ಅರ್ಜುನನು ಉತ್ತರನಿಗೆ ಸಾರಥಿಯಾದ್ದು | ೯೭ |
| ಅರ್ಜುನನು ತನ್ನ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಕೌರವ ಸೈನ್ಯದೊಳಕ್ಕೆ ನುಗ್ಗಿದ್ದು | ೧೦೮ |
| ಅರ್ಜುನನು ಕುರುಸೈನ್ಯವನ್ನೋಡಿಸಿ ಗೋವುಗಳನ್ನು ಹಿಂದಿರುಗಿಸಿದ್ದು | ೧೨೪ |
| ಅರ್ಜುನನು ಸಮ್ಮೋಹನಾಸ್ತ್ರದಿಂದ ಕುರುಸೈನ್ಯವನ್ನು ಮಲಗಿಸಿದ್ದು | ೧೩೭ |
| ಅರ್ಜುನನು ಉತ್ತರನೊಂದಿಗೆ ಮತ್ಸ್ಯನಗರಿಗೆ ಹಿಂದಿರುಗಿದ್ದು | ೧೫೭ |
| ಅಭಿಮನ್ಯುವಿನ ವಿವಾಹ ಮಹೋತ್ಸವ | ೧೬೮ |

# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಙ್ಕ್ತಿ | ತಪ್ಪು | ಒಪ್ಪು |
|---|---|---|---|
| ೮ | ೧ | ಕಾಲ | ಸಾವು |
| ೧೩ | ೧೭ | ಸ್ವಾಂತಂತ್ರ್ಯ | ಸ್ವಾತಂತ್ರ್ಯ |
| ೨೮ | ೧೪ | ಕೆಳೀ | ಕೇಳಿ |
| ೨೯ | ೧೦-೧೬ | ವೀರಾ | ವಿರಾ– |
| ೩೦ | ೯ | ನಿಂತರ | ನಿಂತರು |
| | ೧೦ | ವೀರಾಟ | ವಿರಾಟ |
| ೩೧ | ೩ | ಮುರುಡು | ಮಡಿದು |
| ೩೨ | ೧೮ | ಒಡಲಲ | ಒಡಪಲಲ |
| ೩೫ | ೨೨ | ಒಟ್ಟಿಗೆ | ಪಟ್ಟಿಗೆ |
| ೪೬ | ೨೩ | ಪೆಚ್ಚಿ | ಬೆಚ್ಚಿ |
| ೪೯ | ೫ | ಮನೋಭಿಷ್ಟ | ಮನೋಭೀಷ್ಟ |
| ೫೦ | ೫ | ಬಡತಿ | ಒಡತಿ |
| | ೬ | ಸೇವ್ಯಾಧರ್ಮ | ಸೇವಾಧರ್ಮ |
| ೫೩ | ೧೬ | ಬೀರಿದಳು | ಚೀರಿದಳು |
| ೫೬ | ೮ | ವ್ಯರ್ಥಲಾಪ | ವ್ಯರ್ಥಾಲಾಪ |
| ೬೮ | ೧೬ | ಆಗವನು | ಆಗುವನು |
| ೧೦೧ | ೧೬ | ಬೈರವ | ಭೈರವ |
| ೧೧೦ | ೨೫ | ಮಡೆ | ಮಂಡೆ |
| ೧೧೧ | ೧೧ | ಅರ್ಜುನನ | ಅರ್ಜುನನು |
| ೧೨೦ | ೧೫ | ಗಳೆಂಬ | ಗಳಿಗೆ ಸಮವಾದ |
| ೧೨೭ | ೬ | ಹೋಗುವಡೊ | ಹೋಗುವುದೊ |

| | | | |
|---|---|---|---|
| ೧೩೦ | ೭ | ವಾಸಸದ | ವಾಸದ |
| ೧೩೧ | ೧೭ | ಯುದ್ಧಕ್ಕ | ಯುದ್ಧಕ್ಕೆ |
| ೧೩೨ | ೧೬ | ಅಡಿ | ಅಡ್ಡ |
| ೧೩೩ | ೩ | ಹಿಡಿದು | ಸಿಡಿದು |
| ೧೩೪ | ೧೦ | ಮರಿದು | ಮುರಿದು |
| | ೧೧ | ಳಗನ್ನು | ಳನ್ನು |
| | ೨೦ | ಸಾಲಿಕ್ಕೆ | ಸಾಲಿಕ್ಕ |
| ೧೩೫ | ೪ | ಯನ್ನೂ | ಯನ್ನೂ |
| | ೬ | ಸೇನ | ಸೇನೆ |
| | ೧೧ | ಯ ಯ ವ | ಯಾವ |
| | ೧೩ | ಹೊಗಳ | ಹೊಗಳು |
| ೧೪೨ | ೧೧ | ತಿರುದು | ತಿರಿದು |
| ,, | ೧೧ | ಜಯದ್ರಥ | ಜಯದ್ರಥ |
| | ೧೯ | ಸುಖದುಃ | ಸುಖದುಃಖ |

——0——

ಶ್ರೀರಸ್ತು

# ಪೀಠಿಕೆ.



ಶ್ಲೋ॥ ನಾರಾಯಣಂ ನಮಸ್ಕೃತ್ಯ ನರಂ ಚೈವನರೋತ್ತಮಂ।
ದೇವೀಂಸರಸ್ವತೀಂ ವ್ಯಾಸಂತತೋಜಯ ಮುದೀರಯೇತ್॥

ಸಕಲ ಲೋಕರಕ್ಷಕನಾದ ನಾರಾಯಣನನ್ನೂ ಅವನ ಪ್ರಿಯ ಶಿಷ್ಯನಾಗಿ ಪುರುಷ ಶ್ರೇಷ್ಠನಾದ ಅರ್ಜುನನನ್ನೂ ವಂದಿಸಿ, ವಿದ್ಯಾಧಿದೇವತೆಯಾದ ಸರಸ್ವತಿಯನ್ನೂ ವೇದವ್ಯಾಸ ಮಹರ್ಷಿಗಳನ್ನೂ ನಮಸ್ಕರಿಸಿ, ಭಾರತ ಕಥೆಯನ್ನು ಪ್ರಾರಂಭಿಸತಕ್ಕದ್ದು.

ಭಾರತ ಕಥೆಯಲ್ಲಿ ನಾವು ಪಾಂಡವರ ಮಂಗಳಕ್ಕೆ ಪೀಠಿಕೆಯಾದ ವಿರಾಟಪರ್ವವನ್ನು ಮೊದಲು ಪ್ರಾರಂಭಿಸುವುದರಿಂದ ಅದಕ್ಕೆ ಹಿಂದಿನ ಕಥಾ ಸಂದರ್ಭವನ್ನು ಸಂಕ್ಷೇಪವಾಗಿ ತಿಳಿಸುವುದು ಅಗತ್ಯ. ಆಯಾ ಪರ್ವಗಳಲ್ಲಿ ಕಥಾಭಾಗಗಳು ವಿಶದವಾಗಿ ಹೇಳಲ್ಪಡುವುದರಿಂದ ಇಲ್ಲಿ ವಿಸ್ತರಿಸಲಿಲ್ಲ.

ನಮ್ಮ ಭರತಖಂಡದ ಉತ್ತರಭಾಗದಲ್ಲಿ ಗಂಗೆಯ ಉಪನದಿಯಾದ ಯಮುನಾನದಿಯು ಹರಿಯುತ್ತಿರುವುದು. ಅದರ ತೀರದಲ್ಲಿ ಹಸ್ತಿನಾಪುರವೆಂಬ ಪಟ್ಟಣವು ಪ್ರಸಿದ್ಧವಾಗಿರುವುದು. ದ್ವಾಪರ ಯುಗದ ಅಂತ್ಯದಲ್ಲಿ ಚಂದ್ರವಂಶದ ರಾಜರುಗಳು ಇಲ್ಲಿ ಆಳುತ್ತಿದ್ದರು.

ಅವರಲ್ಲಿ ಶಂತನುವೆಂಬ ರಾಜನು ಬಹಳ ಪ್ರಸಿದ್ಧನು. ಇವನಿಗೆ ಗಂಗಾದೇವಿಯಲ್ಲಿ ಭೀಷ್ಮನೆಂಬ ಮಗನೂ, ಯೋಜನಗಂಧಿಯಲ್ಲಿ ಚಿತ್ರಾಂಗದ ವಿಚಿತ್ರವೀರ್ಯರೆಂಬ ಮಕ್ಕಳೂ ಹುಟ್ಟಿದರು. ಭೀಷ್ಮನು ಮದುವೆ ಮಾಡಿಕೊಳ್ಳದೆ ಬ್ರಹ್ಮಚರ್ಯವ್ರತದಿಂದ ಇರುವೆನೆಂದು ಪ್ರತಿಜ್ಞೆಮಾಡಿದನು. ಚಿತ್ರಾಂಗದನು ಒಂದು ಯುದ್ಧದಲ್ಲಿ ಸತ್ತನು. ಕಿರಿಯವನಿಗೆ ಭೀಷ್ಮನು ಅಂಬಿಕೆ, ಅಂಬಾಲಿಕೆ ಎಂಬ ಇಬ್ಬರು ರಾಜಕನ್ಯೆಯರನ್ನು ತಂದು ಮದುವೆ ಮಾಡಿದನು. ಈ ರಾಜಕುಮಾರನು ಮಕ್ಕಳಿಲ್ಲದೆ ಸ್ವರ್ಗಸ್ಥನಾದನು. ಆಗ ಸತ್ಯವತಿಯ ಕೋರಿಕೆಯಂತೆ ವ್ಯಾಸಮುನಿಯು ಅನುಗ್ರಹಿಸಿದ್ದರಿಂದ ಅಂಬಿಕೆಯಲ್ಲಿ ಧೃತರಾಷ್ಟ್ರನೂ, ಅಂಬಾಲಿಕೆಯಲ್ಲಿ ಪಾಂಡುವೂ ಹುಟ್ಟಿದರು. ಧೃತರಾಷ್ಟ್ರನಿಗೆ ಗಾಂಧಾರಿಯೂ, ಪಾಂಡುರಾಯನಿಗೆ ಕುಂತಿ ಮತ್ತು ಮದ್ರದೇವಿ ಎಂಬಿಬ್ಬರೂ ಪತ್ನಿಯರಾದರು. ಇವರಲ್ಲಿ ಕುಂತೀದೇವಿಗೆ ಧರ್ಮರಾಯ, ಭೀಮ, ಅರ್ಜುನ ಎಂಬ ಮೂವರು ಮಕ್ಕಳೂ, ಮದ್ರದೇವಿಗೆ ನಕುಲ, ಸಹದೇವರೆಂಬಿಬ್ಬರು ಮಕ್ಕಳೂ ಹುಟ್ಟಿದರು. ಗಾಂಧಾರಿಗೆ ದುರ್ಯೋಧನ, ದುಶ್ಶಾಸನ ಮೊದಲಾದ ನೂರು ಮಂದಿಪುತ್ರರೂ, ದುಶ್ಶಳೆಯೆಂಬ ಮಗಳೂ ಜನಿಸಿದರು.

ಪಾಂಡುರಾಯನು ಅಲ್ಪಾಯುವಾಗಿ ಸತ್ತುದರಿಂದ ಕಿರಿಯ ಹೆಂಡತಿಯು ಅವನ ಸಂಗಡ ಸಹಗಮನ ಮಾಡಿದಳು. ಧೃತರಾಷ್ಟ್ರರಾಯನು ಪಂಚಪಾಂಡವರನ್ನೂ ಕುಂತಿಯನ್ನೂ ರಾಜಧಾನಿಗೆ ಕರೆಯಿಸಿಕೊಂಡು, ಪ್ರೀತಿಯಿಂದ ಪೋಷಿಸುತ್ತಿದ್ದನು. ಆತನ ಮಕ್ಕಳಾದ ಕೌರವರಿಗೆ ಇದು ಸರಿಬೀಳಲಿಲ್ಲ. ಇವರ ಏಳಿಗೆಯನ್ನು ಸೈರಿಸದೆ ಹೋದರು. ಇವರನ್ನು ನಾಶಮಾಡಿಬಿಟ್ಟರೆ ಶತ್ರುಗಳಿಲ್ಲದೆ ನಾವುಸುಖವಾಗಿರಬಹುದೆಂಬುದೇ ಅವರ ಉದ್ದೇಶ. ಇದಕ್ಕಾಗಿ ಹಲವು ಪ್ರಯತ್ನಗಳನ್ನು ಮಾಡಿದರು. ಜ್ಞಾತಿಮತ್ಸರವೆಂಬುದು ಬಲು ಕೆಟ್ಟದು.

ಅದು ಎಂತಹ ಪಾಪಕೃತ್ಯವನ್ನಾದರೂ ಮಾಡಲಿಕ್ಕೆ ಪ್ರೇರಿಸುವುದು. ಕೌರವರು ಅನ್ನದಲ್ಲಿ ವಿಷವನ್ನು ಬೆರಸಿ ಪಾಂಡವರಿಗೆ ತಿನ್ನಿಸಿದರು. ಆಳವಾದ ಮಡುವಿನಲ್ಲಿ ಮುಳುಗಿಸಿದರು. ವಾರಣಾವತದಲ್ಲಿ ಅರಗಿನ ಮನೆಯನ್ನು ಕಟ್ಟಿಸಿ, ಅದರಲ್ಲಿ ಇವರನ್ನು ಕೂಡಿ, ಸುಡಬೇಕೆಂದು ಪ್ರಯತ್ನಮಾಡಿದ್ದರು. ಮನುಷ್ಯರ ಯೋಚನೆಯೇ ಬೇರೆ, ದೇವರ ಯೋಚನೆಯೇ ಬೇರೆ. ಆತನ ಅನುಗ್ರಹವಿದ್ದರೆ ಎಂತಹ ಆಪತ್ತು ಬಂದರೂ ಸುಲಭವಾಗಿ ಪರಿಹಾರವಾಗುವುದು. ದೇವಭಕ್ತರಾದ ಪಾಂಡವರಿಗೆ ಶ್ರೀಕೃಷ್ಣನ ಅನುಗ್ರಹವು ಸಂಪೂರ್ಣವಾಗಿದ್ದಿತು. ಇವರಿಗೆ ಬಂದ ಕಷ್ಟಗಳು ಸುಲಭವಾಗಿ ಪರಿಹಾರವಾದುವು. ಪಾಂಚಾಲರಾಯನ ಮಗಳಾದ ದ್ರೌಪದಿಯ ಸ್ವಯಂವರಕ್ಕಾಗಿ ಆ ರಾಯನು ಆಕಾಶದಲ್ಲಿ ಒಂದು ಮತ್ಸ್ಯಯಂತ್ರವನ್ನಿಟ್ಟನು. ಅದನ್ನು ಗುರಿನೋಡಿ ಹೊಡೆದು, ನೆಲದಲ್ಲಿರುವ ಕಟಾಹದಲ್ಲಿ ಕೆಡಹಿದವನಿಗೆ ತನ್ನ ಮಗಳನ್ನು ಕೊಡುವುದಾಗಿ ಪ್ರಕಟಿಸಿದನು. ಹಲವುಜನ ರಾಜಕುಮಾರರು ಬಂದು ಯಂತ್ರವನ್ನು ಭೇದಿಸಲಿಕ್ಕೆ ಯತ್ನಿಸಿ, ಕೈಯಲ್ಲಿ ಸಾಗದೆ ಭಗ್ನಮನೋರಥರಾದರು. ಧನುರ್ವಿದ್ಯೆಯಲ್ಲಿ ಪಾರಂಗತನಾದ ಅರ್ಜುನನು ಮತ್ಸ್ಯಯಂತ್ರವನ್ನು ಕೆಡಹಿದನು. ದ್ರೌಪದಿಯು ಅವನ ಕೊರಳಿಗೆ ಪುಷ್ಪಮಾಲೆ ಹಾಕಿದಳು. ಬಳಿಕ ಅರ್ಜುನನು ಅವಳನ್ನು ಕರೆದುಕೊಂಡು ತಾವು ಇಳಿದಿದ್ದ ಮನೆಗೆ ಬಂದನು. ತನ್ನ ತಾಯಿಯನ್ನು ಕುರಿತು, ಅಮ್ಮಾ! ಈ ದಿನ ಒಂದು ಶ್ರೇಷ್ಠವಾದ ವಸ್ತುವನ್ನು ತಂದಿರುವೆನೆಂದನು. ಕುಂತಿಯು ಕನ್ಯಾರತ್ನವೆಂದು ತಿಳಿಯದೆ ಅವನು ಎಂದಿನಂತೆ ಭಿಕ್ಷವನ್ನು ತಂದಿರುವನೆಂದು ಭಾವಿಸಿ, ನೀವು ಐವರೂ ಸಮವಾಗಿ ಅನುಭವಿಸಿರಿ ಎಂದಳು. ಆಮೇಲೆ ದ್ರೌಪದಿಯನ್ನು ಕಂಡು, ಅಹಾ! ಮೋಸಹೋದೆನು. ನನ್ನ ಬಾಯಿಂದ ಈ ಮಾತು ಹೊರಡಬಹುದೆ! ಎಂದು ಚಿಂತಿಸಿದಳು. ಯತ್ನವಿಲ್ಲ. ಪಾಂಡವರು ತಾಯಿಯ ಆಜ್ಞೆ

ಯನ್ನು ಮಾರತಕ್ಕವರಲ್ಲ. ವೇದವ್ಯಾಸರ ಮತ್ತು ಮಹಾಜನರ ಅನು
ಮತಿಯಿಂದವರೈವರೂ ಆಕೆಯನ್ನು ಮದುವೆಯಾದರು. ಈ ಸುದ್ದಿ ಧೃತ
ರಾಷ್ಟ್ರನಿಗೆ ತಿಳಿಯಿತು. ಅವರನ್ನು ಕರೆಸಿಕೊಂಡು, ಅವರಿಗೆ ಇಂದ್ರ
ಪ್ರಸ್ಥವೆಂಬ ಪಟ್ಟಣವನ್ನು ಕಟ್ಟಿಸಿಕೊಟ್ಟು, ಅಲ್ಲಿ ಸುಖವಾಗಿರಿ ಎಂದು
ಹೇಳಿಕಳುಹಿದನು. ಇಂಡಿಯಾಕ್ಕೆ ಈಗ ರಾಜಧಾನಿಯಾಗಿರುವ ದೆಹಲೀ
ನಗರವೇ ಆಗಿನ ಇಂದ್ರಪ್ರಸ್ಥವಾಗಿತ್ತೆಂದು ಹೇಳುವರು. ಪಾಂಡ
ವರು ಇಲ್ಲಿ ರಾಜಸೂಯವೆಂಬ ದೊಡ್ಡ ಯಜ್ಞವನ್ನು ಮಾಡಿದರು.
ಈ ಯಾಗಕ್ಕೆ ಸಮಸ್ತರಾಜರೂ ಬಂದಿದ್ದರು. ಕೌರವರೂ ಬಂದಿ
ದ್ದರು. ಯಾಗ ಮುಗಿದಮೇಲೆ ಒಂದು ದಿನ ದುರ್ಯೋಧನನು ಸಭಾ
ಸ್ಥಾನದಲ್ಲಿ ಹೋಗುತ್ತಿರುವಾಗ ತಿಳಿಯದೆ ಕಾಲು ಜಾರಿಬಿದ್ದನು.
ಇದನ್ನು ನೋಡಿ, ದ್ರೌಪದಿ ಮೊದಲಾದ ಸ್ತ್ರೀಯರು ಘೊಳ್ಳನೆ ನಕ್ಕರು.
ಈ ಅವಮಾನವು ಅವನ ಮನಸ್ಸಿನಲ್ಲಿ ನಟ್ಟಿತು. ಏನಾದರೂ ಮಾಡಿ,
ಪಾಂಡವರ ಹುಟ್ಟಡಗಿಸಬೇಕೆಂದು ಯೋಚಿಸಿದನು.

ಅವನು ಅಲ್ಲಿಂದ ರಾಜಧಾನಿಗೆ ಹೋಗಿ ತಾನೂ ಹೊಸದಾಗಿ
ಒಂದು ಸಭಾಮಂದಿರವನ್ನು ಕಟ್ಟಿಸಿದನು. ಅದರ ಪ್ರವೇಶೋತ್ಸವ
ಕ್ಕಾಗಿ ಪಾಂಡವರನ್ನು ಕರೆಯಿಸಿದನು. ಅವರು ಬಂದರು. ಸ್ನಾನಾನ್ನ
ಪಾನಾದಿಗಳಿಂದ ಅವರನ್ನು ಸತ್ಕರಿಸಿ ಸಂತೋಷಪಡಿಸಿದನು. ಒಂದು
ದಿನ ವಿನೋದಕ್ಕಾಗಿ, ಜೂಜನ್ನಾಡೋಣ, ಬನ್ನಿ ಎಂದು ಧರ್ಮರಾಯನನ್ನು
ಪ್ರೇರಿಸಿದನು. ವಿನೋದವು ವಿರೋಧವಾಗಿ ಪರಿಣಮಿಸಿತು. ಕೌರ
ವರ ಸೋದರಮಾವನಾದ ಶಕುನಿಯು ಪಗಡೆಯಾಟದಲ್ಲಿ ಬಲುಗಟ್ಟಿ
ಗನು. ಅವನು ದುರ್ಯೋಧನನ ಪಕ್ಷವಾಗಿ ಆಡುವುದಕ್ಕೂ, ಪಾಂ
ಡವರ ಕಡೆ ಧರ್ಮರಾಯನು ಆಡುವುದಕ್ಕೂ ಕುಳಿತರು. ಪಾಂಡ
ವರ ದುರ್ದೈವದಿಂದಲೂ, ಶಕುನಿಯ ಮೋಸದಿಂದಲೂ ಪ್ರತಿಯೊಂದು
ಆಟದಲ್ಲಿಯೂ ಧರ್ಮರಾಯನೇ ಸೋಲುತ್ತಾ ಬಂದನು. ಪಾಂಡವರ

ಆಸ್ತಿಯೆಲ್ಲಾ ಒಂದೊಂದಾಗಿ ಸೋಲಲ್ಪಟ್ಟಿತು. ಕಡೆಗೆ ದ್ರೌಪದಿ
ಯನ್ನು ಕೂಡ ಜೂಜಿನಲ್ಲಿ ಸೋತುಬಿಟ್ಟನು. ನೀಚನಾದ ದುರ್ಯೋ
ಧನನು ಈಕೆಯ ವಸ್ತ್ರಾಪಹರಣಮಾಡಿ ಮಾನಭಂಗಮಾಡಿರೆಂದು
ಅಪ್ಪಣೆಮಾಡಿದನು. ಅಂತಹ ಆಪತ್ಕಾಲದಲ್ಲಿ ಆ ಸಭೆಯಲ್ಲಿದ್ದ ವೀರ
ರಲ್ಲಿ ಯಾರೂ ಆಕೆಯನ್ನು ಕಾಪಾಡಲಿಲ್ಲ. ಆಗ ಆ ಸಾಧ್ವಿಯು ತನ್ನ
ಮನಸ್ಸಿನಲ್ಲಿ ದೀನರಕ್ಷಕನಾದ ಶ್ರೀ ಕೃಷ್ಣನನ್ನು ಧ್ಯಾನಿಸಿ “ಸ್ವಾಮಿ!
ಜಗದುದ್ಧಾರಕ ! ನನ್ನ ಮಾನವನ್ನು ರಕ್ಷಿಸು” ಎಂದು ಮೊರೆಯಿ
ಟ್ಟಳು. ಭಕ್ತವತ್ಸಲನಾದ ದೇವರು ಆಕೆಯಲ್ಲಿ ಕರುಣಿಸಿ, ಉಟ್ಟಿದ್ದ
ಸೀರೆಯು ಅಕ್ಷಯವಾಗಲೆಂದು ಹರಸಿದನು. ದುಶ್ಶಾಸನನು ಸೀರೆ
ಯನ್ನು ಸೆಳೆದು ಹಾಕುತ್ತಾ ಬಂದ ಹಾಗೆಲ್ಲಾ ಪರಮಾತ್ಮನ ಅನುಗ್ರಹ
ದಿಂದ ಅದು ಹೆಚ್ಚುತ್ತಲೇ ಬಂದಿತು. ಕೊನೆಗೆ ಕೌರವನೇ ಬೇಸತ್ತು
ಸುಮ್ಮನಾದನು. ಪಾಂಡವರಿಗೆ ರೋಷವು ಹೆಚ್ಚಿತು.

ಧೃತರಾಷ್ಟ್ರನು ಇದನ್ನೆಲ್ಲಾ ಕಂಡು ತನ್ನ ಮಕ್ಕಳನ್ನು ಗದ
ರಿಸಿ, ನೀವು ಈ ಜೂಜನ್ನಾಡಿದುದೇ ತಪ್ಪು, ನೀವು ಗೆದ್ದುಕೊಂಡ ವಸ್ತು
ಗಳನ್ನೆಲ್ಲಾ ದ್ರೌಪದೀಸಹಿತವಾಗಿ ಪಾಂಡವರಿಗೆ ಹಿಂದಕ್ಕೆ ಕೊಟ್ಟುಬಿ
ಡಿರೆಂದು ಕಟ್ಟುಮಾಡಿದನು. ಅದರಂತೆ ಪಾಂಡವರ ಆಸ್ತಿಯೆಲ್ಲಾ
ಹಿಂದಕ್ಕೆ ಬಂತು.

ಆ ಮೇಲೆ ಪುನಃ ಒಂದು ಜೂಜನಾಡಬೇಕೆಂದು ಶಕುನಿಯು
ಪ್ರೇರೇಪಿಸಿದನು. “ಈ ಜೂಜಿನ ಪಣವು ವಿಲಕ್ಷಣವಾಗಿದ್ದಿತು. ಈ
ಜೂಜಿನಲ್ಲಿ ಗೆದ್ದವರೇ ಸಮಸ್ತರಾಜ್ಯವನ್ನೂ ಆಳತಕ್ಕದು. ಸೋತ
ವರು ನಾರು ವಸ್ತ್ರಗಳನ್ನು ಧರಿಸಿ, ಕಾಡಿಗೆ ಹೋಗಿ, ಅಲ್ಲಿ ಹನ್ನೆ
ರಡು ವರ್ಷ ವಾಸಮಾಡಬೇಕು. ಆ ಮೇಲೆ ಒಂದು ವರ್ಷಕಾಲ
ತಮ್ಮ ಗುರುತನ್ನು ಇತರರು ತಿಳಿಯದ ಹಾಗೆ ಅಜ್ಞಾತವಾಸ ಮಾಡ

ಬೇಕು. ಈ ಅವಧಿಯಲ್ಲಿ ಅವರನ್ನು ಕಂಡು ಹಿಡಿದರೆ ಮತ್ತೆ ಹನ್ನೆರಡು ವರ್ಷ ವನವಾಸ ಮಾಡಬೇಕು.''

ಈ ಆಟದಲ್ಲಿಯೂ ಧರ್ಮರಾಯನೇ ಸೋತು ಬಿಟ್ಟನು. ಆತನು ಧರ್ಮಜ್ಞನು. ಸತ್ಯವನ್ನು ತಪ್ಪತಕ್ಕವನಲ್ಲ. ಆಗ ಯಾವ ಮಾತನ್ನೂ ಆಡದೆ ತನ್ನ ತಮ್ಮಂದಿರನ್ನೂ ಹೆಂಡತಿಯನ್ನೂ ಕರೆದುಕೊಂಡು ಕಾಡಿಗೆಹೋದನು. ಅಲ್ಲಿ ಆತನ ಸಂಗಡ ಸಾವಿರಾರು ಮಂದಿ ಬ್ರಾಹ್ಮಣರೂ ಋಷಿಗಳೂ ವಾಸಮಾಡಿಕೊಂಡಿದ್ದರು. ಪ್ರಾರಬ್ಧಕರ್ಮವನ್ನನುಭವಿಸದೆ ತೀರದೆಂದು ಪಾಂಡವರು ತಿಳಿದು ದೇವರ ಧ್ಯಾನಮಾಡುತ್ತಾ ಆತನನ್ನೇ ನಂಬಿದ್ದರು. ಇದರಿಂದ ವನವಾಸವು ಅವರಿಗೆ ಕಷ್ಟವಾಗಿ ತೋರಲಿಲ್ಲ. ಸಜ್ಜನರ ಸಹವಾಸ, ಸತ್ಕಥಾಕಾಲಕ್ಷೇಪ ಭಗವನ್ನಾಮಸ್ಮರಣೆ ಇವುಗಳಿಂದ ಹನ್ನೆರಡು ವರ್ಷಗಳೂ ಸುಖವಾಗಿ ಕಳೆದುಹೋದವು. ಹದಿಮೂರನೆಯ ವರ್ಷದಲ್ಲಿ ಏನು ನಡೆಯಿತೆಂಬುದು ಈ ವಿರಾಟಪರ್ವದಲ್ಲಿ ಹೇಳಲ್ಪಡುವುದು.

—ಇದು ಪೂರ್ವಕಥಾಸಾರ



ಭಾರತ ಕಥಾಸಂಗ್ರಹ.

# ವಿರಾಟ ಪರ್ವ



## ಮೊದಲನೆಯ ಸಂಧಿ.

ಪಾಂಡವರು ಸತ್ಯವನ್ನು ರಕ್ಷಿಸಿ, ವನವಾಸವನ್ನು ಮುಗಿಸಿದ ಮೇಲೆ ವಿರಾಟರಾಯನ ಪಟ್ಟಣಕ್ಕೆ ಬಂದು, ಆ ದೊರೆಯ ಆಶ್ರಯವನ್ನು ಹೊಂದಿದರು.

ಆ ಒಳಿಕ ಧರ್ಮರಾಯನು ವನವಾಸದಲ್ಲಿ ತನ್ನ ಸಂಗಡ ಇದ್ದ ಬ್ರಾಹ್ಮಣರನ್ನೂ ಮುನಿಜನರನ್ನೂ ನೀವು ಬೇಕಾದ ಕಡೆಗೆ ಹೋಗಿ ಬರುವುದೆಂದು ಕಳುಹಿಸಿಬಿಟ್ಟನು. ಅಜ್ಞಾತವಾಸ ಮಾಡುವಾಗ ಇವರನ್ನು ಸಂಗಡ ಇಟ್ಟುಕೊಂಡಿರುವುದು ಕಷ್ಟವೆಂಬುದೇ ಇದಕ್ಕೆ ಕಾರಣ. ಅವರು ಹೊರಟು ಹೋದ ಬಳಿಕ ಆತನು ಸರ್ವದೇವತೆಗಳ ಲ್ಲಿಯೂ ಪ್ರಮುಖನಾದ ಯಜ್ಞೇಶ್ವರನಿಗೆ ಪ್ರದಕ್ಷಿಣೆ ಮಾಡಿದನು. ಆಗ ಶುಭಶಕುನಗಳಾದುವು. ತಮ್ಮ ಅಜ್ಞಾತವಾಸವು ನಿರ್ವಿಘ್ನವಾಗಿ ನೆರವೇರುವುದಕ್ಕೆ ಇದೇ ಸೂಚನೆ. ಅನಂತರ ಪಾಂಡವರು ದ್ರೌಪದೀ ಸಹಿತವಾಗಿ ಹೊರಟು ಬರುತ್ತಿದ್ದರು. ಮಾರ್ಗದಲ್ಲಿ ಒಂದು ದೊಡ್ಡ ಆಲದ ಮರವಿದ್ದಿತು. ಅದರಡಿಯಲ್ಲಿ ಸ್ವಲ್ಪಹೊತ್ತು ಕುಳಿತುಕೊಂಡು ಬಳಲಿಕೆಯನ್ನು ಪರಿಹರಿಸಿಕೊಂಡರು. ಆ ಮೇಲೆ ಸಹೋದರರಲ್ಲಿ ಈ ರೀತಿಯಾಗಿ ಸಂಭಾಷಣೆ ನಡೆಯಿತು.

ಧರ್ಮರಾಯ—ಬಾಂಧವರೇ! ನಮ್ಮ ಪ್ರತಿಜ್ಞೆಯಂತೆ ಹನ್ನೆರಡು ವರುಷ ವನವಾಸ ಮಾಡಿ ಮುಗಿಸಿದೆವು. ಜೂಜಿನಪಣಕ್ಕೆ ಅನುಸಾರವಾಗಿ ಇನ್ನು ಒಂದು ವರುಷಕಾಲ ನಮ್ಮ ಗುರುತು ಯಾರಿ

ಗೂ ತಿಳಿಯದ ಹಾಗೆ ನಮ್ಮರೂಪವನ್ನು ಮರೆಮಾಡಿಕೊಂಡಿರಬೇಕಾಗಿದೆ. ಎಲ್ಲಿ ಇರೋಣ? ಹೇಗೆ ಕಾಲಹಾಕೋಣ? ನಾಲ್ಕು ದಿಕ್ಕುಗಳಲ್ಲಿ ಎತ್ತ ಹೋದರೂ ನಮ್ಮ ಗುರುತು ತಿಳಿದೇ ಹೋಗುವುದು. ಉತ್ತರ ದಿಕ್ಕಿಗೆ ಹೋಗೋಣವೇ? ಅದೆಲ್ಲಾ ನಮ್ಮ ಶತ್ರುಗಳಾದ ಕೌರವರಿಗೇ ಸೇರಿದೆ. ಅಲ್ಲಿ ಹೇಗಾದರೂ ನಮ್ಮನ್ನು ಅವರು ಕಂಡು ಹಿಡಿಯುವರು. ಪೂರ್ವದಕಡೆಗೆ ಹೋಗೋಣವೆಂದರೆ ಆ ದೇಶಗಳ ಅರಸರು ಕೌರವರಿಗೆ ಆಪ್ತರು. ನಮ್ಮ ಗುರುತು ಸ್ವಲ್ಪಸಿಕ್ಕಿದರೂ ಅವರಿಗೆ ತಿಳಿದು ಹೋಗುವುದು. ಇದರಿಂದ ಆ ಕಡೆ ಹೋಗುವುದು ನಮಗೆ ಅನುಕೂಲವಲ್ಲ. ದಕ್ಷಿಣ ಕಡೆ ನೋಡೋಣ. ಆ ಪ್ರಾಂತದ ಜನರು ನಮ್ಮನ್ನು ಚೆನ್ನಾಗಿ ಬಲ್ಲರು. ಇದರಿಂದ ಸುಲಭವಾಗಿ ನಮ್ಮ ಗುರುತು ಹಿಡಿದು ಕೌರವರಿಗೆ ತಿಳಿಸುವರು. ಇದೂ ಸರಿಯಲ್ಲ. ಪಶ್ಚಿಮ ದಿಕ್ಕಿಗೆ ಹೋಗೋಣವೇ! ಆ ದೇಶದ ಅರಸರು ದುರ್ಬಲರು. ಕೌರವರಿಗೆ ಹೆದರಿ ನಡೆಯುತ್ತಿರುವರು. ನಮ್ಮ ಸ್ಥಿತಿ ತಿಳಿದುಬಿಟ್ಟರೆ ಅವರು ನಮ್ಮನ್ನು ರಕ್ಷಿಸಲಾರರು. ಈ ಒಂದು ವರುಷದ ಅವಧಿಯಲ್ಲಿ ಶತ್ರುಗಳು ನಮ್ಮನ್ನು ಕಂಡು ಹಿಡಿದರೆ ನಮಗೆ ಪುನಃ ವನವಾಸ ತಪ್ಪದು. ನನಗೆ ಒಂದೂ ಬಗೆ ಹರಿಯದೆ ಇದೆ. ನಿಮ್ಮ ಯೋಚನೆಯೇನು ?

ಅರ್ಜುನ:—ಅಣ್ಣಯ್ಯಾ! ಅಲ್ಪ ಬುದ್ಧಿಯುಳ್ಳ ನನಗೆ ತೋರಿದ್ದನ್ನು ಅರಿಕೆಮಾಡುತ್ತೇನೆ. ಕೌರವರಿಗೆ ನಾವು ವಿರೋಧಿಗಳಾದ್ದುದರಿಂದ ಅವರ ಮಿತ್ರರ ರಾಜ್ಯವು ನಮಗೆ ಕ್ಷೇಮಕರವಲ್ಲ. ಅವರ ಶತ್ರುಗಳ ರಾಜ್ಯವನ್ನು ಸೇರಿದರೆ ನಾವು ಸುರಕ್ಷಿತರಾಗಿರಬಹುದು. ಅಂತಹ ರಾಜ್ಯ ಯಾವುದೆಂದು ಯೋಚಿಸಿದೆನು. ಕೌರವರಲ್ಲಿ ಹಗೆ ಕಟ್ಟಿಕೊಂಡು ಬಲಿಷ್ಠನಾದ ಕೀಚಕನು ತನ್ನ ಭಾವನಾದ ವಿರಾಟರಾಯನಲ್ಲಿ ಹೋಗಿ ಸೇರಿದ್ದಾನೆ. ಅವನು ತುಂಬಾ ಸಮರ್ಥನು. ಅವನ ಸಹಾಯದಿಂದ ವಿರಾಟರಾಯನು ಕೌರವರನ್ನು ಲೆಕ್ಕಿಸದೆ ಇದ್ದಾನೆ.

ಕರ್ಣ, ತ್ರಿಗರ್ತ ಮೊದಲಾದ ಕೌರವನ ಕಡೆಯ ವೀರರೂ ಕೂಡ ಅವನಿಗೆ ಹೆದರುವರು. ಅವನ ರಾಜಧಾನಿಯಾದ ಮತ್ಸ್ಯನಗರಿಯು ನಮ್ಮ ಅಜ್ಞಾತವಾಸಕ್ಕೆ ತಕ್ಕುದೆಂದು ನನಗೆ ತೋರುತ್ತದೆ.

ಭೀಮ—ಇದು ಸರಿ. ಇವನ ಮಾತು ಒಪ್ಪತಕ್ಕದ್ದು. ಕೀಚಕನು ಬಲಶಾಲಿಯೆಂಬುದು ಲೋಕಪ್ರಸಿದ್ಧವಾಗಿದೆ. ಕೌರವನೂ ಅವನಿಗೆ ಹೆದರುವನು. ಅಲ್ಲಿ ನಾವು ಈ ಕಾಲವನ್ನು ಕಳೆಯಬಹುದೆಂದು ನಾನು ತಿಳಿಯುವೆನು.

ನಕುಲ ಸಹದೇವರು—ಹಿರಿಯರ ಮಾತು ಯುಕ್ತಿ ಯುಕ್ತವಾಗಿದೆ. ಹಾಗೆಯೇ ಮಾಡಬಹುದು.

ಧರ್ಮರಾಯ—ನಿಮ್ಮ ಅಭಿಪ್ರಾಯದಂತೆ ವಿರಾಟರಾಯನ ಪಟ್ಟಣದಲ್ಲಿ ಅಜ್ಞಾತವಾಸಮಾಡಬಹುದು. ಆದರೆ ಅಲ್ಲಿ ನಾವು ಗುಟ್ಟಾಗಿರುವುದು ಹೇಗೆ? ಸ್ವಾತಂತ್ರ್ಯವನ್ನು ಬಿಟ್ಟು ಪರಸೇವೆ ಮಾಡಿಕೊಂಡಿರಬೇಕು. ನಿಜರೂಪಗಳನ್ನು ಬದಲಾಯಿಸಿಕೊಳ್ಳಬೇಕು. ನಾವು ಬುದ್ಧಿವಂತರೆಂತಲೂ ಶೂರರೆಂತಲೂ ಅಹಂಕಾರಪಡದೆ ಕೋಪತಾಪಗಳನ್ನು ಬಿಟ್ಟು ಸೈರಿಸಿಕೊಂಡಿರಬೇಕು. ನಿಮ್ಮ ಕೈಯಿಂದ ಈ ಕೆಲಸವಾಗುವುದೆ? ನನಗೇನೋ ದೊಡ್ಡ ಯೋಚನೆ ಹತ್ತಿದೆ.

ಭೀಮ—ಅಣ್ಣಯ್ಯಾ! ಹೀಗೇಕೆ ಹೇಳುತ್ತೀರಿ. ನಿಮ್ಮ ಮಾತು ನಡಿಸದೆ ಹೋದರೆ ನಾವಿದ್ದು ಫಲವೇನು? ಹಿರಿಯಣ್ಣನು ತಂದೆಗೆ ಸಮಾನನೆಂದು ಶಾಸ್ತ್ರಗಳು ಕೂಗಿ ಹೇಳುತ್ತವೆ. ನಮಗೆ ನೀವೇ ತಂದೆ, ನೀವೇ ತಾಯಿ, ನೀವೇ ಗುರುವು ಎಂದು ತಿಳಿದಿದ್ದೇವೆ. ಹೇಗಾದರೂ ನಿಮ್ಮ ಸತ್ಯ ಪ್ರತಿಜ್ಞೆಯು ನೆರವೇರಿದರೆ ನಾವೆಲ್ಲರೂ ಧನ್ಯರು. ನಿಮ್ಮ ಮಾತನ್ನು ಮೀರಲಾರೆವು. ಚಿಂತಿಸಬೇಡಿರಿ.

ಅರ್ಜುನ—ಅಣ್ಣಾ, ಏಕೆ ಯೋಚಿಸುತ್ತೀರಿ? ನಿಮ್ಮ ಆಜ್ಞೆಯನ್ನು ನಿರೀಕ್ಷಿಸುತ್ತಿದ್ದೇವೆ. ಯಾವ ಕೆಲಸ ಮಾಡಬೇಕೆಂದರೂ

ಶಿರಸಾವಹಿಸಿ ನಡಿಸುವೆವು. ಪ್ರತಿಜ್ಞಾಪಾಲನೆಯು ಪರಮಧರ್ಮ. ಜಾಗ್ರತೆಯಲ್ಲಿ ನಮ್ಮ ರೂಪಗಳನ್ನು ಬದಲಾಯಿಸಿಕೊಳ್ಳಲೇಬೇಕಷ್ಟೆ! ತಾವು ಯಾವ ರೂಪದಿಂದ ಇರಬಲ್ಲಿರೋ ಅಪ್ಪಣೆ ಕೊಡಿಸಿದರೆ ನಾವು ನಮಗೆ ತಕ್ಕರೂಪಗಳನ್ನು ತಮ್ಮಲ್ಲಿ ಅರಿಕೆಮಾಡಿಕೊಳ್ಳುವೆವು.

ಧರ್ಮರಾಯ—ತಮ್ಮಾ! ನಿನ್ನಮಾತು ನಿಜ. ಸುಮ್ಮನೆ ಕೂತುಕೊಳ್ಳುವ ಕಾಲವಲ್ಲ. ನಾನು ಕರ್ಮನಿಷ್ಠನು. ಬ್ರಾಹ್ಮಣವೇಷವನ್ನು ತಾಳುವೆನು. ಸನ್ಯಾಸವು ನನಗೆ ಇಷ್ಟವಾದುದು. ನಾನು ಯತಿವೇಷದಿಂದ ವಿರಾಟರಾಯನ ಬಳಿ ಒಂದು ವರುಷಕಾಲ ಇರುವೆನು.

ಭೀಮ—ಆರ್ಯರೇ! ತಮ್ಮ ಮಾತು ಸಹಜ. ಈ ಯೋಚನೆಯು ತಮ್ಮ ಗೌರವಕ್ಕೂ ಸಚ್ಚರಿತ್ರೆಗೂ ತಕ್ಕುದು. ನಾನು ತಮ್ಮಂತೆ ಸನ್ಯಾಸವೇಷ ಧರಿಸಿಕೊಂಡು ಕಾಲಕಳೆಯುವುದು ಅಸಾಧ್ಯ. ಮಿತಾಹಾರ, ಅಧ್ಯಯನ ಮುಂತಾದ ನಿರ್ಬಂಧಗಳಿಗೆ ಸಿಕ್ಕಿಕೊಂಡು ಹೊಟ್ಟೆತುಂಬಾ ಅನ್ನವಿಲ್ಲದೆ ಕಾಲಕಳೆಯುವುದು ನನ್ನಿಂದಾಗತಕ್ಕುದಲ್ಲ. ನನ್ನ ಭುಜಬಲವೂ ಬುದ್ಧಿಬಲವೂ ಇದರಿಂದ ಕುಗ್ಗಿಹೋಗಬಹುದು. ನಮ್ಮ ತಾಯಿಯು ನನ್ನ ಹೊಟ್ಟೆಬಾಕತನವನ್ನು ನೋಡಿ, ಏಕಚಕ್ರಪುರದಲ್ಲಿದ್ದಾಗ ಭಿಕ್ಷಾನ್ನದಲ್ಲಿ ಅರ್ಧಭಾಗ ನನಗೆ ಕೊಟ್ಟು ಮಿಕ್ಕ ಅರ್ಧವನ್ನು ನಿಮ್ಮ ಐವರಿಗೂ ಕೊಡುತ್ತಿರಲಿಲ್ಲವೇ! ನನಗೆ ಅದೇ ಅಭ್ಯಾಸ ಬೆಳೆದುಹೋಗಿದೆ. ಅಡಿಗೆಯಮನೆಯೇ ನನಗೆ ತಕ್ಕುದು. ನಾನು ವಿರಾಟರಾಯನ ಪಾಕಶಾಲೆಯಲ್ಲಿ ಸೇರಿ, ಕಷ್ಟಪಟ್ಟು ಕೆಲಸಮಾಡಿ, ತಕ್ಕಷ್ಟು ಆಹಾರ ಸಂಪಾದನೆ ಮಾಡಿಕೊಂಡು ಕಾಲವನ್ನು ನೂಕುವೆನು.

ಅರ್ಜುನ—ಅಣ್ಣಾ! ನಾನು ನಿಮ್ಮಂತೆ ಸನ್ಯಾಸಿಯೂ ಆಗಲಾರೆನು. ಭೀಮಸೇನನಂತೆ ಅಡಿಗೆ ಮಾಡುವ ಅಭ್ಯಾಸವೂ ನನ

ಗಿಲ್ಲ. ನನಗೆ ನಾಟ್ಯದಲ್ಲಿ ಅಭಿರುಚಿ ಹೆಚ್ಚು, ಭರತ ಶಾಸ್ತ್ರವನ್ನು ಚೆನ್ನಾಗಿ ಕಲಿತಿರುವೆನು. ಇದಕ್ಕೆ ಅವಕಾಶ ನೋಡುತ್ತೇನೆ (ಸ್ಮರಿಸಿ) ಆಹಾ! ಒಳ್ಳೇಸಮಯಕ್ಕೆ ನೆನಪಿಗೆ ಬಂತು. ಹಿಂದೆ ಒಂದು ಸಾರಿ ನಾನು ಸ್ವರ್ಗಕ್ಕೆ ಹೋಗಿದ್ದೆನು. ಅಲ್ಲಿ ಇಂದ್ರನ ಸಭೆಯಲ್ಲಿ ಒಂದು ದಿನ ದೇವವೇಶ್ಯೆಯಾದ ಊರ್ವಶಿಯು ನರ್ತನ ನಡೆಯುತ್ತಿದ್ದಿತು. ನಾನು ಅಕ್ಕರೆಯಿಂದ ಅದನ್ನೇ ನೋಡುತ್ತಿದ್ದೆನು. ಅದನ್ನು ಕಂಡು ಆಕೆಯು ವೇಶ್ಯೆಯರ ಸ್ವಭಾವಕ್ಕೆ ತಕ್ಕಂತೆ ಅಲಂಕಾರ ಮಾಡಿಕೊಂಡು ಆ ರಾತ್ರಿ ನಾನಿದ್ದ ಸ್ಥಳಕ್ಕೆ ಬಂದಳು. ಅವಳನ್ನು ನೋಡಿ ನಾನು ಬೆರಗಾಗಿ ಬಂದ ಕಾರಣವನ್ನು ಕೇಳಿದೆನು. ನಿನ್ನಲ್ಲಿ ಸುಖಪಡಲಿಕ್ಕೆ ಬಂದೆನೆಂದು ಅವಳು ಹೇಳಿದಳು. ಅದಕ್ಕೆ ನಾನು "ಅಮ್ಮಾ! ಪರಸ್ತ್ರೀಗಮನವು ಪಾಪಹೇತುವು, ನೀನು ನನ್ನ ತಂದೆಯೊಂದಿಗೆ ಇದ್ದುದರಿಂದ ನನಗೆ ತಾಯಿಯಾಗಬೇಕು. ನನ್ನನ್ನು ಕಾಮಿಸಬೇಡ, ಕ್ಷಮಿಸು" ಎಂದೆನು. ಅದಕ್ಕವಳು ಕೋಪಿಸಿ "ಛೀ! ಹೇಡಿ! ನಾನಾಗಿ ಮೋಹಿಸಿಬಂದರೂ ನನ್ನಲ್ಲಿ ಕ್ರೀಡಿಸದೆ ತಿರಸ್ಕರಿಸಿದೆ. ನೀನು ಎಂತಹ ಗಂಡಸು! ಶಿಖಂಡಿಯಾಗಿ ಹೋಗು," ಎಂದು ಶಪಿಸಿದಳು. ಈ ಸುದ್ದಿ ಇಂದ್ರನಿಗೆ ತಿಳಿಯಿತು. ಆತನು ನನ್ನನ್ನು ನೋಡಿ, "ಕಂದಾ! ಚಿಂತಿಸಬೇಡ. ಶಾಪವನ್ನು ಕಳೆಯುವ ಶಕ್ತಿ ನನಗಿಲ್ಲ; ಆದರೂ ಅದನ್ನು ಕಡಿಮೆ ಮಾಡಬಲ್ಲೆನು. ಊರ್ವಶಿಯು ನಿನಗೆ ಕೊಟ್ಟ ಶಾಪವನ್ನು ಒಂದುವರುಷ ಮಾತ್ರ ನೀನು ಅನುಭವಿಸು. ನಿನಗೆ ಬೇಕಾದ ವೇಳೆಯಲ್ಲಿ ನನ್ನನ್ನು ನೆನೆದು ಈ ರೂಪವನ್ನು ಪಡೆಯಬಹುದು," ಎಂದು ಹೇಳಿದ್ದನು. ಈಗ ಸರಿಯಾದ ಕಾಲವಾಗಿದೆ. ನಾನು ನಪುಂಸಕ ರೂಪವನ್ನು ಪಡೆದು ರಾಯನ ಅಂತಃಪುರದಲ್ಲಿ ಸೇರಿ ರಾಜಪುತ್ರಿಯರಿಗೆ ನಾಟ್ಯವನ್ನು ಕಲಿಸಿಕೊಂಡು ಇರುವೆನು.

ದುರ್ಗಾದೇವಿಯನ್ನು ಭಕ್ತಿಯಿಂದ ಧ್ಯಾನಿಸಿದರು. ತತ್‍ಕ್ಷಣದಲ್ಲಿ ಯೇ ಆ ಮಹಾದೇವಿಯು ಪ್ರತ್ಯಕ್ಷವಾಗಿ ಬಂದು ನಿಂತಳು.

ಪಾಂಡವರು—ಲೋಕಮಾತೆಯೇ! ನಿನಗೆ ಅನಂತ ನಮಸ್ಕಾರಗಳು. ನಮ್ಮ ಪ್ರತಿಜ್ಞೆಯಂತೆ ಹನ್ನೆರಡು ವರುಷ ವನವಾಸವು ಪೂರಯಿಸಿತು. ಒಂದು ವರುಷಕಾಲ ಯಾರಿಗೂ ತಿಳಿಯದಹಾಗೆ ಗುಟ್ಟಾಗಿ ಕಾಲಕಳೆಯಬೇಕಾಗಿದೆ. ಈ ಅವಧಿಯಲ್ಲಿ ನಮ್ಮ ಗುರುತು ಇತರರಿಗೆ ತಿಳಿಯದಹಾಗೆ ಅನುಗ್ರಹಿಸು. ನಮಗೆ ಉಚಿತಗಳಾದ ವೇಷಗಳನ್ನು ಗೊತ್ತುಮಾಡಿಕೊಂಡಿದ್ದೇವೆ. ಅವುಗಳನ್ನು ಸುಲಭ ವಾಗಿ ಪಡೆಯುವಂತೆ ಕರುಣಿಸಬೇಕೆಂದು ಬೇಡುತ್ತೇವೆ.

ದುರ್ಗಾ—ಮಕ್ಕಳಿರಾ! ನಿಮ್ಮ ನಿಶ್ಚಲಭಕ್ತಿಗೆ ಮೆಚ್ಚಿದೆನು. ನೀವು ಬಯಸಿದ ರೂಪಗಳು ನಿಮಗೆ ಬರುವುವು; ಅಜ್ಞಾತವಾಸವು ನಿರಾತಂಕವಾಗಿ ನೆರವೇರುವುದು. ಮುಂದೆ ನಿಮಗೆ ಶುಭವುಂಟಾ ಗುವುದು. (ಎಂದು ಅನುಗ್ರಹಿಸಿ ಅದೃಶ್ಯಳಾದಳು.)

ಆ ಬಳಿಕ ಅವರೆಲ್ಲರೂ ಅಲ್ಲಿಂದ ದಕ್ಷಿಣಕ್ಕೆ ಹೊರಟು ಸ್ವಲ್ಪ ದೂರ ನಡೆದು ಪಶ್ಚಿಮಕ್ಕೆ ತಿರುಗಿ ಹೊರಟರು. ಅವರು ಮಾರ್ಗ ಮಧ್ಯದಲ್ಲಿ ಸಿಕ್ಕಿದ ದುಷ್ಟಮೃಗಗಳನ್ನು ಬೇಟೆಯಾಡಿಕೊಂಡು ಹೋದರು. ದಾರಿಯಲ್ಲಿ ವಸಿಷ್ಠಮುನಿಗಳ ಆಶ್ರಮವು ಸಿಕ್ಕಿತು. ಅಲ್ಲಿದ್ದ ಋಷಿಗಳು ಇವರಿಗೆ ಅತಿಥಿ ಸತ್ಕಾರಮಾಡಿ, ತಮ್ಮ ಕಷ್ಟಗಳನ್ನು ಹೇಳಿಕೊಂಡರು. ಪಾಂಡವರು ಅವರ ಕೊರತೆಗಳನ್ನು ಪರಿಹರಿಸಿ, ಅಲ್ಲಿಂದ ಮುಂದಕ್ಕೆ ಹೊರಟರು. ಬಹುದೂರ ನಡೆದ ಬಳಲಿಕೆ ಯಿಂದ ದ್ರೌಪದಿಯು ಮುಂದಕ್ಕೆ ಅಡಿಯಿಡದೆ ನಿಂತುಬಿಟ್ಟಳು. ಆಗ ಧರ್ಮರಾಯನು ಆಕೆಯನ್ನು ಸ್ವಲ್ಪದೂರ ಎತ್ತಿಕೊಂಡು ಬರುವು ದೆಂದು ಅಪ್ಪಣೆಮಾಡಿದನು. ನಕುಲನು ಸ್ವಲ್ಪ ದೂರವೂ, ಅರ್ಜುನನು ಸ್ವಲ್ಪ ದೂರವೂ ಆಕೆಯನ್ನು ಎತ್ತಿಕೊಂಡು ನಡೆದರು. ವಿರಾಟ

ನಗರವು ಹತ್ತಿರವಾಯಿತು. ಅದರ ಹೆಸರು ಮತ್ಸ್ಯನಗರ. ಆ ಪಟ್ಟಣದ ಹತ್ತಿರ ಒಂದು ಉದ್ಯಾನವನ; ಅದರ ಹತ್ತಿರ ಒಂದು ಸ್ಮಶಾನ, ಅಲ್ಲಿ ಎತ್ತರವಾದ ಬನ್ನಿಯ ಮರವೊಂದಿತ್ತು. ಪಾಂಡವರು ಅಲ್ಲಿನಿಂತು ತಮ್ಮ ಆಯುಧಗಳನ್ನೂ ಧನುರ್ಬಾಣಗಳನ್ನೂ ದೊಡ್ಡದಾದ ಒಂದು ಮೃಗದಚರ್ಮದಲ್ಲಿ ಅಡಕವಾಗಿ ತುಂಬಿ ಹೆಣದ ಆಕಾರವಾಗಿ ಬಿಗಿದರು. ಅದನ್ನು, ಆ ಮರದ ಕೊನೆಯಲ್ಲಿ ಮರೆಯಾಗಿ ಕಟ್ಟಿಟ್ಟರು. ಆಗ ಧರ್ಮರಾಯನು, ದಿಕ್ಪಾಲಕರನ್ನು ಕುರಿತು—

ಧ.—ಇಂದ್ರಾದಿ ದೇವತೆಗಳಿರಾ! ಕೈಮುಗಿದು ನಿಮ್ಮಗಳನ್ನು ಪ್ರಾರ್ಥಿಸುತ್ತೇನೆ. ಈ ಆಯುಧಗಳೇ ನಮ್ಮ ಸಕಲೈಶ್ವರ್ಯ, ಇವೇ ನಮ್ಮ ನಿಕ್ಷೇಪ. ಒಂದು ವರುಷಕಾಲ ನಾವುಗಳು ಅಜ್ಞಾತವಾಸ ಮಾಡಬೇಕಾಗಿದೆ. ಈ ಕಾಲದಲ್ಲಿ ಇವುಗಳನ್ನು ಕಾಪಾಡುವುದು ನಮ್ಮಿಂದ ಸಾಧ್ಯವಲ್ಲ. ಆದುದರಿಂದ ಇವುಗಳನ್ನು ಇಲ್ಲಿ ಕಟ್ಟಿಟ್ಟಿದ್ದೇವೆ. ಇವುಗಳನ್ನು ನೀವು ದಯಮಾಡಿ ಜೋಪಾನವಾಗಿ ರಕ್ಷಿಸಿಕೊಂಡಿರಬೇಕು. ಈ ಅವಧಿಯಲ್ಲಿ ಇವುಗಳನ್ನು ನಾವು ಅಪೇಕ್ಷಿಸಬೇಕಾದ ಸಂದರ್ಭಗಳು ಬಹುಶಃ ಒದಗವು. ಒಂದುವೇಳೆ ಅಗತ್ಯಬಿದ್ದರೆ ನಾನಾಗಲಿ ಅರ್ಜುನನಾಗಲಿ ಬಂದು ಬೇಡುವೆವು. ಆಗ ಅವುಗಳನ್ನು ಕೊಡಬಹುದು. ಭೀಮಸೇನನು ಶೂರನೇ ಆದರೂ ಸರಳಬುದ್ಧಿಯುಳ್ಳವನು. ಕೋಪಬಂದಾಗ ಇವನಿಗೆ ಸೈರಣೆ ಇರದು. ವೈರಕ್ಕೆ ಪ್ರತೀಕಾರ ಮಾಡಬೇಕೆಂದು ಯತ್ನಿಸಿ, ಆತುರದಿಂದ ಬಂದು ಕೇಳಿದರೆ ನೀವು ಕೊಡದೆ ತಡೆಯಬೇಕು. ಕೊಟ್ಟರೆ ನಮಗೆ ಅಪಾಯಬರುವುದು.

ಭೀಮ.—ಅಣ್ಣಾ! ಚೆನ್ನಾಗಿ ಹೇಳಿದಿರಿ. ಇದಕ್ಕಾಗಿ ನಾನು ಕಳವಳಪಡಬೇಕಾಗಿಲ್ಲ. ನನ್ನ ಗುಣಕ್ಕೆ ತಕ್ಕ ಮಾತುಗಳು ನಿಮ್ಮ ಬಾಯಿಂದ ಹೊರಟು ಬಿಟ್ಟವು. ನಾನು ಇದುವರೆಗೂ ನಿಮ್ಮ

ಮಾತನ್ನು ಮೀರದವನಲ್ಲ. ಮುಂದೆಯೂ ನಿಮ್ಮ ಮಾತಿನಂತೆಯೇ ನಡೆಯತಕ್ಕವನು. ಆದರೆ ಈಗ ನೀವೇ ಕುಂತಿಯ ಮಕ್ಕಳೆಂತಲೂ ನಾನು ದುರ್ಯೋಧನನ ಪಕ್ಷದವನೆಂತಲೂ ನಿಮ್ಮ ಮಾತಿನಿಂದ ಗೊತ್ತಾಯಿತು. ಇದರಲ್ಲಿ ಏನುತಪ್ಪು ? ಆಗಲಿ. ಸಂತೋಷ. ದಿಕ್ಪಾಲಕರು ನಮ್ಮ ಆಯುಧಗಳನ್ನು ಕಾದುಕೊಂಡಿರಲಿ. ಭೂದೇವಿಯು ಇದನ್ನು ನನಗೆ ಕೊಡದೆ ತಡೆದುಬಿಡಲಿ. ನಾನು ಹೇಡಿಯಲ್ಲ. ಈಗಲೇ ಹಸ್ತಿನಾಪುರಕ್ಕೆ ಹೊರಡುವೆನು. ದೇವತೆಗಳ ಮೋರೆಗಳನ್ನು ತಿವಿದು ದಿವ್ಯಾಸ್ತ್ರಗಳನ್ನು ಕಿತ್ತು ತರುವೆನು. ಶತ್ರುಸಂಹಾರಕ್ಕೆ ನನಗೆ ಇದೇ ತಕ್ಕವೇಳೆ.

ಧರ್ಮರಾಯ.—ತಮ್ಮಾ ! ನೀನು ಕಣ್ಣುಕೆಂಪಗೆ ಮಾಡಿಕೊಂಡು ಹಲ್ಲುಮುಡಿ ಕಚ್ಚುತ್ತಾ ಹೀಗೆ ಮಾತನಾಡುತ್ತಿರುವುದನ್ನು ನೋಡಿದರೆ ನಿನಗೆ ಸಿಟ್ಟು ಬಂತೆಂದು ತೋರುತ್ತದೆ. ಈಗ ಕೋಪಕ್ಕೆ ಸಮಯವಲ್ಲ. ಸ್ವಲ್ಪ ಸಮಾಧಾನ ತಂದುಕೊ. ನಿನ್ನಂತಹ ಶೂರರು ಈ ಭೂಮಿಯಲ್ಲಿ ಯಾರೂ ಇಲ್ಲ. ಇದನ್ನು ನಾನು ಚೆನ್ನಾಗಿ ಬಲ್ಲೆನು. ನಿನ್ನ ಬಲವಿಲ್ಲದಿದ್ದರೆ ಅನೇಕ ಸಂದರ್ಭಗಳಲ್ಲಿ ನಾವು ಹೆಸರೇ ಇಲ್ಲದೆ ನಾಶವಾಗುತ್ತಿದ್ದೆವು. ಅರಗಿನ ಮನೆಯಲ್ಲಿ ಸುಟ್ಟು ಹೋಗುತ್ತಿದ್ದ ನಮ್ಮನ್ನು ಹೊರಕ್ಕೆ ಸಾಗಿಸಿ ಕಾಪಾಡಿದವನು ನೀನೇ ಅಲ್ಲವೇ ? ಸೌಗಂಧಿಕಾ ಹರಣಮಾಡಿದವರಾರು? ಕೌರವನಿಗೆ ಎದುರಾಗಿನಿಂತು ಹೋರಾಡಲು ನೀನಲ್ಲದೆ ಮತ್ತಾರಿರುವರು ? ನೀನು ಕೋಪಿಸಿಕೊಂಡರೆ ನಾವು ಸೈರಿಸುವುದು ಹೇಗೆ? ಪ್ರಕೃತ ಸಂದರ್ಭವನ್ನು ನೋಡು. ಒಂದು ವರ್ಷಕಾಲ ನಮ್ಮನ್ನು ಯಾರೂ ತಿಳಿಯದಹಾಗೆ ನಾವು ಇರಬೇಕಲ್ಲವೇ! ಅದಕ್ಕಾಗಿ ನಮಗೆ ಬರುವ ಕಷ್ಟಗಳನ್ನು ನಾವು ಸೈರಣೆಯಿಂದ ತಡೆಯಬೇಕು. ನಮ್ಮ ಆಯುಧಗಳನ್ನು ಬಹಿರಂಗವಾಗಿ ಉಪಯೋಗಿಸಿದರೆ ಯಾರಿಗಾದರೂ

ನಮ್ಮ ಗುರುತು ತಿಳಿದೇಹೋಗುವುದು. ಇದರಿಂದ ನಮಗೆ ಪುನಃ ವನವಾಸಮಾಡುವ ಕಷ್ಟಸಂಭವಿಸುವುದು. "ಕೋಪವೆಂಬುದನರ್ಥಸಾಧನ" ಎಂಬುದನ್ನು ನೀನರಿಯೆಯಾ ?

ಭೀಮ.—ಅಣ್ಣಾ ! ತಮ್ಮ ಮಾತು ನಿಜ. ಹುಡುಗಬುದ್ಧಿಯಿಂದ ದುಡುಕಿ ನುಡಿದ ಮಾತುಗಳನ್ನು ಮನಸ್ಸಿನಲ್ಲಿಡದೆ ಕ್ಷಮಿಸಬೇಕೆಂದು ಬೇಡುತ್ತೇನೆ. ನಿಮಗೆ ಯುಕ್ತವಾಗಿ ತೋರಿದಂತೆ ನಡಿಸಬಹುದು.

ಎಂದು ಭೀಮನು ಸುಮ್ಮನಾದನು. ಆ ಬಳಿಕ ದುರ್ಗೆಯ ಅನುಗ್ರಹದಿಂದ ಅವರವರು ಬಯಸಿದ ವೇಷಗಳು ಆಗಲೇ ಉಂಟಾದುವು. ಧರ್ಮರಾಯನು ಯತಿವೇಷಧರನಾದನು. ಆತನು ಚಿನ್ನದ ದಾಳಗಳು ಮತ್ತು ಪಗಡೆಯಕಾಯಿಗಳು ತುಂಬಿದ ಚೀಲವನ್ನು ಕಂಕುಳಲ್ಲಿಟ್ಟುಕೊಂಡು, ರಾಜಬೀದಿಯಲ್ಲಿ ಹೊರಟುಬರುತ್ತಿದ್ದನು. ಮುಖದಲ್ಲಿ ಯತಿಗಳಿಗೆ ಸಹಜವಾದ ತೇಜೋ ವಿಶೇಷವು ಹೊಳೆಯುತಿದ್ದಿತು. ನೋಡಿದವರೆಲ್ಲಾ ಈತನು ಯಾರೋ ಮಹಾತ್ಮನಿರಬೇಕೆಂದು ತಿಳಿದು, ಅವನಿಗೆ ನಮಸ್ಕರಿಸಿ ಹಿಂಬಾಲಿಸುತ್ತಾ ಬಂದರು. ಅವನು ರಾಜಸಭೆಯನ್ನು ಪ್ರವೇಶಮಾಡಿದನು. ಅವನನ್ನು ನೋಡಿದ ಕೂಡಲೇ ವಿರಾಟರಾಯನು ಎದ್ದುನಿಂತು, ಸತ್ಕರಿಸಿ, ತನ್ನ ಬಳಿಯಲ್ಲಿ ಹಾಕಿದ್ದ ಭದ್ರಾಸನದ ಮೇಲೆ ಕುಳ್ಳಿರಿಸಿಕೊಂಡನು.

ವಿರಾಟ.—ಮಹನೀಯರೇ ! ತೇಜಃಪುಂಜರಾದ ನಿಮ್ಮ ದರ್ಶನದಿಂದ ನಾನೂ ನನ್ನ ಪರಿವಾರವೂ ಧನ್ಯರಾದೆವು. ನನ್ನ ವಂದನೆಗಳನ್ನು ಸ್ವೀಕರಿಸಬೇಕು. ತಾವು ಎಲ್ಲಿಂದ ದಯಮಾಡಿಸಿದಿರಿ ? ನನ್ನಿಂದಾಗತಕ್ಕ ಕಾರ್ಯವೇನಾದರೂ ಇದ್ದರೆ ದಯಮಾಡಿ ತಿಳುಹಿರಿ. ಶಿರಸಾವಹಿಸಿ ನಡೆಯುವೆನು.

ಯತಿ.—ಮಹಾರಾಜ, ನಿನಗೆ ಶುಭವಾಗಲಿ. ನಾವು ಸನ್ಯಾ

ಸಿಗಳು. ಕಂಕಭಟ್ಟರೆಂದು ನಮ್ಮ ಹೆಸರು. ನಾವು ಪೂರ್ವದಲ್ಲಿ ಪಾಂಡವರ ಆಶ್ರಯದಲ್ಲಿದ್ದೆವು. ಧರ್ಮರಾಯನಿಗೂ ನಮಗೂ ಪ್ರಾಣಾಪ್ತ. ಅವರು ಕಾಡಿಗೆ ಹೊರಟುಹೋದರು. ಇಂದ್ರಪ್ರಸ್ಥವು ಹಾಳುಬಿದ್ದಿತು. ನಮ್ಮನ್ನು ಪೋಷಿಸುವರಾರೂ ಇಲ್ಲ. ದೇಶಸಂಚಾರಕ್ಕಾಗಿ ಹೀಗೆ ಹೊರಟು ಬಂದೆವು.

ವಿರಾಟ.—ಹಾ! ಕಷ್ಟ! ಧರ್ಮಿಷ್ಠರಾದ ಪಾಂಡವರಿಗೆ ಇಂತಹ ಕಷ್ಟಬರಬಹುದೆ! ಯಾವನ ಪಾದಕಮಲದಲ್ಲಿ ಸಮಸ್ತ ರಾಜರೂ ಬಂದು ಅಡ್ಡಬಿದ್ದು ಸೇವಿಸುತ್ತಿದ್ದರೋ ಅಂತಹ ಸಾರ್ವಭೌಮರಿಗೆ ವಿಧಿಯು ಈ ಕಷ್ಟತಂದಮೇಲೆ ನಮ್ಮಂತವರ ಪಾಡೇನು? ದೈವಾಜ್ಞೆಯು ತಪ್ಪತಕ್ಕದ್ದಲ್ಲ.

ಯತಿ.—ಮಹಾರಾಜನೇ! ಪ್ರಾರಬ್ಧಕರ್ಮವನ್ನು ಅನುಭವಿಸಿದ ಹೊರತು ಬೇರೆ ಮಾರ್ಗವಿಲ್ಲ. ಕರ್ಮಾನುಸಾರವಾಗಿ ಬುದ್ಧಿಯು ಕೆಲಸಮಾಡುತ್ತಿರುವುದು. ಇದರ ಫಲಾಫಲಗಳಿಗೆ ಕರ್ಮವೇ ಕಾರಣ. ದೈವವನ್ನು ದೂಷಿಸುವುದು ಸರಿಯಲ್ಲ. ಬಂದುದನ್ನನುಭವಿಸಿಯೇ ತೀರಬೇಕು.

ವಿರಾಟ.—ಅದುನಿಜ. ಸುಖದುಃಖಗಳಲ್ಲಿಯೂ ಲಾಭಾಲಾಭಗಳಲ್ಲಿಯೂ ಸಮಬುದ್ಧಿಯುಳ್ಳ ತಮ್ಮಂತಹ ಮಹಾತ್ಮರು ನಿಶ್ಚಿಂತೆಯಿಂದ ಸುಖವಾಗಿರುವಿರಿ. ಸಂಸಾರದಲ್ಲಿ ತೊಳಲುತ್ತಿರುವ ನಮಗೆ ಆ ಜ್ಞಾನಹುಟ್ಟುವುದು ಕಷ್ಟ.

ಯತಿ.—ಅದುದಾಯಿತು. ಸಜ್ಜನರಾದ ಪಾಂಡವರನ್ನು ದೇವರೇ ಕಾಪಾಡುವನು. ನೀನು ಸಾತ್ವಿಕಸ್ವಭಾವದವನೆಂದು ಕೇಳಿ, ಕೆಲವುಕಾಲ ಇಲ್ಲಿರಬೇಕೆಂದು ಬಂದೆವು. ನಿನಗೆ ಸಮ್ಮತವಾದರೆ–

ವಿರಾಟ.—ಮಹನೀಯರೇ! ತಾವು ಇಷ್ಟುದೂರ ಹೇಳಬೇಕೆ! ನನ್ನ ರಾಜ್ಯವೆಲ್ಲಾ ತಮ್ಮದೇ ಎಂದು ತಿಳಿದು ನನ್ನ ಬಳಿಯಲ್ಲಿ

ಸುಖವಾಗಿ ಇರಬಹುದು. ನಾನು ತಮ್ಮ ಅಪ್ಪಣೆಯನ್ನು ಮೀರದೆ ತಮಗೆ ಯಾವ ಕೊರತೆಯೂ ಇಲ್ಲದಂತೆ ನಡಿಸಿಕೊಂಡು ಬರುವೆನು.

ಈ ಮಾತುಗಳನ್ನು ಕೇಳಿ ಧರ್ಮರಾಯನಿಗೆ ಬಲು ಸಂತೋಷ ವಾಯಿತು. ಆ ರಾಯನ ಸಂಗಡ ಸ್ನೇಹಮಾಡಿಕೊಂಡು, ಅವನನ್ನು ಎಡೆಬಿಡದೆ ಕಾಲಕಳೆಯುತ್ತಿದ್ದನು.

ಮರುದಿನ ಭೀಮಸೇನನು ಅಡಿಗೆಯುವನ ವೇಷದಿಂದ ವಿರಾಟ ರಾಯನ ಬಳಿಗೆ ಬಂದು ಕಾಣಿಸಿಕೊಂಡನು.

ವಿರಾಟ.—ಅಯ್ಯಾ! ನೀನು ಯಾರು? ನಿನ್ನ ರೂಪವು ವಿಕಾರವಾಗಿ ಕಾಣಿಸಿದರೂ ಮುಖದಲ್ಲಿ ಒಳ್ಳೆಯ ತೇಜಸ್ಸು ಹೊಳೆ ಯುತ್ತಿರುವುದು. ಎಲ್ಲಿಂದ ಬಂದೆ? ನನ್ನಿಂದಾಗತಕ್ಕ ಕೆಲಸವೇನಾ ದರೂ ಇದ್ದರೆ ಹೇಳು.

ಭೀಮ.—ಮಹಾರಾಜನೆ! ನಾನು ವಾಯುಪುತ್ರನಾದ ಭೀ ಮಸೇನನ ಅರಮನೆಯ ಪಾಕಶಾಲೆಯಲ್ಲಿ ಅಧ್ಯಕ್ಷನಾಗಿದ್ದೆನು. ನನ್ನ ಹೆಸರು ವಲಲನು. ಆ ಪಾಂಡವರು ಅರಣ್ಯವಾಸಕ್ಕೆ ಹೊರಟುಹೋ ದರು. ನನಗೆ ಅನುಕೂಲತಪ್ಪಿತು. ಗುಣಗ್ರಾಹಿಯಾದ ದಣಿಯಲ್ಲಿ ಸೇವೆಮಾಡಿಕೊಂಡಿರಬೇಕೆಂದು ಹೊರಟು ಬಂದೆನು.

ವಿರಾಟ.—ಅಯ್ಯಾ! ಬಹುಸಂತೋಷ. ನಿನ್ನಂತವನಿಗೆ ತಕ್ಕ ಉದ್ಯೋಗವನ್ನು ಕೊಡದೆ ಮತ್ತಾರಿಗೆ ಕೊಡಬೇಕು? ನಿನಗೆ ಯಾವಯಾವ ವಿದ್ಯೆಯಲ್ಲಿ ಪರಿಚಯವಿರುವುದು? ಯಾವ ವೃತ್ತಿಯಲ್ಲಿ ಪ್ರವೇಶಿಸಬೇಕೆಂಬ ಅಭಿಲಾಷೆಯುಂಟು? ತಿಳಿಸಿದರೆ ನಿನ್ನ ಇಷ್ಟಾನು ಸಾರ ನಡಿಸಬಹುದು.

ಭೀಮ.—ಪ್ರಭುವೇ! ಆತ್ಮಪ್ರಶಂಸೆಯು ದೋಷಾವಹವಾ ದದ್ದು. ಆದರೂ ಗುರುತುಪರಿಚಯಗಳಿಲ್ಲದಕಡೆ ತಮ್ಮಯೋಗ್ಯತೆಯ ನ್ನು ಹೇಳಿಕೊಳ್ಳದಿದ್ದರೆ ಉಪಾಯವಿಲ್ಲ. ನಾನು ಎಲ್ಲರಿಗಿಂತಲೂ

ಬಲಶಾಲಿಯೆಂದು ತಿಳಿದುಕೊಂಡಿದ್ದೇನೆ. ಮಲ್ಲಯುದ್ಧದಲ್ಲಿ ಎಷ್ಟು ಗಟ್ಟಿಗರಾದ ಜಟ್ಟಿಗಳನ್ನಾದರೂ ಕುಟ್ಟಿ ಕೆಡಹಿಬಿಡಬಲ್ಲೆನು; ನನ್ನೆದುರಿಗೆ ಕಾಳಗಕ್ಕೆ ಯಾವನೂ ನಿಲ್ಲಲರಿಯನು. ಅದೂ ಅಲ್ಲದೆ ರುಚಿ ರುಚಿಯಾದ ಅಡುಗೆಗಳನ್ನು ಮಾಡುವುದರಲ್ಲಿ ನನ್ನಂತಹ ಸಮರ್ಥರಿಲ್ಲ. ನನ್ನ ಅಡುಗೆಯ ರುಚಿಯನ್ನು ಒಂದು ಸಾರಿ ನೋಡಿದವರು ಇತರರು ಮಾಡಿದ ಪದಾರ್ಥಗಳನ್ನು ಎಂದಿಗೂ ಮೆಚ್ಚರು. ಹೆಚ್ಚಾಗಿ ಹೇಳಿಕೊಳ್ಳಲಾರೆನು. ಚಿತ್ತ"

ವಿರಾಟ—"ಅಯ್ಯಾ! ನೀನು ಗಟ್ಟಿಗನೆಂತಲೂ ಬುದ್ಧಿವಂತನೆಂತಲೂ ನನಗೆ ನಿನ್ನ ಮುಖಕಾಂತಿಯಿಂದಲೇ ಗೊತ್ತಾಗಿದೆ. ನೀನು ನಮ್ಮ ಪಾಕಶಾಲೆಯಲ್ಲಿ ಯಾಜಮಾನ್ಯವನ್ನು ವಹಿಸಿಕೊಂಡು ಸರಿಯಾಗಿ ವಿಚಾರಣೆ ನೋಡಿಕೊ. ನಿನ್ನ ಗೌರವಕ್ಕೆ ತಕ್ಕಂತೆ ವೇತನ ಸಿಕ್ಕುವುದು." ಎಂದು ಹೇಳಿ ಕಳುಹಿದನು.

ನಕುಲನು ಬಂದು ವಿರಾಟರಾಯನನ್ನು ಕಂಡು ತನ್ನ ಯೋಗ್ಯತೆಯನ್ನು ಹೇಳಿಕೊಂಡನು. ರಾಯನು ಅವನಿಗೆ ಅಶ್ವಶಾಲೆಯಲ್ಲಿ ಒಂದು ದೊಡ್ಡ ಉದ್ಯೋಗವನ್ನು ಕೊಟ್ಟನು. ಸಹದೇವನು ಆ ರಾಯನ ದಯೆಪಡೆದು ಕರೋಹಟ್ಟಿಯಲ್ಲಿ ಒಂದು ಕೆಲಸವನ್ನು ಸಂಪಾದಿಸಿಕೊಂಡನು. ನಪುಂಸಕವೇಷಧಾರಿಯಾದ ಅರ್ಜುನನು ಕೈಗೆ ಬಳೆಗಳನ್ನೂ ಜಂತದ ಓಲೆಗಳನ್ನೂ ತೊಟ್ಟುಕೊಂಡು ವಿರಾಟ ರಾಯನ ರಾಣಿಯಾದ ಸುಧೇಷ್ಣೆಯ ಬಳಿಗೆ ಹೋಗಿ ಕಾಣಿಸಿಕೊಂಡನು. ಆಕೆಯು "ನೀನು ಯಾರು? ಬಂದ ಕೆಲಸವೇನು? ಯಾವ ವಿದ್ಯೆಯಲ್ಲಿ ನಿನಗೆ ಪರಿಚಯವುಂಟು" ಎಂದು ಕೇಳಿದಳು. ಅದಕ್ಕವನು "ತಾಯಿ! ನನ್ನ ಹೆಸರು ಬೃಹನ್ನಳೆ ಎನ್ನುವರು. ನಾನು ಭರತಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸಮಾಡಿರುವೆನು. ಹೆಣ್ಣುಮಕ್ಕಳಿಗೆ ನಾಟ್ಯವನ್ನು ಸುಲಭವಾಗಿಯೂ ಜಾಗ್ರತೆಯಾಗಿಯೂ ಕಲಿಸ

ಬಲ್ಲೆನು. ನನಗೆ ಆಶ್ರಯಕೊಟ್ಟು ನಿಮ್ಮ ಬಳಿ ಇಟ್ಟುಕೊಳ್ಳಬೇಕೆಂದು ಹೇಳಿದನು. ರಾಣಿಯು ತನ್ನ ಮಗಳಾದ ಉತ್ತರೆಗೆ ನಾಟ್ಯ ವಿದ್ಯೆಯನ್ನು ಕಲಿಸತಕ್ಕವರು ಬೇಕೆಂದು ಅಪೇಕ್ಷಿಸುತ್ತಿದ್ದುದರಿಂದ ಈ ಶಿಖಂಡಿಯನ್ನು ತನ್ನ ಬಳಿಯಲ್ಲಿಟ್ಟುಕೊಂಡು ಹುಡುಗಿಯರಿಗೆ ನರ್ತನವನ್ನು ಕಲಿಸಲು ಏರ್ಪಡಿಸಿದಳು.

ಪೂರ್ವದ ಸಂಕೇತಪ್ರಕಾರ ಪಾಂಡವರೈದುಮಂದಿಯೂ ತಮ್ಮ ತಮ್ಮ ಉದ್ಯೋಗಗಳಲ್ಲಿ ಸೇರಿಕೊಂಡರು. ದ್ರೌಪದಿಯು ತಾನು ಸಂಕಲ್ಪಿಸಿದ್ದಂತೆ ಸೈರಂಧ್ರಿಯ ವೇಷವನ್ನು ಧರಿಸಿ ರಾಜವೀಧಿಯಲ್ಲಿ ಬರುತ್ತಿದ್ದಳು. ಆಕೆಯ ಮುಖವು ಚಂದ್ರಬಿಂಬವನ್ನು ತಿರಸ್ಕರಿಸುತ್ತಿದ್ದಿತು. ಕತ್ತಲೆಯು ಚಂದ್ರನನ್ನು ಆವರಿಸಿಕೊಂಡು ಅವನ ಕಾಂತಿಯನ್ನು ಹೆಚ್ಚಿಸುವಂತೆ ಕಪ್ಪಾದ ಕೇಶಪಾಶಗಳು ಮುಖ ಮಂಡಲವನ್ನು ಮುಚ್ಚಿಕೊಂಡು, ಅದಕ್ಕೆ ಮತ್ತಷ್ಟು ಪ್ರಕಾಶವನ್ನು ಉಂಟುಮಾಡುತ್ತಿದ್ದವು. ಚಂದ್ರನು ನೈದಿಲೆಗಳನ್ನು ಅರಳಿಸುವುದು ಸಹಜವೆಂದು ಲೋಕಕ್ಕೆ ತೋರಿಸುವಂತೆ ಮುಖದಲ್ಲಿ ವಿಶಾಲವಾದ ನೇತ್ರಗಳು ಅರಳಿ ಬೆಳಗುತ್ತಿದ್ದವು. ಮುಖದಿಂದ ಕಣ್ಣುಗಳೂ ಕಣ್ಣುಗಳಿಂದ ಮುಖವೂ ಪರಸ್ಪರ ಕಾಂತಿಯನ್ನು ಹೊಂದಿ ಶೋಭಿಸುತ್ತಿದ್ದುವು. ಅಂತಹ ಸುಂದರಾಂಗಿಯನ್ನು ನೋಡಿ ರಾಣೀವಾಸದ ಹೆಂಗಸರೆಲ್ಲರೂ ಬೆರಗಾದರು. ಇದು ಎಂತಹ ಸೌಂದರ್ಯರಾಶಿ ! ಮನುಷ್ಯಸ್ತ್ರೀಯರಲ್ಲಿ ಇಂತಹ ಚೆಲುವೆಯರಿರುವರೇ !! ಈಕೆ ಯಾರೋ ತಿಳಿಯದು. ದೇವತಾಸ್ತ್ರೀಯೋ, ನಾಗಕನ್ನಿಕೆಯೋ, ಆಗಿರಬಹುದು ಎಂದು ಹೇಳುತ್ತಾ ರಾಣಿಯ ಬಳಿಗೆ ಹೋಗಿ ಈ ಸುದ್ದಿಯನ್ನು ತಿಳಿಸಿದರು. ಆಕೆ ಇದನ್ನು ಕೇಳಿ, ತನ್ನ ದಾಸಿಯರಮೂಲಕ ಸೈರಂಧ್ರಿಯನ್ನು ತನ್ನ ಬಳಿಗೆ ಕರೆಯಿಸಿ, ತನ್ನ ಹತ್ತಿರ ಇದ್ದ ಪೀಠದಮೇಲೆ ಕುಳ್ಳರಿಸಿಕೊಂಡು,

ಸುಧೇಷ್ಣೆ—ತಂಗೀ ! ನೀನು ಯಾರು ? ನಿನ್ನ ಹೆಸರೇನು ? ನಿನಗೆ ಪತಿಗಳಿರುವರೇ ? ನೀನು ಯಾರ ಪೋಷಣೆಯಲ್ಲಿರುವೆ ? ನಿನ್ನನ್ನು ನೋಡಿದರೆ ನನಗೆ ಏನೋ ಒಂದು ಬಗೆಯ ಪ್ರೀತಿ ಹುಟ್ಟುತ್ತಿದೆ. ನೀನು ಮಾಸಿದ ಬಟ್ಟೆಗಳನ್ನು ಧರಿಸಿದ್ದರೂ ನಿನ್ನ ಮೈ ಮಲಿನವಾಗಿದ್ದರೂ ಇವು ನಿನ್ನ ಸೌಂದರ್ಯಕ್ಕೆ ಸೊಬಗನ್ನು ಹೆಚ್ಚಿಸುತ್ತಿರುವುವೇ ಹೊರತು ಯಾವ ಕುಂದೂ ತೋರದು. ನನ್ನಿಂದ ನಿನಗೆ ಏನಾದರೂ ಸಹಾಯಬೇಕಾಗಿದ್ದರೆ ಕೇಳಿಕೊಳ್ಳಬಹುದು.

ಸೈರಂಧ್ರಿ—ಮಹಾರಾಣಿಯೇ ! ಈ ದೀನಳ ಬಿನ್ನಹವನ್ನು ದಯಮಾಡಿ ಲಾಲಿಸಬೇಕು. ನಾನು ಸೈರಂಧ್ರಿಯ ಕುಲದಲ್ಲಿ ಹುಟ್ಟಿದವಳು. ನನ್ನನ್ನು ಮಾಲಿನಿಯೆಂದು ಕರೆಯುವರು. ಮಹಾ ಬಲಶಾಲಿಗಳಾದ ಗಂಧರ್ವರು ಐದುಮಂದಿ ನನಗೆ ಪತಿಗಳಿರುವರು. ಅವರಲ್ಲಿ ಪರಸ್ಪರ ಕಲಹಗಳು ಹುಟ್ಟಿ ನನ್ನ ಮನಸ್ಸಿಗೆ ಬೇಸರ ಉಂಟಾಯಿತು. ಅವರು ಕೋಪದಿಂದ ಒಂದು ವರ್ಷದ ತನಕ ಯೋಗ್ಯವಾದ ಸ್ಥಳದಲ್ಲಿ ನಿಯಮದಿಂದಿರಬೇಕೆಂದು ನನಗೆ ಕಟ್ಟಳೆ ಮಾಡಿದರು. ಅದರಂತೆ ನಾನು ರಹಸ್ಯಸ್ಥಳದಲ್ಲಿ ನಿಯಮದಿಂದ ಇರಬೇಕಾಗಿದೆ ನೀನು ಈ ವರುಷಕಾಲ ನನ್ನನ್ನು ಕಾಪಾಡುವುದಾದರೆ ನಿನ್ನ ಸೇವೆ ಮಾಡಿಕೊಂಡು ಕಾಲಹರಣೆ ಮಾಡುವೆನು. ನಾನು ಪಾಂಡವರ ರಾಣಿಯಾದ ದ್ರೌಪದಿಯ ಆಶ್ರಯದಲ್ಲಿದ್ದವಳು. ಅವರು ಕಾಡಿಗೆ ಹೋದುದರಿಂದ ನನಗೆ ಅಲ್ಲಿ ಅವಕಾಶ ತಪ್ಪಿತು.

ಸುಧೇಷ್ಣೆ—ತಂಗೀ ! ನಿನ್ನ ಮಾತು ನನಗೆ ನಿಜವಾಗಿ ತೋರಲಿಲ್ಲ. ವಾಸ್ತವಾಂಶವನ್ನು ಮಾಜದೆ ಹೇಳು.

ಸೈರಂಧ್ರಿ—ದೇವೀ ! ನಾನು ಸುಳ್ಳಾಡತಕ್ಕವಳಲ್ಲ. ನಾನು ಸೈರಂಧ್ರಿ. ನನ್ನ ಪತಿಗಳು ಗಂಧರ್ವರು. ನನ್ನ ವ್ರತವನ್ನು ಪಾಲಿಸುವುದಕ್ಕೋಸ್ಕರ ನಿಮ್ಮ ಬಳಿಗೆ ಬಂದಿರುವೆನು.

ಸುಧೇಷ್ಣೆ—ಆಗಬಹುದು. ನಿನ್ನ ಇಷ್ಟದಂತೆ ಇಟ್ಟುಕೊಳ್ಳು ವೆನು. ನನಗೆ ಒಂದು ಸಂದೇಹಮಾತ್ರ ಇದೆ. ಅದನ್ನು ಬಿಡಿಸಬೇಕು. ನಿನ್ನ ಸೌಂದರ್ಯಾದಿಗಳನ್ನು ನೋಡಿದರೆ ನಮ್ಮವರು ನಿನ್ನನ್ನು ಬಯಸುವರು. ಅದರಿಂದ ನಿನಗೂ ನನಗೂ ಕೇಡು ಸಂಭವಿಸಬಹುದಲ್ಲವೇ?

ದ್ರೌ—ತಾಯಿ! ನೀವು ಹೀಗೆನ್ನಬೇಡಿರಿ. ನನ್ನ ಪತಿಗಳು ನನ್ನನ್ನು ಬಿಡತಕ್ಕವರಲ್ಲ. ಅವರು ಗಂಧರ್ವರಾದುದರಿಂದ ಅದೃಶ್ಯ ರೂಪದಿಂದ ಇದ್ದುಕೊಂಡು ನನ್ನನ್ನು ನೋಡುತ್ತಿರುವರು. ಯಾರಾದರೂ ನನಗೆ ಅಪಕಾರಮಾಡುವುದನ್ನು ಕಂಡರೆ ಕೂಡಲೇ ಅವರ ತಲೆಗಳನ್ನು ಚೆಂಡಾಡುವರು. ಆದುದರಿಂದ ಇಂತಹ ಸಂಶಯಗಳನ್ನು ಬಿಟ್ಟು ನನ್ನನ್ನು ಪರಿಗ್ರಹಿಸು.

ಸುಧೇಷ್ಣೆ—ಸುಂದರೀ! ನೀನು ಕೇಳಿಕೊಂಡಂತೆ ನಿನಗೆ ನನ್ನ ಬಳಿಯಲ್ಲಿ ಆಶ್ರಯ ಕೊಡುತ್ತೇನೆ. ನಿನ್ನ ನಿಯಮವನ್ನು ಕಾಪಾಡಿಕೊಂಡು ಒಂದು ವರ್ಷಕಾಲ ನನ್ನ ಹತ್ತಿರ ಸೌಖ್ಯವಾಗಿರು.

ಈ ರೀತಿಯಾಗಿ ಹೇಳಿ, ಸೈರಂಧ್ರಿಯನ್ನು ತನ್ನ ಹತ್ತಿರವೇ ಇಟ್ಟುಕೊಂಡು ಆದರಿಸುತ್ತಿದ್ದಳು. ಹೀಗೆ ಪತ್ನೀ ಸಹಿತರಾದ ಪಾಂಡವರು ವಿರಾಟರಾಯನ ಪಟ್ಟಣದಲ್ಲಿ ಕಂಕ, ವಲಲ, ಬೃಹನ್ನಳೆ, ದಾಮಗ್ರಂಧಿ, ತಂತಿಪಾಲ, ಮಾಲಿನಿ ಎಂಬ ಹೆಸರುಗಳಿಂದ ಇದ್ದುಕೊಂಡು, ತಮ್ಮ ತಮ್ಮ ಕೆಲಸಗಳನ್ನು ಶ್ರದ್ಧೆಯಿಂದ ಮಾಡುತ್ತಾ ತಮ್ಮ ಗುರುತುಗಳು ಯಾರಿಗೂ ಸಿಕ್ಕದಂತೆ ತಮ್ಮ ತಮ್ಮಲ್ಲಿ ಜಯ, ಜಯಂತ, ವಿಜಯ, ವಿಜಯೋದ್ಭವ, ಜಯಸೇನ ಎಂಬ ಸಂಕೇತ ನಾಮಗಳನ್ನು ಇಟ್ಟುಕೊಂಡು ಕಾಲವನ್ನು ಕಳೆಯುತ್ತಿದ್ದರು.

——:0:——

## ಎರಡನೆಯ ಸಂಧಿ.

---

ಕುರುಪತಿಯಾದ ದುರ್ಯೋಧನನು ಪಾಂಡವರನ್ನು ಕಂಡು ಹಿಡಿಯುವುದಕ್ಕಾಗಿ ಮಲ್ಲರನ್ನು ಕಳುಹಿದನು. ಅವರು ವಿರಾಟನಗರಕ್ಕೆ ಬರಲು ವಲಲನು ಅವರೊಡನೆ ಕಾದಿ, ಅವರನ್ನು ಕೊಂದನು.

ಹಸ್ತಿನಾಪುರದಲ್ಲಿ ದುರುಳನಾದ ದುರ್ಯೋಧನನು ವನವಾಸಕ್ಕೆ ಪಾಂಡವರು ಹೊರಟ ದಿನವನ್ನು ಲೆಕ್ಕಮಾಡಿಕೊಂಡು ತನ್ನಲ್ಲಿ "ಗಡುವಿನ ದಿನಗಳು ಕಳೆಯುತ್ತಾ ಬಂದುವು. ಅಜ್ಞಾತವಾಸದ ವರ್ಷವು ಮುಗಿಯುವುದರೊಳಗಾಗಿ ಪಾಂಡವರನ್ನು ಕಂಡು ಹಿಡಿದರೆ ಮತ್ತೆ ಹನ್ನೆರಡು ವರ್ಷಗಳು ಅವರನ್ನು ಕಾಡಿಗೆ ಕಳುಹಬಹುದು. ಅವರಿರುವ ಸ್ಥಳವನ್ನು ಕಂಡು ಹಿಡಿಯುವುದಕ್ಕೆ ಯಾವ ಉಪಾಯ ಹುಡುಕೋಣ'' ಎಂದು ಯೋಚಿಸಿ ಕೊನೆಗೆ ಒಂದು ಮಾರ್ಗವನ್ನು ನಿಶ್ಚಯಿಸಿದನು. ಜಟ್ಟಿಗಳನ್ನು ಎಲ್ಲಾ ಕಡೆಗಳಿಗೂ ಕಳುಹಿಸಿದರೆ ಅವರು ಪಾಂಡವರ ಗುರುತನ್ನು ಹಿಡಿದು ಬಂದು ತಿಳಿಸುವರೆಂದು ತನ್ನ ಬಳಿಯಲ್ಲಿದ್ದ ಜಟ್ಟಿಗಳನ್ನೆಲ್ಲಾ ಕರೆಯಿಸಿದನು. ದೊರೆಯ ಅಪ್ಪಣೆಯಾದ ಕೂಡಲೇ ಮಲ್ಲರ ಯಜಮಾನನಾದ ಜೀಮೂತನೆಂಬುವನು ಸರ್ವಾಲಂಕಾರ ಭೂಷಿತನಾಗಿ ತನ್ನ ಪರಿವಾರದೊಂದಿಗೆ ಬಂದು ಕುರುರಾಜನನ್ನು ಕಂಡು ವಂದಿಸಿದನು.

ದುರ್ಯೋ:—ಎಲೈ ಜೀಮೂತನೇ ! ನಿನ್ನಿಂದ ಒಂದು ದೊಡ್ಡ ಕಾರ್ಯಭಾರ ನಡೆಯಬೇಕಾಗಿದೆ.

ಜೀಮೂ—ಬುದ್ಧಿ! ಅದೇನು? ಅಪ್ಪಣೆಯಾದರೆ ಶಿರಸಾವಹಿಸಿ ನಡಿಸುವೆನು.

ದುರ್ಯೋ:—ನೀವೆಲ್ಲಾ ದೇಶದೇಶಗಳಲ್ಲಿಯೂ ತಿರುಗಿ ಪಾಂಡ

ವರಿರುವ ಸ್ಥಳವನ್ನು ಗೊತ್ತುಮಾಡಿಕೊಂಡು ಬಂದು ನಮಗೆ ತಿಳಿಸ ಬೇಕು.

ಜೀಮೂ:—ಸ್ವಾಮಿ! ಇದು ಸಾಮಾನ್ಯವಾದ ಕಾರ್ಯವಲ್ಲ. ಅವರನ್ನು ಹುಡುಕಬೇಕಾದರೆ ಯುಕ್ತಿಶಕ್ತಿಗಳು ಬಹಳವಾಗಿರಬೇಕು. ಕೈಲಾದಮಟ್ಟಿಗೆ ಯತ್ನಿಸಿನೋಡುವೆವು.

ದುರ್ಯೋ:—ಎಲೈ ಮಲ್ಲಾಗ್ರಣಿಯೇ! ನಿನ್ನ ಸಾಮರ್ಥ್ಯವು ನನಗೆ ತಿಳಿಯುವುದು. ಬುದ್ಧಿವಂತರಾದ ಮಲ್ಲರನ್ನು ಕರೆದೊಯ್ದರೆ ನಿನ್ನ ಕಾರ್ಯಸಿದ್ಧಿಯಾಗುವುದು.

ಜೀಮೂ:—ಎನ್ನೊಡೆಯಾ! ಇಗೋ ಪರಾಮರ್ಶಿಸಿರಿ. ನಮ್ಮ ಜಟ್ಟಿಗಳಲ್ಲಿ (ಕೈಯಿಂದ ತೋರಿಸಿ) ಇವನು ಪುಂಡರೀಕಾಕ್ಷನು, ನಾಲ್ಕುಸಾವಿರ ಜನರನ್ನು ಕೊಲ್ಲಬಲ್ಲನು. ಇವನು ಪಿಂಗಳಿಕನು. ಎಂಟುನೂರು ಆನೆಗಳನ್ನು ಕೆಡಹುವನು. ಇವನು ಜಗಜಟ್ಟಿಯಾದ ಕೇಸರಿ. ನೂರಾರು ಸಿಂಹಗಳನ್ನು ಹೊಡೆದವನು. ಇವನು ವೀರಬಾಹುವು. ಆರುನೂರು ಹೆಬ್ಬುಲಿಗಳನ್ನು ಸೀಳಿದವನು. ಹೀಗೆಯೇ ಐನೂರುಮಂದಿ ಮಲ್ಲರು ನನ್ನ ಸ್ವಾಧೀನದಲ್ಲಿರುವರು. ಇವರು ಒಬ್ಬರಿಗಿಂತೊಬ್ಬರು ಬಲಿಷ್ಠರು. ಎತ್ತಹೋದರೂ ಸೋತು ಬರತಕ್ಕವರಲ್ಲ.

ದುರ್ಯೋ:—ಸರಿಸರಿ. ಇಂತಹ ಪರಿವಾರವುಳ್ಳ ನೀನು ಹೊರಟರೆ ಯಾವ ಕೆಲಸತಾನೆಅಸಾಧ್ಯ?

ಜೀಮೂ:—ಪ್ರಭುಚಿತ್ತ. ತಮ್ಮ ಶತ್ರುಗಳಾದ ಪಾಂಡವರನ್ನು ಕೊಂದು ಬರಲೊ? ಕೈಸೆರೆ ಹಿಡಿದು ಬರಲೊ? ಏನು ಅಪ್ಪಣೆ!

ದುರ್ಯೋ:—ಅಯ್ಯೋ! ಅಂತಹ ಸಾಹಸಕಾರ್ಯಗಳಿಗೆ ಹೋಗಬೇಡಿರಿ. ನೀವು ದೇಶದೇಶಗಳನ್ನು ತಿರುಗುತ್ತಾ, ನಮ್ಮ ಕೀರ್ತಿಪ್ರತಿಷ್ಠೆಗಳನ್ನೂ ಬಿರುದಾವಳಿಗಳನ್ನೂ ಹೊಗಳುತ್ತಾ ಬನ್ನಿರಿ. ಸಮರ್ಥ

ರಾದ ಜಟ್ಟಿಗಳಿದ್ದರೆ ಅವರೊಡನೆ ಕಾದಿ, ಜಯವನ್ನು ಪಡೆಯಿರಿ. ಪಾಂಡವರು ವೇಷಾಂತರದಿಂದ ಎಲ್ಲಿಯಾದರೂ ಇರುವ ಜಾಡೆ ತಿಳಿದರೆ ತಡೆಮಾಡದೆ ಆಗಲೇ ಒಬ್ಬ ದೂತನನ್ನು ಇಲ್ಲಿಗೆ ಅಟ್ಟಿಬಿಡು. ಮುಂದಿನ ಕೆಲಸವನ್ನು ನಾವು ನೋಡಿಕೊಳ್ಳುವೆವು.

ಜೀಮೂ:—ಬುದ್ಧಿ ! ಅಪ್ಪಣೆಯಂತೆ ಮಾಡುವೆವು.

ದುರ್ಯೋ:—ಎಲೈ ಜೀಮೂತನೆ ! ಇಗೋ! ಈ ಹಾರವನ್ನೂ ಭುಜಕೀರ್ತಿಗಳನ್ನೂ ನೀನು ಧರಿಸು. ಈ ಕಡಗಗಳನ್ನೂ ಉಂಗುರಗಳನ್ನೂ ರತ್ನಾಭರಣಗಳನ್ನೂ ಎಲ್ಲರಿಗೂ ಅವರ ಯೋಗ್ಯತೆಗೆ ತಕ್ಕಂತೆ ಬಹುಮಾನವಾಗಿ ಕೊಡು. ಈ ಚೀನಾಂಬರಗಳನ್ನು ಎಲ್ಲರಿಗೂ ಸರಿಯಾಗಿ ಹಂಚು. ನೀವು ಕಾರ್ಯಸಾಧನೆ ಮಾಡಿಕೊಂಡು ಬಂದರೆ ನಿಮಗೆ ಒಂದು ಪ್ರಾಂತವನ್ನೇ ಜಹಗೀರುಕೊಡುವೆನು.

ಜೀಮೂ:—ಮಹಾಸ್ವಾಮಿ! ಕೃತಾರ್ಥರಾದೆವು.

ಹೀಗೆ ಹೇಳಿ ದೊರೆಯ ಅಪ್ಪಣೆಪಡೆದು ಹೊರಟರು. ಆ ವೇಳೆಗೆ ಸರಿಯಾಗಿ ಭೇರಿ, ತಂಬಟೆ, ಢಕ್ಕೆ ಮುಂತಾದ ವಾದ್ಯಗಳ ಅಬ್ಬರವು ಭೂಮ್ಯಾಕಾಶಗಳನ್ನು ತುಂಬಿತು. ಪ್ರಸಿದ್ಧರಾದ ಆ ಮಲ್ಲರೆಲ್ಲರೂ ಶುಭಲಗ್ನದಲ್ಲಿ ಅಲ್ಲಿಂದ ಪ್ರಯಾಣಮಾಡಿದರು. ಅವರು ಯಮುನಾ ನದಿಯನ್ನು ದಾಟಿ, ಹೊರಟು ಮಾರ್ಗದಲ್ಲಿ ಸಿಕ್ಕಿದ ದೊಡ್ಡ ಪಟ್ಟಣಗಳಲ್ಲೆಲ್ಲಾ ನಡೆದ ವಿಶೇಷಗಳನ್ನು ವಿಚಾರಿಸಿಕೊಳ್ಳುತ್ತಾ ನರ್ಮದಾ, ತಪತೀ, ಕೃಷ್ಣಾ, ಗೋದಾವರಿ ನದಿಗಳನ್ನೂ ದಾಟಿ, ಆಯಾ ನದೀತೀರ ಪಟ್ಟಣಗಳನ್ನೆಲ್ಲಾ ನೋಡಿ, ಅಲ್ಲಲ್ಲಿ ಕೌರವರ ಕೀರ್ತಿಯನ್ನು ಹೊಗಳುತ್ತಾ ಬಂದರು. ಎಲ್ಲಿ ಹುಡುಕಿ ವಿಚಾರಿಸಿದರೂ ಪಾಂಡವರ ಸುದ್ದಿ ಹೇಳತಕ್ಕವರೇ ಇಲ್ಲ. ಅಲ್ಲಿಂದ ಮುಂದೆ ತುಂಗಭದ್ರಾತೀರದವರೆಗೂ ಹೋಗಿ ಅಲ್ಲಿರುವ ಮುಖ್ಯ ಸ್ಥಳಗಳಲ್ಲೆಲ್ಲಾ ನೋಡಿದರು. ಅಲ್ಲಿಯೂ ಫಲವಿಲ್ಲದೆ ಹೋಯಿತು.

ಅಲ್ಲಿಂದ ಹಿಂದಿರುಗಿದರು. ಮಾರ್ಗದಲ್ಲಿ ಒಂದೂರಿನ ಚಾವಡಿಯಲ್ಲಿ ಒಂದು ದಿನರಾತ್ರಿ ಮಲಗಿದ್ದರು. ಆಗ ಆ ಜಟ್ಟಿಗಳಲ್ಲಿ ಒಬ್ಬನು ಇದ್ದಕ್ಕಿದ್ದಹಾಗೆಯೇ ಕನಸಿನಲ್ಲಿ ಕಿಟ್ಟನೆ ಕಿರಚಿಕೊಂಡನು.

ಇತರ ಮಲ್ಲರು:—ಎಲಾ! ಏನೋ ಅದು ? ಏಕೆ ಹೀಗೆ ಕಿರಚಿಕೊಂಡೆ ?

ಜಟ್ಟಿ:—ಅಬ್ಬಬ್ಬಾ! ಮೈನಡುಗುತ್ತಿದೆ, ಭಯವಾಗುತ್ತಿದೆ.

ಮಲ್ಲರು:—ಏನೋ! ಬೇಗನೆ ಒದರು? ಏನಾಯಿತು?

ಜಟ್ಟಿ:—ಅಣ್ಣಂದಿರಾ! ನಿಮ್ಮ ಕಣ್ಣುಗಳಿಗೆ ಕಾಣುವುದಿಲ್ಲವೆ? ಇಗೋ ಮಾರಿಯು ಬಂದಿದೆ. ನೋಡಿ. ನೋಡಿ.

ಮಲ್ಲರು:—ಎಲೋ ಹುಚ್ಚಾ ! ಎಲ್ಲಿದ್ದಾಳೆ? ತೋರಿಸೊ.

ಜಟ್ಟಿ:—ಏನಪ್ಪಾ! ಹೀಗೆನ್ನುವಿರಿ! ಎದುರಿಗೆ ನಿಂತಿರುವುದು ಕಾಣುವುದಿಲ್ಲವೆ ?

ಇದನ್ನು ಕೇಳಿ, ಅವರಿಗೆ ಬಗೆಹರಿಯದೆ ಜೀಮೂತನಬಳಿಗೆ ಬಂದು ಅವನನ್ನೆಬ್ಬಿಸಿದರು. ಆತನು ಬೇಗನೆ ಎದ್ದುಬಂದು, ಇವನ ಚೇಷ್ಟೆಯನ್ನು ನೋಡಿ ಗಾಬರಿಗೊಂಡನು.

ಜೀಮೂ:—ತಮ್ಮಾ ! ಏನು? ಏಕೆ ನಿನ್ನ ಮೈ ಕೈ ಕಾಲುಗಳು ನಡುಗುತ್ತಿವೆ! ಹೆದರಬೇಡ. ನಡೆದುದನ್ನು ನಿಜವಾಗಿ ಹೇಳು.

ಜಟ್ಟಿ:—ಒಡೆಯಾ ! ಬಾಯಿ ತೊದಲುತ್ತಿದೆ. ನಿಜವಾಗಿ ಹೇಳುತ್ತೇನೆ ಕೇಳು. ಅಕಾಲಮೃತ್ಯುವು ಬಂದು ನಮ್ಮನ್ನೆಲ್ಲಾ ಕೊಂದುಹಾಕುತ್ತಿದ್ದಿತು. ಇದನ್ನು ನೋಡಿ ಈ ಸುದ್ದಿಯನ್ನು ತಿಳಿಸಲಿಕ್ಕೆ ಒಬ್ಬನಾದರೂ ಬದುಕಿಬರಬೇಕೆಂದು ತಲೆತಪ್ಪಿಸಿಕೊಂಡು ಓಡಿಬಂದೆನು. ಅಬ್ಬಬ್ಬಾ ! ಮುಂದೇನುಗತಿ ? ಭಯವಾಗುತ್ತಿದೆ.

ಜೀ:—ಅಂಜಬೇಡ. ಇಷ್ಟು ಜನ ಶೂರರಿರುವಾಗ ನಿನಗೇನು ಭಯ ?

ಜಟ್ಟಿ:—ಹಾಗಲ್ಲವಣ್ಣಾ ! ಹೆದರಿಕೆ ಹುಟ್ಟಿದಕಡೆ ನಿಲ್ಲಲಾಗದು. ಇಷ್ಟರಲ್ಲಿಯೇ ನಮಗೆ ಏನೋ ವಿಪತ್ತು ಬರುವುದು ಸಿದ್ಧ. ಕಾಲಗತಿಯನ್ನು ಬಲ್ಲವರಿಲ್ಲ. ಜಾಗ್ರತೆಯಾಗಿ ಹೋಗಿ ಊರು ಸೇರಿಕೊಂಡರೆ ನಂಟರಿಷ್ಟರ ಮುಂದೆ ಮಡಿದರೂ ವ್ಯಸನವಿಲ್ಲ.

ಜೀ:—ಕನಸಿರಬಹುದು. ನಿನ್ನ ಮಾತು ನಿಜ. ಸ್ವಲ್ಪ ಸಂತೈಸಿಕೊ, ನಾಳೆಯದಿನವೇ ಊರಿನಕಡೆ ಹೊರಡೋಣ

ಎಂದು ಸಮಾಧಾನ ಮಾಡಿದನು. ಮರುದಿನ ಎಲ್ಲರೂಅಲ್ಲಿಂದ ಹಿಂದಿರುಗಿ ಉತ್ತರಮಾರ್ಗವಾಗಿ ಬರುವಾಗ ವಿರಾಟರಾಯನ ಪಟ್ಟಣ ಸಿಕ್ಕಿತು. ಆಗ ಜೀಮೂತನು "ಇದು ದೊಡ್ಡ ಪಟ್ಟಣ. ಇಲ್ಲಿ ನಮ್ಮ ದೊರೆಯ ಶತ್ರುಗಳು ಕೆಲವರು ಬಲಿಷ್ಠರಾಗಿರುವರೆಂದು ಕೇಳಿದ್ದೇನೆ. ರಾಯನನ್ನು ಕಂಡು ಹೋಗುವುದು ಲೇಸು" ಎಂದು ಯೋಚಿಸಿ, ಪಟ್ಟಣದೊಳಕ್ಕೆ ಬಂದು ರಾಜದ್ವಾರದಲ್ಲಿ ನಿಂತು ವಿರಾಟರಾಯನಿಗೆ ತಾವು ಬಂದಿರುವ ಸುದ್ದಿಯನ್ನು ಹೇಳಿ ಕಳುಹಿದನು. ರಾಯನು ಕೇಳೀ ಅವರನ್ನು ಕರೆಯಿಸಿದನು. ಆಗ ಮಲ್ಲರ ಜತೆಯಲ್ಲಿ ಜೀಮೂತನು ಬಂದು ದೊರೆಗೆ ಕೈಮುಗಿದು ನಿಂತನು.

ದೊರೆ:—ಅಯ್ಯಾ ಜಟ್ಟಿ ! ಎಲ್ಲಿಂದ ಬಂದಿರಿ ? ಏನು ಕಾರ್ಯ!

ಜೀ:—ಮಹಾಪ್ರಭೋ ! ಚಿತ್ತೈಸು. ನಾವು ಹಸ್ತಿನಾಪುರದಿಂದ ಬಂದಿರುವ ಮಲ್ಲರು. ನಮ್ಮ ಮಹಾರಾಜರ ಅನುಮತಿಯಿಂದ ದೇಶಸಂಚಾರ ಮಾಡಿಕೊಂಡು ಇತ್ತಲಾಗಿ ಹೊರಟುಬಂದೆವು. ಆ ಪ್ರಭುವಿನ ಪ್ರಶಂಸೆಯನ್ನು ನೀವು ಕೇಳಿಯೇ ಇರಬಹುದು. ಶಂತನು ಚಕ್ರವರ್ತಿಯು ಪ್ರಸಿದ್ಧನೆಂದು ಕೇಳಿ ಉಂಟಷ್ಟೆ ! ಆ ವಂಶದಲ್ಲಿ ಧೃತರಾಷ್ಟ್ರಮಹಾರಾಯನು ಹುಟ್ಟಿ ಧರ್ಮದಿಂದ ಪ್ರಜಾಪಾಲನೆ ಮಾಡುತ್ತಿರುವನು. ಅವನ ಮಗನೇ ನಮ್ಮ ಪ್ರಭುವಾದ ದುರ್ಯೋ

ಧನನು. ಆತನ ಆಶ್ರಯದಲ್ಲಿ ನಮ್ಮಂತವರು ಎಷ್ಟೋ ಜನರು ಜೀವನ ಮಾಡಿಕೊಂಡಿರುವರು.

ವಿರಾ:-ಬಹಳಸಂತೋಷವಾಯಿತು. ನೀವು ಬಂದಕಾರ್ಯವೇನು?

ಜೀಮೂ:—ಆತನು ಎಲ್ಲಾ ದೇಶಗಳಲ್ಲಿಯೂ ಸಂಚರಿಸಿ ನಿಮ್ಮ ಶಕ್ತಿಸಾಹಸಗಳನ್ನು ಪ್ರಕಟಗೊಳಿಸಿ ಬನ್ನಿರೆಂದು ಅಪ್ಪಣೆಕೊಟ್ಟು ಕಳುಹಿದನು. ಅದರಂತೆ ಅಲ್ಲಲ್ಲಿ ನಮ್ಮ ಬಲವನ್ನು ತೋರಿಸಿ ಬಿರುದುಗಳನ್ನೂ ಯೋಗ್ಯತಾಪತ್ರಿಕೆಗಳನ್ನೂ ಪಡೆದುಬಂದಿರುವೆವು. ತಮ್ಮ ಅನುಜ್ಞೆಯಾದರೆ ಸನ್ನಿಧಾನದಲ್ಲಿಯೂ ನಮ್ಮ ಬಲವನ್ನು ತೋರಿಸಿ ತಮ್ಮ ಅನುಗ್ರಹಕ್ಕೆ ಪಾತ್ರರಾಗುವೆವು.

ವೀರಾ.—ಆಗಬಹುದು. ನಮ್ಮಲ್ಲಿಯೂ ಗಟ್ಟಿಗರಾದ ಜಟ್ಟಿಗಳಿರುವರು. ನಾಳೆಯದಿನ ಕರೆಸುವೆವು. ನೀವು ಬಂದು ಅವರೊಡನೆ ಕಾಳಗಮಾಡಿರಿ. ನೋಡೋಣ.

ಎಂದು ಹೇಳಿ ಕಳುಹಿ ಅವರಿಗೆ ಪಡಿಪಾನಗಳನ್ನು ಕೊಟ್ಟು ಸತ್ಕರಿಸಲಿಕ್ಕೆ ಏರ್ಪಾಡು ಮಾಡಿದನು. ತರುವಾಯ ಆ ರಾಯನು ತನ್ನ ಸಭೆಯಲ್ಲಿದ್ದ ಕಂಕಭಟ್ಟನನ್ನು ನೋಡಿ ಇಂತೆಂದನು.

ವೀರಾ:—ಭಟ್ಟರೇ! ಈ ಜಟ್ಟಿಗಳ ಮಾತುಗಳನ್ನು ಕೇಳಿದಿರಾ!

ಕಂಕ:—ಕೇಳಿದೆವು. ಇವರು ಕೌರವರ ಕಡೆಯಿಂದ ಬಂದಿರುವರಂತೆ! ಅವರು ನಿಮಗೆ ಸ್ನೇಹಿತರೇ ಅಲ್ಲವೆ!

ವಿರಾ:—ಒಳ್ಳೆಯ ಮಾತು ಹೇಳಿದಿರಿ? ನಮ್ಮ ನೆರಳು ಕಂಡರೆ ಅವರಿಗೆ ಸೇರದು. ನಮ್ಮ ಮೇಲೆಇಲ್ಲದತಪ್ಪು ಹೊರಿಸಿ, ಜಗಳಕ್ಕೆ ಕಾಲು ಕೆರೆಯುತ್ತಿರುವರು.

ಕಂಕ:—ಆದುದಾಗಲಿ. ಮುಂದೆ ಏನು ಮಾಡಬೇಕೆನ್ನುವೆ?

ವಿರಾ:—ಇವರ ಸಂಗಡ ಕಾದತಕ್ಕವರು ನಮ್ಮಲ್ಲಿ ಒಬ್ಬರೂ ಇಲ್ಲವಲ್ಲ. ಏನು ಮಾಡೋಣ!

ಕಂಕ:—ಇದಕ್ಕೇಕೆ ಇಷ್ಟು ಯೋಚನೆ. ನಮ್ಮ ಕಡೆಯವರು ಕಾದಿ ಜಯಿಸಲಿ ಅಥವಾ ಸೋಲಲಿ. ರಾಜರು ಬಂದವರ ಗೌರವಕ್ಕೆ ತಕ್ಕಂತೆ ಕೆಲಸ ಮಾಡಿಸಿ ತಮ್ಮ ಮರ್ಯಾದೆ ಉಳಿಸಿಕೊಳ್ಳಬೇಕಲ್ಲವೇ? ನಮ್ಮಲ್ಲಿರುವ ಜಟ್ಟಿಗಳು ಎಷ್ಟು ಮಟ್ಟಿಗೆ ಕಾದುವರೋ ಅವರನ್ನು ಕರೆಸಿ ಕೇಳೋಣ.

ವಿರಾಟ:—ಯಾರೋ ಅಲ್ಲಿ? ನಮ್ಮ ಜಟ್ಟಿಗಳನ್ನು ಕರೆಯಿಸು! ಎಂದು ಆಜ್ಞೆಮಾಡಿದನು. ತೀವ್ರದಲ್ಲಿಯೇ ತುಳುವ, ತುಂಬುರ ಮೊದಲಾದ ಅನೇಕ ಮಲ್ಲರು ತಮ್ಮತಮ್ಮ ಬಿರುದುಗಳನ್ನು ಧರಿಸಿಕೊಂಡು, ಆರ್ಭಟಿಸುತ್ತಾ ರಾಜಸಭೆಗೆ ಬಂದು ಕೈಮುಗಿದು ನಿಂತರ.

ವಿರಾಟ:—ಶೂರರಿರಾ! ಹಸ್ತಿನಾಪುರದ ಅರಸರ ಕಡೆಯಿಂದ ಬಲಶಾಲಿಗಳಾದ ಮಲ್ಲರು ಬಂದಿರುವರು. ನೀವು ಅವರ ಕೂಡ ಕಾದಿ ನಿಮ್ಮ ಸಾಮರ್ಥ್ಯವನ್ನು ತೋರಿಸಬೇಕಾಗಿದೆ.

ಮಲ್ಲರು:—ಮಹಾಪ್ರಭೋ! ತಮ್ಮ ಅನುಗ್ರಹಪ್ರಭಾವದಿಂದ ಶಕ್ತಿ ಇರುವ ಮಟ್ಟಿಗೆ ಕಾದಿ ಕೀರ್ತಿಯನ್ನು ತರುವೆವು. ಜೀಯಾ!

ಎಂದು ಭುಜಗಳನ್ನಪ್ಪಳಿಸಿ ಮುಷ್ಟಿಗಳನ್ನು ತಿರುಹುತ್ತಾ ಕುಣಿದಾಡಿದರು.

ವಿರಾಟ:—ಒಳ್ಳೆಯದು. ಈಗ ನಿಮ್ಮ ಮನೆಗಳಿಗೆ ಹೋಗಿ, ನಾಳೆ ಮಲ್ಲರಂಗಕ್ಕೆ ಬಂದು ನಿಮ್ಮ ಸಾಮರ್ಥ್ಯಗಳನ್ನು ತೋರಿಸಬಹುದೆಂದು ಅವರನ್ನು ಮನ್ನಿಸಿ ಕಳುಹಿದನು.

ಮರುದಿನ ಉಭಯಪಕ್ಷದ ಜಟ್ಟಿಗಳೂ ಸೇರಿದರು. ಅವರ ಕಾಳಗವನ್ನು ನೋಡುವುದಕ್ಕೆ ಪುರಜನರು ಬಹುಮಂದಿಬಂದು ಸೇರಿದರು. ಆಗ ಜಟ್ಟಿಗಳು ತಮ್ಮ ಕೈಗಳನ್ನು ನೆಲದಲ್ಲಿ ಉಜ್ಜಿ, ಬಲವಾಗಿ ಗರ್ಜಿಸಿ, ಭುಜವನ್ನು ಅಪ್ಪಳಿಸುತ್ತಾ, ಕಾಳಗಕ್ಕೆ ಸಿದ್ಧರಾಗಿ ನಿಂತರು.

ಕೌರವರ ಕಡೆಯಿಂದ ಬಂದ ಸಿಂಧೂರನೆಂಬ ಮಲ್ಲನಿಗೂ ವಿರಾಟನ ಕಡೆಯ ಚೌದಂತನೆಂಬುವನಿಗೂ ದೊಡ್ಡ ಕುಸ್ತಿ ನಡೆಯಿತು. ಕಡೆಯಲ್ಲಿ ಚೌದಂತನು ಮುರುದುಬಿದ್ದನು ಅವನ ಹೆಣವನ್ನು ತೆಗೆದುಹಾಕುವಷ್ಟರಲ್ಲಿ ಇನ್ನೊಬ್ಬ ಜಟ್ಟಿ ಎದ್ದು ಬಂದು ಸಿದ್ಧವಾದನು. ಸಿಂಧೂರನು ಅವನನ್ನೂ ಕೊಂದು ಕೆಡಹಿದನು.

ಹೀಗೆ ಹೆಸರು ಪಡೆದಿದ್ದ ಶೂರರಲ್ಲನೇಕರು ಒಬ್ಬರ ಹಿಂದೆ ಒಬ್ಬರು ಕಾದಿ ಮಡಿಯುತ್ತಾ ಬಂದರು. ವಿರಾಟರಾಯನು ಇದನ್ನು ನೋಡಿ ಬೆರಗಾದನು. ಉಳಿದ ಮಲ್ಲರು ತಲೆಯಮೇಲೆ ಮುಸುಕು ಹಾಕಿಕೊಂಡು ಮೆಲ್ಲಮೆಲ್ಲನೆ ಸರಿದರು. ಸಿಂಧೂರನು ಕಾಳಗಕ್ಕೆ ನಿಲ್ಲುವವರು ಬೇಗ ಬರಲಿ ಎಂದು ಗರ್ಜಿಸುತ್ತಿದ್ದನು. ಒಬ್ಬರೂ ಮೇಲಕ್ಕೇಳಲಿಲ್ಲ. ವಿರಾಟರಾಯನು ಇದನ್ನು ಕಂಡು ತನ್ನ ಮನಸ್ಸಿನ ವ್ಯಥೆಯನ್ನು ಹೊರಪಡಿಸದೆ ಇಂದಿನ ಕಾಳಗ ಚನ್ನಾಗಿದೆ. ನೀವೇ ಶೂರರು. ನಾಳೆಯೂ ಸ್ವಲ್ಪ ಕಾಳಗಮಾಡಿ ನೋಡೋಣ, ಎಂದು ಹೇಳಿಕಳುಹಿದನು. ಬಳಿಕ ಕಂಕಭಟ್ಟರನ್ನು ನೋಡಿ.

ವಿರಾಟ—ಮಿತ್ರನೇ! ನೋಡಿದೆಯಾ ! ಮಾನ ಕಳಕೊಳ್ಳುವ ಹೊತ್ತುಬಂದಿದೆಯಲ್ಲಾ ! ಈಗೇನುಮಾಡತಕ್ಕದ್ದು ?

ಕಂಕ—ಅಯ್ಯಾ ! ಶೂರರು ಯಾವಾಗಲೂ ಗೆಲ್ಲುವರು. ನಮ್ಮ ಕಡೆಯವರ ಅಭ್ಯಾಸಬಲಗಳಿಗಿಂತ ಕೌರವನ ಕಡೆಯವರು ಹೆಚ್ಚು ಬಲಶಾಲಿಗಳಲ್ಲವೇ !

ವಿರಾಟ—ಅದುಹಾಗಿರಲಿ. ಶತ್ರುಗಳ ಅಪಹಾಸ್ಯಕ್ಕೆ ಗುರಿಯಾಗಬೇಕಾಯಿತೆಂದು ಚಿಂತಿಸುತ್ತೇನೆ.

ಕಂಕ—ಅಯ್ಯಾ ಹೆದರಬೇಡ. ಇದಕ್ಕೆ ಒಂದುಪಾಯ ಹೇಳುತ್ತೇನೆ ಕೇಳು. ನಾಳೆ ನಮ್ಮ ಕಡೆ ಮಲ್ಲರು ಧೈರ್ಯದಿಂದ

ಕಾಳಗಕ್ಕೆ ನಿಲ್ಲಲಾರರು. ಆದ್ದರಿಂದ ನನ್ನ ಮಾತು ನಡಿಸುವುದಾದರೆ ಹೇಳುತ್ತೇನೆ.

ರಾಯ—ಅದೇನು ? ಬೇಗ ಹೇಳು.

ಕಂಕ—ನಿನ್ನ ಬಾಣಸಿಗನಾದ ವಲಲನು ಮಲ್ಲಕಾಳಗದಲ್ಲಿ ಗಟ್ಟಿಗನು. ಭೀಮಸೇನನ ಬಳಿಯಲ್ಲಿದ್ದವನು. ಹಲವು ಯುದ್ಧಗಳಲ್ಲಿ ಕಾದಿ ಗೆದ್ದವನು. ಬಲದಲ್ಲಿ ಅವನು ಭೀಮನಿಗಿಂತಲೂ ಕಡಿಮೆಯಲ್ಲ. ಅವನನ್ನು ಕರಿಸಿ ಶತ್ರುರಾಜ್ಯದ ಮಲ್ಲರಮೇಲೆ ಕಾಳಗಕ್ಕೆ ಬಿಡು. ಜಯವಾಗುವುದು.

ರಾಯ—ಸ್ವಾಮಿ ! ನಾನು ಅವನನ್ನು ನೋಡಿದ್ದೇನೆ. ಅವನಿಂದ ಈ ಕೆಲಸ ಆದೀತೆಂದು ನಂಬಲಾರೆನು.

ಕಂಕ—ಅಯ್ಯಾ ! ಹಾಗೆ ಹೇಳಬೇಡ. ಅವನು ಎಲ್ಲಿಯೂ ಸೋತು ಬಂದವನೇ ಅಲ್ಲ.

ವಿರಾಟ—ಸ್ವಾಮಿ ! ಇದೇ ಕೆಲಸವನ್ನು ಅಭ್ಯಾಸಮಾಡಿ ಹೆಸರುಪಡೆದಿರುವ ಜಟ್ಟಿಗಳೆದುರಿಗೆ ಆ ಬಡಲಲನೇನು ಮಾಡಬಲ್ಲನು !

ಕಂಕ—ಏಕೆ ಹೀಗೆ ಹೇಳುವಿ ? ಅವನ ಯೋಗ್ಯತೆ ನಮಗೆ ತಿಳಿಯುವುದು. ಅವನು ಸೋಲಲಿ ಅಥವಾ ಗೆಲ್ಲಲಿ. ಆ ಗೌರವ ನಮ್ಮದಾಗಿರಲಿ.

ವಿರಾಟ—ಪೂಜ್ಯರೇ ! ಕಂಡುಕಂಡೂ ಹೀಗೆ ಹೇಳುತ್ತೀರಿ. ಸಿಂಧೂರನ ಬಲವನ್ನು ಪ್ರತ್ಯಕ್ಷವಾಗಿ ನೋಡಿಲ್ಲವೇ ! ಅವನೆದುರಿಗೆ ನಿಂತು ಬದುಕಬಲ್ಲವರಾರು. ಅನ್ಯಾಯವಾಗಿ ಆ ಬಡಪಾಪಿಯನ್ನು ಕೊಲ್ಲಿಸುವುದಕ್ಕೆ ನನಗೆ ಇಷ್ಟವಿಲ್ಲ.

ಕಂಕ—ರಾಜನೇ ! ನನ್ನ ಮಾತನ್ನು ನಂಬಿ, ವಲಲನನ್ನು ಕರೆಸು. ನಿನಗೆ ಗೌರವ ಬರುವುದು.

ರಾಯ—ಪೂಜ್ಯರೇ ! ನನಗೇಸೋ ಧೈರ್ಯವಿಲ್ಲ. ನೀವು

ಹೇಳುವ ವಲಲನು ಕಾಳಗದಲ್ಲಿ ಸೋತರೆ ನನ್ನ ಮೇಲೆ ಮಾತಿಲ್ಲ. ಆ ಅಪಕೀರ್ತಿ ನಿಮ್ಮದೇ.

ಕಂಕ:—ರಾಜನೇ! ನಿನ್ನ ಮಾತಿನಂತೆಯೇ ಆಗಲಿ. ಇದರಿಂದ ಬರತಕ್ಕ ಮೇಲುಕೀಳುಗಳು ನಮಗೇ ಇರಲಿ. ನೀನು ಚಿಂತಿಸಬೇಡ.

ಮರುದಿನ ರಾಯನು ಒಬ್ಬ ದೂತನನ್ನು ಕಳುಹಿಸಿ ವಲಲನನ್ನು ಸಭೆಗೆ ಕರೆಯಿಸಿದನು.

ಭೀಮಸೇನನ ಆಗಿನ ವೇಷವು ಹೇಗಿದ್ದಿತೆಂದರೆ ಮುರಿದ ಮೀಸೆಗಳು, ಕೆದರಿದ ತಲೆ, ಕೆಂಪಡರಿದ ಕಣ್ಣುಗಳು, ಪೊಗರಿನ ಮುಖ, ನಿಂತರೋಮಗಳು, ಹುರಿಯಂತೆ ಹೊಸೆದಿರುವ ಭಯಂಕರವಾದ ದೇಹ. ಈ ವೇಷದಿಂದಿದ್ದ ಭೀಮನು ಬೀದಿಯ ಕಲಹಕ್ಕೆ ಮುಂದಾಳಾಗಿ ನುಗ್ಗುವ ಮನಸ್ಸುಳ್ಳವನಾಗಿ ಆಗಲೇ ರಾಜಸಭೆಗೆ ಹೊರಟು ಬಂದನು. ರಾಯನು ಆತನನ್ನು ಮನ್ನಿಸಿ ಇಂತೆಂದನು.

ರಾಯ:—ಅಯ್ಯಾ ವಲಲನೇ! ಹಸ್ತಿನಾಪುರದಿಂದ ಬಲಶಾಲಿಗಳಾದ ಜಟ್ಟಿಗಳು ಬಂದಿರುವರು. ನೀನು ಅವರನ್ನೆದುರಿಸಿ ಕಾಳಗ ಮಾಡಿ ಜಯವನ್ನು ಪಡೆದರೆ ನಮ್ಮಲ್ಲಿರುವ ಮಲ್ಲರೆಲ್ಲರನ್ನೂ ನಿನ್ನ ಅಧೀನಮಾಡುವೆವು. ನಿನಗೆ ಈ ಮಲ್ಲಯುದ್ಧದಲ್ಲಿ ಚೆನ್ನಾಗಿ ಅಭ್ಯಾಸವಿರುವುದೆಂದು ನೀನು ಬಂದ ದಿನವೇ ಹೇಳಿದೆಯಲ್ಲವೇ! ಈ ಕಂಕಭಟ್ಟರು ನಿನ್ನನ್ನು ಬಹಳವಾಗಿ ಹೊಗಳಿದ್ದರಿಂದ ಕರೆಸಿಕೊಂಡೆವು.

ವಲಲ:—(ತನ್ನ ಮುಖದಲ್ಲಿ ಕಿರುನಗೆಯನ್ನು ಸುರಿಸುತ್ತಾ) "ಜೀಯಾ! ನಾನು ಹೇಳಿದ್ದಂತೆ ಮಲ್ಲಕಾಳಗದಲ್ಲಿ ನನಗೆ ಹೆಚ್ಚಾಗಿ ಪರಿಶ್ರಮವಿರುವುದು. ಸ್ವಾಮಿಕಾರ್ಯಕ್ಕಾಗಿ ಮಡಿದರೂ ಚಿಂತಿಸತಕ್ಕವನಲ್ಲ. ಗೆದ್ದರೆ ನಿಮ್ಮ ಅನುಗ್ರಹಕ್ಕೆ ಪಾತ್ರನಾಗುವೆನು. ಮನಸ್ಸಿನ ದುಗುಡವನ್ನು ಬಿಡಿ. ಜನನ ಮರಣಗಳು ಪ್ರವಾಹರೂಪ

ವಾಗಿರುವುವು. ಎದುರಾಳಿಗಳ ಧೈರ್ಯಸ್ಥೈರ್ಯಗಳನ್ನು ಪರೀಕ್ಷಿಸಿ ನೋಡೋಣ. ಅವರನ್ನು ಕರೆಯಿಸಿ.''

ಆಗ ರಾಯನು ಜೀಮೂತನ ಬಳಿಗೆ ಹೇಳಿಕಳುಹಿಸಲು ಅವನು ಮಲ್ಲರನ್ನೆಲ್ಲಾ ಬೇಗ ಕರೆದುತಂದನು. ಅವರು ಬಂದು ಸಭೆಯಲ್ಲೆಲ್ಲಾ ನೋಡಿದರು. ಒಬ್ಬ ಜಟ್ಟಿಯಾದರೂ ಕಾಣಿಸಲಿಲ್ಲ. ಆಗ ವಿರಾಟರಾಯನನ್ನು ನೋಡಿ "ಪ್ರಭುವೇ, ನಾವು ಯಾರ ಸಂಗಡ ಕಾದೋಣ. ಮಲ್ಲರು ಒಬ್ಬರೂ ಇಲ್ಲವಲ್ಲ'' ಎಂದರು. ಆಗ ರಾಯನು ಭೀಮಸೇನನನ್ನು ತೋರಿಸಿದನು. ಸಿಂಧೂರನು ಅವನನ್ನು ಕಂಡು, ಗಹಗಹಿಸಿನಕ್ಕು, "ಈ ತಿರುಕನು ನನ್ನ ಸಂಗಡ ಕಾದಿ ಬದುಕಬಲ್ಲನೇ'' ಎಂದು ಹಾಸ್ಯಮಾಡಿದನು. ಆಗ ಭೀಮನು ಚೆಂಡಿನಂತೆ ಪುಟನೆಗದು ಬಂದು ಸಿಂಧೂರನನ್ನು ತಿವಿದನು. ಅವನು ಅದನ್ನು ಸಹಿಸಿಕೊಂಡು ಸಿಟ್ಟಿನಿಂದ ಆರ್ಭಟಿಸಿ, ಅವನನ್ನು ಕುರಿತು,

ಸಿಂಧೂರ:—ಎಲೋ ಬಾಣಸಿಗಾ ! ಅಡಿಗೆ ಮನೆಯಲ್ಲಿ ಹದ್ದಿಲ್ಲದೆ ಕೂಳು ತಿಂದು ಹೊಟ್ಟೆ ಬೆಳೆಯಿಸಿಕೊಂಡು ಬಹಳ ಕೊಬ್ಬಿದ್ದೀ. ನೀನು ದಿಟ್ಟನಾಗಿ ಜಗಜಟ್ಟಿಗಳ ಕೂಡೆ ಕಾದಲಿಕ್ಕೆ ಬಂದು ಕೆಟ್ಟೆ. ಈ ರಂಗಸ್ಥಳವನ್ನು ಬಿಟ್ಟು ಆಚೆಗೆ ತೊಲಗು. ಇದು ನಿನಗೆ ಬಿಟ್ಟಿಯಲ್ಲ.

ಭೀಮ:—ಎಲೈ ವೀರನೇ ! ನಿನ್ನಂತಹ ಜಗಜಟ್ಟಿಗಳನೇಕರು ನನ್ನ ಮುಂದೆ ಬಂದು, ಕಾದಿ, ಸ್ವರ್ಗಲೋಕವನ್ನೈದಿದರು. ಬಣ ಜಂಭಗಳಿಂದ ಫಲವೇನು ? ಕೈಗುಣವನ್ನು ತೋರಿಸು.

ಸಿಂಧೂರ:—"ಎಲೆಲೆ ಬಾಣಸಿಗನೇ! ಸವಿಸವಿಯಾಗಿ ಬೇಸಿದ ಪದಾರ್ಥಗಳನ್ನು ತಿಂದು ನಿನ್ನ ಮೈ ಬಹಳ ಕೊಬ್ಬಿದೆ. ನೀನು ತಿಂದುದನ್ನೆಲ್ಲಾ ಒಂದು ನಿಮಿಷದಲ್ಲಿ ಕಕ್ಕಿಸಿ ಬಿಡುವೆನು. ನೋಡು.''

ಎಂದು ಭೀಮನನ್ನು ಗುದ್ದಿದನು. ಆ ಕೂಡಲೆ ಭೀಮನು

ಸಿಂಧೂರನನ್ನು ನೆಲಕ್ಕೆ ಕುಕ್ಕಿ ಬಡಿದನು. ಅವನ ನಿಟ್ಟೆಲುಬುಗಳು ನಿರಿನಿಟಿಲೆಂದು ಮುರಿದವು. ಬಾಯಿಂದ ರಕ್ತಧಾರೆ ಹೊರಟಿತು. ಅವನು ನೆಲದಲ್ಲಿ ಬಿದ್ದು ಒರಗಿದನು. ತರುವಾಯ ಗಜಸಿಂಗನೆಂಬ ಜಟ್ಟಿಯು ಬಂದು ಕಾಳಗಕ್ಕೆ ನಿಂತನು. ಭೀಮನು ಅವನನ್ನು ಗಿರಗಿರನೆ ತಿರುಗಿಸಿ ಕೊರಳು ತಿರುವಿ ಹೊಟ್ಟೆಯಲ್ಲಿ ಕಿವಿಚಿ ಮುದ್ದೆಮಾಡಿ ಕಾಲಿನಿಂದ ತಿಕ್ಕಿ ಬಿಸುಟನು. ಆ ಬಳಿಕ ಪಿಂಗಳಿಕನೆಂಬ ಮಲ್ಲನು ಬರಲು ಅವನಿಗೂ ಗಜಸಿಂಗನ ಗತಿಯೇ ಆಯಿತು. ಆಗ ಜೀಮೂತಮಲ್ಲನು ತಾನೇ ಗರ್ಜಿಸುತ್ತಾ ಹತ್ತಿರ ಬಂದು ಭೀಮನನ್ನು ನೋಡಿ, "ಎಲವೋ ಬಾಣಸಿಗಾ! ಕೈಲಾಗದ ಹುಡುಗನನ್ನು ಕೊಂದೆನೆಂದು ಹಿಗ್ಗಬೇಡ. ಜಗಜಟ್ಟಿಯಾದ ನನ್ನ ಮೇಲೆ ಬಾ. ನಿನ್ನ ಸಾಮರ್ಥ್ಯವನ್ನು ನೋಡೋಣ." ಎಂದು ಆರ್ಭಟಿಸುತ್ತಾ ನಿಂತನು. ಹತ್ತಾಹತ್ತಿಯಿಂದ ಜೀಮೂತನೂ ಭೀಮನೂ ಕಾದುತ್ತಿರಲು ಸಭೆಯವರೆಲ್ಲಾ ಬೆದರಿ ಬೆರಗಾಗಿ ನೋಡುತ್ತಿದ್ದರು. ಇವರ ಪಾದಘಾತಕ್ಕೆ ಭೂಮಿಯು ಅದುರಿತು. ದಿಗ್ಗಜಗಳು ಘೀಳಿಟ್ಟವು. ಆದಿಶೇಷ ಕೂರ್ಮರು ಹೆದರಿದರು. ಇನ್ನು ಉಳಿದವರ ಮಾತೇನು ? ಶೂರರಾದ ಅವರಿಬ್ಬರೂ ಒಬ್ಬರಿಗಿಂತ ಒಬ್ಬರು ಮೇಲುಗೈಯೆಂಬಂತೆ ಕಾದುತ್ತಿದ್ದರು. ಭೀಮಸೇನನ ಗುದ್ದುಗಳು ಜೀಮೂತನ ಪಕ್ಕೆಗಳಲ್ಲಿ ಅದ್ದಿದವು. ಕುರುಪತಿಯ ಮಂತ್ರವು ಮಾಯವಾಯಿತು. ಜೀಮೂತನು ಮೈಮರೆತು ನೆಲದಲ್ಲಿ ಬಿದ್ದು ಒದ್ದಾಡುತ್ತಿದ್ದನು. ಆಗ ಭೀಮನು ಅವನ ಎದೆಯ ಮೇಲೆ ನಿಂದು ಕುಣಿದಾಡಿ ಅವನ ಶರೀರವನ್ನು ಕಬ್ಬಿನಂತೆ ಸೀಳಿ ಬಿಸುಟನು. ತರುವಾಯ ಭೀಮಸೇನನು "ಕಾಳಗಕ್ಕೆ ಮತ್ತ್ಯಾರಿರುವಿರಿ. ಬೇಗಬೇಗ ಬನ್ನಿರಿ" ಎಂದು ಕೂಗಿದನು. ಕಳೆದುಉಳಿದ ಮಲ್ಲರೆಲ್ಲರೂ ಒಂದೇ ಒಟ್ಟಿಗೆ ಭೀಮನಮೇಲೆ ಬಿದ್ದರು. ಅವನು ಅವರನ್ನೆಲ್ಲಾ ಯಮಲೋಕಕ್ಕೆ ಅತಿಥಿಗಳಾಗಿ ಕಳುಹಿದನು. ಹೀಗೆ ಗಜಪುರದಿಂದ ಬಂದಿದ್ದ ಐನೂ

ರುಮಂದಿ ಮಲ್ಲರೂ ಮಡಿದರು. ಅದನ್ನು ನೋಡಿ, ವಿರಾಟರಾಯನು ಸಂತೋಷಪಟ್ಟನು. ವಲಲನ ಶೌರ್ಯವನ್ನು ಮೆಚ್ಚಿ ಕೊಂಡಾಡಿ, ಕಂಕನ ಮುಖವನ್ನು ನೋಡಿ.

ವಿರಾಟ :—“ಪೂಜ್ಯರೇ! ನಿಮ್ಮ ಅನುಗ್ರಹದಿಂದ ಬಹಳ ಮೇಲಾಯಿತು. ಉರಿಯುತ್ತಿದ್ದ ಕಿಚ್ಚು ನಂದಿತು. ಸಂತುಷ್ಟನಾದೆನು” (ಭೀಮನನ್ನು ನೋಡಿ) ಅಯ್ಯಾ ವಲಲನೇ! ನೀನೂ ಬಹಳ ಸಾಹಸಿ. ಶಹಭಾಸ್, ನಮ್ಮ ಕೀರ್ತಿಯನ್ನು ಉಳಿಸಿದೆ.

ಎಂದು ಹೊಗಳಿ, ಭೀಮಸೇನನನ್ನು ಬಹಳವಾಗಿ ಮನ್ನಿಸಿದನು. ಎಲ್ಲರೂ ಸಂತೋಷದಿಂದ ತಮ್ಮ ತಮ್ಮ ಮನೆಗಳಿಗೆ ಹೋದರು. ಕೌರವೇಂದ್ರನು ಕಳುಹಿಸಿಕೊಟ್ಟ ಮಲ್ಲರಲ್ಲಿ ಅವನಿಗೆ ಈ ಸುದ್ದಿಯನ್ನು ತಿಳಿಸಲು ಯಾರೂ ಉಳಿಯದೆ ಎಲ್ಲರೂ ಮಡಿದರು. ಪಾಂಡವರ ಗುಟ್ಟು ಬಯಲಾಗಲಿಲ್ಲ. ಹೀಗೆ ಭಗವದ್ಭಕ್ತರಿಗೆ ಉಂಟಾಗುವ ತೊಂದರೆಗಳು ಸುಲಭವಾಗಿ ಪರಿಹರವಾಗುವುವು.

——:0:——

## ಮೂರನೆಯ ಸಂಧಿ.

**ಸೂ||** ಕೀಚಕನು ದ್ರೌಪದಿಯನ್ನು ನೋಡಿ ಮದನಬಾಣಪೀಡಿತನಾಗಿ ತನ್ನ ಪ್ರಾಣ ಹೋಗುವುದುಕೂಡಾ ತಿಳಿಯದೆ ಆಕೆಯನ್ನು ತುಡುಕಿದನು.

ವಿರಾಟನಗರದಲ್ಲಿ ಪಾಂಡವರು ಯಾರಿಗೂ ತಮ್ಮ ಗುರುತು ತಿಳಿಯದ ಹಾಗೆ ಹತ್ತು ತಿಂಗಳ ಕಾಲ ಗುಪ್ತವಾಗಿದ್ದರು. ಬಳಿಕ ಒಂದುದಿನ ವಿಶೇಷ ಸಂಗತಿಯೊಂದು ನಡೆಯಿತು. ಪೂರ್ವದಲ್ಲಿ ರಾವಣನು ಸೀತಾದೇವಿಯನ್ನು ಬಯಸಿದ ಹಾಗೆ ಕೀಚಕನು ದ್ರೌಪದಿಯನ್ನು ಕಾಮಿಸಿದನು. ಒಂದು ದಿನ ಅವನು ತನ್ನ ಅಕ್ಕನಾದ ಸುಧೇಷ್ಣೆಯನ್ನು ನೋಡಬೇಕೆಂದು ಅಂತಃಪುರಕ್ಕೆ ಹೋದನು. ಅಲ್ಲಿ ಅಗ್ರಾಸನದಲ್ಲಿ ಕುಳಿತಿದ್ದ ರಾಣಿಗೆ ನಮಸ್ಕಾರಮಾಡಿ ಅವಳ

ಅಪ್ಪಣೆಯಿಂದ ಉಚಿತವಾದ ಪೀಠದಲ್ಲಿ ಕುಳಿತುಕೊಂಡನು. ಅವನ ನೋಟವು ಅಲ್ಲಿದ್ದ ಸ್ತ್ರೀಗಣದ ಮೇಲೆ ಬಿದ್ದಿತು. ಆ ಲಲನೆಯರ ಮಧ್ಯದಲ್ಲಿ ನಕ್ಷತ್ರಮಂಡಲದ ನಡುವೆ ಮೆರೆಯುವ ರೋಹಿಣಿಯಂತೆಯೂ, ದೇವ ಕನ್ಯೆಯರ ಮಧ್ಯದಲ್ಲಿ ಒಪ್ಪುವ ಊರ್ವಶಿಯಂತೆಯೂ ನದೀಗಣದ ನಡುವೆ ಇರುವ ಗಂಗೆಯಂತೆಯೂ ಪ್ರಕಾಶಿಸುತ್ತಿದ್ದ ದ್ರೌಪದಿಯನ್ನು ಕಂಡನು. ಆಕೆಯ ಅವಯವದ ಪರಿಮಳಕ್ಕೆ ತುಂಬಿಗಳು ಬಂದು ಮುತ್ತುತ್ತಿರಲು ಅವುಗಳ ಸಂಗೀತವು ಕಿವಿಗಿಂಪಾಗಿದ್ದಿತು. ಆಕೆಯ ಸೌಂದರ್ಯವನ್ನು ನೋಡಿದ ಕೂಡಲೇ ಅವನ ಕಣ್ಣುಗಳು ಅಲ್ಲಿಯೇ ದೃಢವಾಗಿ ನೆಟ್ಟುವು. ಮದನನು ಮೊನೆಯಾದ ಪುಷ್ಪಬಾಣಗಳನ್ನು ಎಸೆಯಲು ಅವು ಇವನ ಹೃದಯವನ್ನು ತಾಗಿದುವು. ಕೀಚಕನು ಬಂದು ನಿಮಿಷ ಕಾಲ ಏನೂತೋರದೆ ಸ್ತಬ್ಧನಾದನು. ಬಳಿಕ ಅವಳಲ್ಲಿ ನಟ್ಟ ಮನಸ್ಸಿನಿಂದ ಆಹಾ ಎಂತಹ ಲಾವಣ್ಯನಿಧಿ ! ಇವಳಾರಿರಬಹುದೆಂದು ಕೆನ್ನೆಯ ಮೇಲೆ ಕೈ ಇಟ್ಟುಕೊಂಡು, ಏನಿದು ! ಇವಳಾರು ! ಮೂರು ಲೋಕಗಳ ಮೋಹದ ತಿಲಕವೋ, ಕೊಲೆಗಡಿಕನಾದ ಮನ್ಮಥನ ಕ್ರೂರವಾದ ಬಾಣವೋ, ಮದನನ ಮದದಾಸೆಯೋ, ತಿಳಿಯದು. ಮನ್ಮಥನು ಈ ಲೋಕದ ಜನರನ್ನು ಕೆಡಹಬೇಕೆಂದು ಒಡ್ಡಿದ ಬಲೆಯೋ ಅಥವಾ ಯೋಗಿಗಳನ್ನು ಹೊಡೆಯಲಿಕ್ಕೆ ಕಾಮನು ಮಸೆದ ತೀಕ್ಷ್ಣವಾದ ಆಯುಧವೋ! ಆಹಾ ! ಎಂದು ಮೂಢನಾದನು. ಮದನಬಾಣಗಳು ಅವನ ಎದೆಯಲ್ಲಿ ನೆಟ್ಟುವು. ಅವನು ಮನಸೋತು ಪಾತಕವನ್ನು ನೆನೆದನು. ಅವನ ಮನಸ್ಸು ಸೂರೆ ಹೋಯಿತು. ಕಣ್ಣುಗಳು ಮಾರಲ್ಪಟ್ಟುವು. ಧೈರ್ಯವು ತೂರಿಹೋಯಿತು. ಇವಳು ಯಾರೆಂಬುದನ್ನು ಯೋಚಿಸುತ್ತಿದ್ದನು. “ ರತೀದೇವಿಯ ಅಂದವು ಹೀಗಿದೆಯೆ ? ಶ್ರೀದೇವಿಯ ಚೆಲುವಿಕೆಯೂ ಹೀಗಿಲ್ಲ. ಪಾರ್ವತಿಯ ರೂಪೇತಕ್ಕೆ ? ಶಾರದೆಯ

ರೂಪವು ಕೂಡ ಇವಳ ಸೌಂದರ್ಯಕ್ಕೆ ಸಮವಾಗದು. ಪಾಂಡವ ಪತ್ನಿಯಾದ ದ್ರೌಪದಿಯ ರೂಪಕ್ಕಿಂತ ಐದು ಪಾಲು ಹೆಚ್ಚೆಂದು ನನ್ನ ಮನಸ್ಸಿಗೆ ತೋರುತ್ತಿದೆ'' ಹೀಗೆ ಚಿಂತಿಸುತ್ತಿದ್ದ ಕೀಚಕನ ಅರಿವು ತಲೆ ಕೆಳಗಾಯಿತು. ಧೈರ್ಯವು ಕುಗ್ಗಿ ಹೋಯಿತು. ಲಜ್ಜೆಯು ನಷ್ಟವಾಯಿತು. ಸಾರಾಸಾರ ವಿಚಾರ ತಪ್ಪಿತು. ಭಯದ ಬೀಜವು ಮೊಳೆಯದೆ ಸೀದು ಹೋಯಿತು. ಕಾಮುಕನಾದ ಕೀಚಕನು ಮೈಮರೆತು, ಮದನಬಾಧೆಗೆ ಸಿಕ್ಕಿ ಅಂತಸ್ತಾಪದಿಂದ ಬೆಂದನು. ಅವನು ದ್ರೌಪದಿಯನ್ನು ತನ್ನ ಮನದಲ್ಲಿ ಸೆರೆಹಿಡಿದು ಕಂಣಿನಿಂದ ನುಂಗಿದನು. ಅನಂತರ ರಾಣಿಯನ್ನು ನೋಡಿ.

ಕೀಚಕ :— ಅಕ್ಕಾ! ಇವಳಾರು? ನಿನ್ನ ಓಲಗದ ಹೆಂಗಸರಲ್ಲಿ ಮೇಲುಗೈಯೆನಿಸಿರುವಳು.

ಸುಧೆ :— ತಮ್ಮ! ಇವಳು ಗಂಧರ್ವರ ಹೆಂಡತಿ, ನಮ್ಮಲ್ಲಿ ಬಂದು ಸೇರಿ ಕೆಲವು ದಿನಗಳಾದುವು. ಗೌರವದಿಂದ ಸಲಹುತ್ತಿರುವೆನು.

ಕೀಚ :— ಈಕೆಯನ್ನು ನೋಡಿದ ಮೊದಲು ನನ್ನ ಮನಸ್ಸು ಚಂಚಲವಾಗಿದೆಯಲ್ಲಾ!

ಸುಧೇ :— ಇದು ಸಹಜ. ಸುಂದರಿಯರನ್ನು ಕಂಡರೆ ಜಿತೇಂದ್ರಿಯರಿಗೂ ಮನಸ್ಸು ಚಂಚಲವಾಗುವುದು.

ಕೀಚಕ :— ಈಗ ಏನು ಮಾಡಲಿ? ನನ್ನ ಆಶೆ ಹೇಗೆ ನೆರವೇರುವುದು?

ಸುಧೇ :— ತಮ್ಮಾ! ಇವಳು ನಿನಗೆ ವಶಳಾಗತಕ್ಕ ಹೆಂಗಸಲ್ಲ. ಇವಳ ಗಂಡಂದಿರು ಗಂಧರ್ವರು. ಬಹು ಬಲಶಾಲಿಗಳು. ಕೆಟ್ಟಯೋಚನೆ ಬಿಟ್ಟು ಮನೆಗೆ ಹೋಗು.

ಕೀಚಕನು ಬದಲು ಹೇಳಲು ದಾರಿ ಇಲ್ಲ. ಮೌನವಾಗಿ

ಮನೆಗೆ ಹೋದನು. ಆದರೇನು? ಮನಸ್ಸಿಗೆ ಯಾವುದಾದರೂ ನೆಟ್ಟರೆ ಅದನ್ನು ಈಚೆಗೆ ತೆಗೆಯುವುದು ಕಷ್ಟ. ಅದರಲ್ಲಿಯೂ ಕಾಮ ಬಾಧೆಗೆ ಸಿಲ್ಕಿದವನಿಗೆ ದಿಕ್ಕೇ ತೋರದೆ ಕೊಂಗಿ ಹೋಗುವನು.

ಆ ರಾತ್ರಿ ಬಲುಕಷ್ಟದಿಂದ ಕಳೆದನು. ಕಣ್ಣಿಗೆ ನಿದ್ದೆ ಹತ್ತ ಲಿಲ್ಲ. ಮರುದಿನ ಬೆಳಗ್ಗೆ ಎದ್ದನು. ಕರ್ತವ್ಯವೇ ತಿಳಿಯದು. ಅಂತಃಪುರದ ಕಡೆಗೇನೇ ಹೊರಟನು. ಬಾಗಿಲಲ್ಲಿ ದ್ರೌಪದಿ ನಿಂತಿ ದ್ದಳು. ಅವಳನ್ನು ಕಂಡ ಕೂಡಲೇ ತನ್ನ ಸಂಗಡ ಇದ್ದ ಪರಿಜನರ ನ್ನೆಲ್ಲಾ ಹಿಂದಕ್ಕೆ ಕಳುಹಿಸಿಬಿಟ್ಟು ಒಬ್ಬ ಹುಡುಗನನ್ನು ಮಾತ್ರ ಜತೆ ಯಲ್ಲಿ ಕರೆದುಕೊಂಡು ಹೊರಟನು. ನರಿಯು ಹೆಣ್ಣು ಸಿಂಹವ ನ್ನು ಬಯಸುವಂತೆಯೂ, ಹಾವು ಗರುಡನರಾಣಿಯನ್ನು ಕಾಮಿಸು ವಂತೆಯೂ ಕೀಚಕನು ಪಾಂಚಾಲಿಯನ್ನು ಮೋಹಿಸಿ, ಆಕೆಯಬಳಿಗೆ ಬಂದನು. ಆಕೆಯು ಅವನ ಮನಸ್ಸಿನ ಅಭಿಪ್ರಾಯವನ್ನು ತಿಳಿದು ತನ್ನ ಮನಸ್ಸಿನಲ್ಲಿ ಹೆದರಿದಳು. "ಅಹ! ಇದೇನು ಅವಸ್ಥೆ ಬಂತು! ಇದುವರೆಗೂ ಯಾರ ದೃಷ್ಟಿಗೂ ಬೀಳದೆ ಇದ್ದೆನಲ್ಲಾ! ಇಂದು ಈ ನೀ ಚನ ಕಣ್ಣಿಗೆ ಸಿಕ್ಕಿದ್ದೇನೆ! ಇವನು ನನಗೆ ಮನಸೋತನು. ಇವನ ಪರಿಣಾಮ ಕಷ್ಟ" ಎಂದು ಸ್ವಲ್ಪ ಹಿಂದಕ್ಕೆ ಸರಿದಳು. ಕೀಚ ಕನು ಮುಂದೆ ಬರುವ ಕಷ್ಟಗಳಿಗೆ ಅಂಜದೆ, ಅವಳ ಮುಂದೆ ಬಂದು ನಿಂತು ಇಂತೆಂದನು.

ಕೀಚ :—ಎಲಾ ಸುಂದರಾಂಗಿ! ಇತ್ತನೋಡು. ನನ್ನನ್ನು ಮಾತನಾಡಿಸಬಾರದೆ?

ಸೈರಂ :—ಅಯ್ಯಾ ದಳಪತಿಯೇ! ನಿನ್ನ ಸಂಗಡ ನನಗೆ ಏತರ ಮಾತು? ನೀನು ಪರಸತಿಯರನ್ನು ಮಾತನಾಡಿಸಬಾರದು.

ಕೀಚ:—ಮೋಹನಾಂಗಿ! ಹಾಗೆ ಹೇಳಬೇಡ, ನಿನ್ನನ್ನು ಮೋಹಿಸಿ ಮರುಳಾಗಿದ್ದೇನೆ. ನನ್ನ ಬಯಕೆಯನ್ನು ನೆರವೇರಿಸಿ ಈ ಹುಚ್ಚು ಬಿಡಿಸು.

ಸೈರಂ:—ಛೀ! ಎಂತಹ ಮಾತುಗಳಾಡುತ್ತಿಯೆ? ರಾಜ ಪುತ್ರನಾದ ನಿನಗೆ ಇಂತಹ ನುಡಿಗಳು ಸಲ್ಲವು, ನನ್ನನ್ನು ಬಯಸಿ ನಿನ್ನ ಕೊರಳಿಗೆ ವಿಪತ್ತನ್ನು ತಂದುಕೊಳ್ಳಬೇಡ, ನಿನ್ನ ಕೈಗೆ ಸಿಕ್ಕಿ ನಿನ್ನೊಂದಿಗೆ ಅರಮನೆಗೆ ಬರತಕ್ಕಷ್ಟು ಸುಲಭೆಯು ನಾನೆಂದು ತಿಳಿಯ ಬೇಡ, ಪರಸ್ತ್ರೀಯನ್ನು ಬಯಸಿದರೆ ನಿನಗೆ ಈ ಲೋಕದಲ್ಲಿ ಕಷ್ಟವು ತಪ್ಪದು, ಪರದಲ್ಲಿ ನರಕವು ಸಿದ್ಧವಾಗಿರುವುದು, ಇಂತಹ ಯೋಚನೆ ಮಾಡಬೇಡ. ಸುಮ್ಮನೆ ಹೋಗು.

ಕೀಚ:—ಎಲೆ ಸೈರಂಧ್ರೀ? ನಾನು ಈ ದೇಶಕ್ಕೂ ಸೈನ್ಯ ಕ್ಕೂ ಸರ್ವಾಧಿಕಾರಿಯಾಗಿದ್ದೇನೆ. ಇಂತಹ ನನ್ನನ್ನು ತಿರಸ್ಕರಿಸ ಬೇಡ. ನನ್ನ ಮನಸ್ಸು ನಿನ್ನಲ್ಲಿ ಸೆಟ್ಟುಹೋಗಿದೆ. ಇದನ್ನು ಹಿಂದಿ ರುಗಿಸಲಾರೆನು. ನಿನ್ನ ಕಟಾಕ್ಷವನ್ನು ನನ್ನ ಮೇಲೆ ಚೆಲ್ಲಿ ದಯೆ ತೋರು. ಮೆಲ್ಲನೆ ನನ್ನ ಕಡೆ ಅಡಿಯಿಡು, ಸತ್ತ ಜೀವಕ್ಕೆ ಚೇತನ ವನ್ನುಂಟು ಮಾಡು. ಕರುಣೆ ಇಲ್ಲವೇ? ನಿನ್ನನ್ನೇ ಒಲಿದು ಬಂದ ನನಗೆ ಅಭಯವನ್ನು ಕೊಟ್ಟು ರಕ್ಷಿಸು.

ಸೈರಂ:—(ಸಿಟ್ಟಿನಿಂದ) ಎಲೋ ನೀಚಾ! ಪರಸತಿಯನ್ನು ಬಯಸಿದರೆ ಸದ್ಗತಿ ದಕ್ಕುವುದೆ? ಅವನ ಐಶ್ವರ್ಯವು ನಿಲ್ಲುವುದೆ; ಕೀ ರ್ತಿಯು ಮಲಿನವಾಗದೆ; ಹತ್ತು ತಲೆಗಳನ್ನು ಪಡೆದ ರಾವಣನು ಪರ ವಧುವಾದ ಸೀತೆಯನ್ನು ಬಯಸಿದ್ದರಿಂದ ಪುತ್ರಮಿತ್ರ ಸಹಿತನಾಗಿ ನಾಶಹೊಂದಿದ ಸುದ್ಧಿ ನೀನು ಕೇಳಿಲ್ಲವೆ? ಪಾಪಿ! ತೊಲಗಿಹೋಗು.

ಕೀಚ—ಪರಲೋಕದಲ್ಲಿ ಬರುವ ಸದ್ಗತಿಯು ಬೆಂದು ಹೋ ಗಲಿ. ಯಮದೂತರು ಬಂದು ನನ್ನನ್ನು ಎಳೆದೊಯ್ದು ಬಾಧಿಸಲಿ. ಬಂಧುಗಳು ನನ್ನನ್ನು ಹೊರಗೆ ಹಾಕಲಿ. ರಾಣಿಯರು ನನ್ನನ್ನು ಕೈ ಬಿಡಲಿ. ಎಲೌ ಸುಂದರೀ! ನಿನಗೆ ನಾನು ಒಲಿದಿರುವೆನು, ನನ್ನ ಮನಸ್ಸನ್ನು ಹಿಂದಿರುಗಿಸಲಾರೆನು. ಕಠಿನವಾಕ್ಯಗಳಿಂದ ನನ್ನನ್ನು

ತಿರಸ್ಕರಿಸದೆ ಸಲಹು ; ಮುಗುಳುನಗೆಯ ಬೆಳದಿಂಗಳನ್ನು ಚೆಲ್ಲಿ ನನ್ನ ಅಂತಸ್ತಾಪವೆಂಬ ಕತ್ತಲೆಯನ್ನು ತೊಲಗಿಸು ; ನಿನ್ನ ಮಧುರವಾಕ್ಯಗಳೆಂಬ ಅಮೃತದಿಂದ ನನ್ನ ನೀರಡಕೆಯನ್ನು ಹೋಗಲಾಡಿಸು. ನನ್ನ ಮೇಲೆ ಪ್ರೀತಿಯನ್ನು ತೋರು.

ಸೈರಂಧ್ರಿಯು ಈ ಮಾತುಗಳನ್ನು ಕೇಳಿ ಕೈಗಳಿಂದ ತನ್ನ ಕಿವಿಗಳನ್ನು ಮುಚ್ಚಿಕೊಂಡಳು. ಮನಸ್ಸಿನಲ್ಲಿ ತನ್ನ ಪತಿಗಳನ್ನು ಧ್ಯಾನಿಸಿ ಸೂರ್ಯನನ್ನು ನೋಡುತ್ತಾ ‹‹ಹಾ ಕೃಷ್ಣಾ ! ಅನಾಥ ಬಂಧುವೇ ! ದೀನಳನ್ನು ರಕ್ಷಿಸು'' ಎಂದು ದೇವರನ್ನು ಪ್ರಾರ್ಥಿಸಿದಳು. ಬಳಿಕ ತನ್ನಲ್ಲಿ ‹‹ಅಕ್ಕಟಾ ! ಪರರ ಮನೆಯಲ್ಲಿ ಸಿಕ್ಕಿಕೊಂಡು ಕಕ್ಕುಲಿತೆ ಪಡುತ್ತಿರುವ ನನ್ನಲ್ಲಿ ಆಕ್ಕರೆಯನ್ನು ತೋರತಕ್ಕವರಾರು ?'' ಎಂದು ಹಲುಬುತ್ತಾ ತಲೆಬಾಗಿದಳು. ನೀಚನಾದ ಕೀಚಕನಸಂಗಡ ಸಾಕ್ಷಾತ್ತಾಗಿ ಸಂಭಾಷಣೆ ಮಾಡುವುದಕ್ಕೆ ಇಷ್ಟವಿಲ್ಲದೆ (ಪತಿವ್ರತೆಯರಿಗೆ ಪರಪುರುಷ ಸಂಭಾಷಣಸ್ಪರ್ಶನಾದಿಗಳು ನಿಷಿದ್ಧವಾದ್ದರಿಂದ,) ಕೈಯಲ್ಲಿ ಕಡ್ಡಿಯನ್ನು ಹಿಡಿದು, ಅದನ್ನು ಕುರಿತು ಮಾತನಾಡುವಂತೆ ಇಂತೆಂದಳು.

ಸೈರಂ:—ಎಲಾ ದುರಾತ್ಮನೆ ! ಇಂತಹ ಮಹಾಪರಾಧವನ್ನು ಏತಕ್ಕೆ ಚಿಂತಿಸಿದೆ ?ವ್ಯರ್ಥವಾಗಿ ನಿನ್ನ ಕುಲದ ಬೇರನ್ನು ಕಿತ್ತುಹಾಕುವೆಯೊ ? ಇದರಿಂದ ನಿನಗೆ ಫಲವೇನು ? ಅಪಕೀರ್ತಿಗೆ ಅಂಜಬೇಡವೊ ? ಇವರು ಹೆತ್ತವರು, ಇವರು ಒಡಹುಟ್ಟುಗಳು, ಇವರು ಮಕ್ಕಳು ಎಂಬ ಯೋಚನೆಯಾದರೂ ಇಲ್ಲದ ಅಜ್ಞನಾಗಿದ್ದೀಯೆ ? ಅನ್ಯಾಯವಾಗಿ ಏತಕ್ಕೆ ಕೆಟ್ಟುಹೋಗುವೆ ? ದುಡುಕಬೇಡ, ಕೆಲಸಕ್ಕೆ ಬಾರದ ಇಂತಹ ಮಾತುಗಳನ್ನು ಆಡಸಲ್ಲದು, ತೊಲಗಿಹೋಗು. ನಿನಗೆ ಇದು ತರವಲ್ಲ. ನಿದಾನವಾಗಿ ಯೋಚಿಸು. ಈ ಮಾತನ್ನು ಕೇಳಿದವರು ಸೈರಿಸುವರೆ ? ನನ್ನ ಪತಿಗಳು ಸಾಮಾನ್ಯರೆಂದು ತಿಳಿದಿ

ರುವೆಯೊ? ಅವರು ದೇವತಾಗಣದಲ್ಲೆಲ್ಲಾ ಬಲಶಾಲಿಗಳೆಂದು ಹೆಸರು ಪಡೆದಿರುವರು. ಅವರು ಮುನಿದರೆ ನೀನು ಬದುಕಲಾರೆ. ಈ ಯೋಚನೆಬಿಡು.

ಕೀಚ—ಮೋಹಿನೀ! ಹೇಗಿದ್ದರೂ ನನಗೆ ಕೇಡುತಪ್ಪದು. ಮದನಬಾಧೆಯು ಹೆಚ್ಚಾಗಿದೆ; ಅದನ್ನು ತಡೆಯಲಾರೆನು. ಸತ್ತರೂ ನಿನ್ನ ಕೂಡ ಸೇರಿ ಸಾಯುವೆನೇ ಹೊರತು ವಿರಹತಾಪದಿಂದ ಸಾಯಲೊಲ್ಲೆನು, ನನ್ನನ್ನು ಕಟಾಕ್ಷಿಸಿ ನೋಡು: ಕರುಣಿಸಿ ನನ್ನ ಜೀವವನ್ನು ರಕ್ಷಿಸು.

ಸೈರಂ—ಎಲೋ ನೀಚಾ! ಏಕೆ ಮನಸ್ಸುಬಂದಹಾಗೆ ಬದರುತ್ತೀ? ಈ ಹುಚ್ಚುಮಾತುಗಳನ್ನು ಬಿಡು, ನಾನು ಕುಲಟೆಯಲ್ಲ, ಗಂಧರ್ವರಹೆಂಡತಿ, ಎಂದು ತಿಳಿ. ನನ್ನ ಪತಿಗಳು ಬಹಳ ಬಲಶಾಲಿಗಳು, ಅವರೆದುರಿಗೆ ನಿನ್ನ ತುಂಟಾಟಗಳು ಸ್ವಲ್ಪವೂ ನಡೆಯವು, ಸುಮ್ಮನೆ ಬಗುಳಬೇಡ, ಅಪಕೀರ್ತಿಗೆ ಗುರಿಯಾಗಬೇಡ, ಮನೆಗೆಹೋಗಿ ಸೇರಿ ಸುಖವಾಗಿರು, ಇನ್ನೊಂದು ಸಾರಿ ಸಾರಿ ಹೇಳುತ್ತೇನೆ. ತೊಲಗಿ ಹೋಗು.

ಕೀಚ—ಎಲಾ ಮಾನಿನೀ! ನಿನ್ನ ಪತಿಗಳು ಬಲಶಾಲಿಗಳು. ನಾನು ಸಾಮಾನ್ಯನು ಎಂದು ಭಾವಿಸಿರುವೆಯಾ? ನನ್ನ ಶೌರ್ಯವನ್ನು ನೀನು ಅರಿತಿದ್ದರೆ ಈ ಮಾತನಾಡುತ್ತಿರಲಿಲ್ಲ. "ಬಡವನ ಕೋಪ ದವಡೆಗೆ ಮೃತ್ಯು" ಎಂಬ ಗಾಥೆಯುಂಟು. ನಿನ್ನ ಪತಿಗಳು ನನ್ನನ್ನು ಏನು ಮಾಡಬಲ್ಲರು? ನೀನು ಪ್ರೀತಿಸಿದರೆ ಸಾಕು. ಅವರನ್ನು ತಡೆದು ಅಟ್ಟಿಬಿಡುವೆನು. ಯುದ್ಧಕ್ಕೆ ನಿಂತರೆ ನಾನು ಶಿವನನ್ನು ಕೂಡ ಹೆದರಿಸಿ ಓಡಿಸಬಲ್ಲೆನು, ಎಲಾ ಭಾಮೆ! ತುಂಬಿಯು ಹುಳುಕನಲ್ಲವೇ! ಕೋಗಿಲೆಯನ್ನು ನೋಡು; ಗಳಪುತ್ತಿರುವನು; ಚಂದ್ರನೂ ವಸಂತನೂ ಸಾಮಾನ್ಯರೇ! ಮಾನ್ಯರನ್ನು ಕೂಡ ಕಡಿದಿಡುವರು.

ತಂಗಾಳಿಯು ಯೋಗ್ಯನೆಂದು ತಿಳಿದಿರುವೆಯಾ ? ಬಲುಕೆಟ್ಟವನು. ಮಾಕಂದನು (ಮಾವಿನಗಿಡ) ನೀಚನು. ಮನ್ಮಥನು ಲೋಕವನ್ನೆಲ್ಲಾ ಕೊಲ್ಲಲಿಕ್ಕೆ ಸಿದ್ಧವಾಗಿರುವನು. ನೀನು ಪ್ರೀತಿಸದೆ ಹೋದರೆ ಇವರೆಲ್ಲರೂ ಸೇರಿ ಪಾಪಿಯಾದ ನನ್ನನ್ನು ಕೊಲ್ಲದೆ ಬಿಡರು, ಕರುಣಿಸು.

ಸೈರಂಧ್ರಿ:—ಪಾಪೀ! ಏಕೆ ಸುಮ್ಮನೆಗಳಹುತ್ತೀಯೇ ? ನಿನ್ನನ್ನು ಒಲಿದು ನಾವು ಕೊಲ್ಲೆವು. ಕೊಲ್ಲುವ ಸುಭಟರು ಬೇರೆ ಇರುವರು. ನನ್ನ ಪತಿಗಳು ನಿನ್ನನ್ನು ಕೊಂದು ಅಷ್ಟುಮಾತ್ರದಿಂದಲೇ ಸುಮ್ಮನೆ ಆಗುವರೆಂದು ತಿಳಿಯಬೇಡ. ನಿನ್ನ ಕುಲವನ್ನೆಲ್ಲಾ ನಿರ್ಮೂಲಮಾಡಿದ ಹೊರತು ಬಿಡತಕ್ಕವರಲ್ಲ. ನೀಚನು ಹುಟ್ಟಿ, ನಮ್ಮನ್ನೆಲ್ಲಾ ಹಾಳುಮಾಡಿದನೆಂದು ನಿಮ್ಮ ಕುಲದವರು ದುಃಖಪಡುವರು. ನಿನಗೆ ಅಪಕೀರ್ತಿ ಬರುವುದೇ ಹೊರತು ಇದರಿಂದ ಮತ್ತಾವ ಪ್ರಯೋಜನವೂ ಉಂಟಾಗಲಾರದು. ಬಾಯಿಗೆ ಬಂದಹಾಗೆ ಏಕೆ ಬಗುಳುತ್ತೀಯೇ? ನಿನ್ನ ಹೆಂಡತಿಯರು ನಿನ್ನ ಸುತ್ತು ಗೋಳಿಡಲು ಕಾರಣವಾಗುವುದು. ಪಾಪಿಹೆಂಗಸು ; ಕೊಲೆಗೆಡುಕಿ, ಪ್ರಿಯಪತಿಯನ್ನು ಕೊಲ್ಲಿಸಿದಳು, ಎನ್ನುವ ಈ ನಿಂದೆಗೆ ನಾನು ಗುರಿಯಾಗಲಾರೆನು. ಬೇಡ. ಸುಮ್ಮನೆ ಹೋಗು.

ಕೀಚ :—ಎಲೆ ಚೆಲುವೆ ; ಯುದ್ಧದಲ್ಲಿ ವಿಷ್ಣುವಾಗಲಿ, ಬ್ರಹ್ಮನಾಗಲಿ ನನ್ನ ಎದುರಿಗೆ ನಿಲ್ಲಲಾರರು, ನಿನ್ನ ಸಂಗಡ ಹೇಳಿ ಫಲವೇನು ? ನಿನ್ನ ಪತಿಗಳನ್ನು ನನಗೆ ತೋರಿಸು, ತೀರಿಸಿಬಿಡುವೆನು, ಆಗ ನನ್ನ ಸಾಮರ್ಥ್ಯವನ್ನು ನೀನೇ ಪ್ರತ್ಯಕ್ಷವಾಗಿನೋಡುವೆ ?

ಸೈರಂ:—ಎಲೋ ಹುಚ್ಚಾ ; ರಾವಣನು ಪರಸ್ತ್ರೀಯನ್ನು ತನ್ನ ಅರಮನೆಯಲ್ಲಿ ಸೆರೆಯಿಟ್ಟನು, ಕಪಿಗಳ ಹಿಂಡು ಲಂಕೆಯನ್ನು ಮುತ್ತಿ ಹಾಳು ಮಾಡಿತು. ಶೂರನಾದ ಆ ರಾವಣನು ರಾಮನ

ಬಾಣಗಳಿಂದ ಪುತ್ರ ಮಿತ್ರ ಭ್ರಾತೃ ಸಹಿತನಾಗಿ ಮೃತನಾದನು, ಇದನ್ನು ನೀನು ಕೇಳಿ ಅರಿಯೆಯಾ ?

ಕೀಚ :—ಕಾಂತಾಮಣಿಯೆ, ನಿನ್ನ ಪುರಾಣಗಳು ಹಾಗಿರಲಿ. ನನ್ನನ್ನು ತಿರಸ್ಕರಿಸಬೇಡ. ನನ್ನ ಮನಸ್ಸು ಮೊದಲೇ ನಿನಗೆ ಮಾರಲ್ಪಟ್ಟಿದೆ. ಅದನ್ನು ಸೂರೆಗೊಂಡು, ಮರಳಿ ನನ್ನ ಶರೀರಕ್ಕೆ ಬಾಣಗಳನ್ನು ಏಕೆ ಹೊಡೆಯುವೆ ? ಕೈಬಿಡಬೇಡ, ರಕ್ಷಿಸು. ನನ್ನ ಹೃದಯಕ್ಕೆ ತಾಪವನ್ನುಂಟು ಮಾಡಬೇಡ. ನನ್ನಲ್ಲಿ ಕರುಣಿಸಿ ಮರಣ ಬಾಧೆಯನ್ನು ತಪ್ಪಿಸು.

ಸೈರಂ :—ಎಲೆ ಮರುಳೆ ! ಮಾರಿಯಸಂಗಡ ಸರಸವೆ ? ನಿನ್ನ ಮನಸ್ಸಿನಲ್ಲಿರುವ ಈ ಕೆಟ್ಟಯೋಚನೆಯನ್ನು ಬಿಡು. ಬಲವಂತದಿಂದ ಮೃತ್ಯುವನ್ನು ಕೂಡಬಹುದೆ ? ಕಾಡುಕಿಚ್ಚಿನ ಪ್ರತಿಮೆಯನ್ನು ಕಾಮಿಸಿ ಅಪ್ಪಿಕೊಳ್ಳುವೆಯೊ ? ಕ್ರೂರವಾದ ಬಾಣಕ್ಕೆ ಮೈಯೊಡ್ಡುವರೆ ? ಪಾಪೀ ! ನನ್ನ ಗಂಡಂದಿರು ಕಂಡರೆ ಅಥವಾ ಕೇಳಿದರೆ ನಿನ್ನ ತಲೆ ಚೆಂಡಾಡಿ, ಮುಂಡವನ್ನು ತುಂಡುತುಂಡಾಗಿ ಕಡಿದುಬಿಸುಡುವರು. ಅವರು ಅರಿಯಲಿಕ್ಕೆ ಮೊದಲೇ ಬೇಗ ಹೋಗಿ ನಿನ್ನ ಅರಮನೆಯನ್ನು ಸೇರಿಕೋ.

ಕೀಚ :—ವನಿತಾಮಣಿ ! ಒರಿಯುಮಾತುಗಳಿಂದಲೇ ನನ್ನನ್ನೇಕೆ ಕೊಲ್ಲುವೆ ? ಇವಳು ಮಾತಾಳಿಎಂದು ತಿಳಿಯಬೇಡ, ಪ್ರಾಣದ ಮೇಲೆ ಇಷ್ಟು ಸರಸವೇ? ಬೇಡ. ನನ್ನನ್ನು ಕಾಪಾಡು. ನನ್ನ ಹೆಂಡತಿಯರನ್ನೆಲ್ಲಾ ನಿನ್ನ ತೊತ್ತುಗಳನ್ನಾಗಿ ಮಾಡುವೆನು. ನನ್ನ ದೇಹಕ್ಕೆ ನೀನೇ ಒಡೆಯಳಾಗಿರು, ನಿನ್ನಲ್ಲಿ ನೆಟ್ಟ ಕಣ್ಣುಗಳನ್ನು ಹಿಂದಿರುಗಿಸಲಾರದೆ ಇದ್ದೇನೆ. ನನ್ನನ್ನು ನೋಯಿಸಬೇಡ. ದಯೆತೋರಿಸಿ ಸಲಹು.

ಸೈರಂ:—ಎಲಾ ಪಾಪೀ ! ನ್ಯಾಯವನ್ನು ಅನ್ಯಾಯವೂ, ಧರ್ಮವನ್ನು ಅಧರ್ಮವೂ ಗೆಲ್ಲುವುದುಂಟೆ ? ಸೂರ್ಯನಿಗೂ ಕತ್ತಲೆಗೂ

ಎಷ್ಟರ ಅಂತರವಿದೆಯೋ ನನ್ನ ಪತಿಗಳಿಗೂ ನಿನಗೂ ಅಷ್ಟು ಅಂತರ ವಿರುವುದೆಂದು ತಿಳಿ, ಅವರು ನಿನ್ನನ್ನು ರಕ್ಷಿಸರು, ಅವರ ಕೈಬಲವು ನಿನಗೆ ಗೊತ್ತಿಲ್ಲ. ಸಿಂಹದ ಎದುರಿಗೆ ನಾಯಿ ನಿಲ್ಲಬಲ್ಲುದೇ ? ಛೀ ಹೋಗು. (ಎಂದು ಹಿಂದಿರುಗಿದಳು.)

ಅವಳ ಮಾತಿನಲ್ಲಿ ಸ್ವಲ್ಪವೂ ಆಶೆ ತೋರಲಿಲ್ಲ. ಅವಳನ್ನು ನೋಡಿದ ಕೂಡಲೇ ಕೀಚಕನಿಗೆ ಮನಸ್ಸಿನ ಸರ್ವಸ್ವವೂ ಸೂರೆಹೋಯಿತು. ಬಲವು ಕುಗ್ಗಿತು. ಬುದ್ಧಿ ಸಡಲಿತು. ಖಡ್ಗಹಸ್ತನಾದ ಆ ನೀಚನು ದ್ರೌಪದಿಯ ಸದುಪದೇಶಗಳನ್ನು ಕೇಳಲಿಲ್ಲ. ಅವಳ ಬಿರು ನುಡಿಗಳನ್ನೂ ಲಕ್ಷ್ಯಮಾಡಲಿಲ್ಲ. ಅಲ್ಲಿಂದ ಮನೆಗೆಹೋಗದೆ ಹಾಗೆಯೇ ಹೊರಟು ಅಂತಃಪುರಕ್ಕೆ ಹೋದನು. ತನ್ನ ಅಕ್ಕನಾದ ಸುಧೇಷ್ಣೆಯನ್ನು ಕಂಡು ಅವಳ ಕಾಲುಗಳಿಗೆ ಎರಗಿದನು.

ಸುಧೇಷ್ಣೆಯು ಅವನನ್ನು ನೋಡಿ, ಮೇಲಕ್ಕೆ ಎಬ್ಬಿಸಿ, (ತನ್ನಲ್ಲಿ) ಇದೇನು ! ಹೆಣಮೋರೆ ಬಿದ್ದಿದೆ ! ಈ ಪಾಪಿಯು ಸೈರಂಧ್ರಿಯನ್ನು ಕೆಣಕಿದನೋ ! ಇದರಿಂದ ತನ್ನ ವಂಶವನ್ನೇ ಹಾಳುಮಾಡಿಕೊಳ್ಳುವನಲ್ಲಾ ! ಈಗ ಏನು ಮಾಡಲಿ ? ಎಂದು ಮನಸ್ಸಿನಲ್ಲಿ ಚಿಂತಿಸಿ, ಇವನಿಗೆ ಮುಖಕಾಂತಿಗುಂದಿದೆ ; ಮಹಿಮೆಯು ತೊಲಗಿದೆ, ಚಿಂತಾ ಸಮುದ್ರದಲ್ಲಿ ಮುಳುಗಿರುವನು. ಮಾತನಾಡಿಸಿನೋಡೋಣ.

ಸುಧೇ :—ತಮ್ಮಾ ! ಏತಕ್ಕೆ ಹೀಗಿದ್ದೀ ? ನಿನ್ನ ಮನಸ್ಸಿನ ಚಿಂತೆಗೆ ಕಾರಣವೇನು ? ಮರೆಮಾಜಬೇಡ. ಹೇಳು.

ಕೀಚ:—(ನಗುತ್ತಾ) ಅಕ್ಕಾ ! ಮತ್ತೇನು ಹೇಳತಕ್ಕದ್ದು ? ಬೇರೆ ಬಿನ್ನಹವೇನೂ ಇಲ್ಲ. ನಿನ್ನ ಓಲಗದ ಹೆಂಗಸರಿಗಿಂತ ನೂರು ಪಾಲು ಹೆಚ್ಚಾದ ಸೌಂದರ್ಯವುಳ್ಳ ಸೈರಂಧ್ರಿಯಲ್ಲಿ ನನ್ನ ಮನಸ್ಸು ನೆಟ್ಟು ಹೋಯಿತು. ಅವಳನ್ನು ಕೂಡದಿದ್ದರೆ ನನ್ನ ಪ್ರಾಣಗಳು

ದೇಹದಲ್ಲಿ ನಿಲ್ಲಲಾರವು. ಆ ಸುಂದರಿಯನ್ನು ನನ್ನ ವಶಪಡಿಸಿ ಪ್ರಾಣಗಳನ್ನು ಉಳಿಸು.

ಸುದೇ :—ತಮ್ಮಾ ! ಮದನನ ಬಾಣಗಳಿಗೆ ಸಿಲುಕಿದೆಯೋ ? ಕೀರ್ತಿಯೆಂಬ ಬಳ್ಳಿಯ ಕುಡಿಯನ್ನು ಒಣಗಿಸಿಬಿಟ್ಟೆಯೋ ? ಕುಲಕ್ಕೆ ಯಮಸ್ವರೂಪನಾಗಿ ನೀನು ಏತಕ್ಕೆ ಹುಟ್ಟಿದೆ ! ಹಿಂದೆ ರಾವಣನಿಗೆ ಆದಗತಿಯನ್ನು ಕೇಳಿಲ್ಲವೆ? ನಿನ್ನ ಧೂರ್ತತನಕ್ಕೆ ಹೆದರುವೆನು. ರಾಜಪುತ್ರರಿಗೆ ಪರಸ್ತ್ರೀಯರ ಬಯಕೆ ಸಲ್ಲದು. ಪರಸ್ತ್ರೀಗೆ ಆಸೆಪಡುವುದು ಧರ್ಮವಲ್ಲ, ಯುದ್ಧದಲ್ಲಿ ಓಡಿಹೋಗುವುದೂ ಸಲ್ಲದು. ದುಷ್ಟರೊಂದಿಗೆ ಆಡಿ ವಿರಾಟ ರಾಯನನ್ನು ಕೊಲ್ಲಲೆಳಸಿದೆಯಾ ? ನಿನ್ನ ಚೇಷ್ಟೆಗಳಿಗೆ ಅಂಜುವೆನು. (ಮುಖವನ್ನು ಹಿಂದಿರುಗಿಸಿಕೊಂಡು) ಕೀಚಕನೇ ಕೇಳು, ಆ ಸೈರಂಧ್ರಿಯು ಸುಂದರಿಯೇ ಸರಿ ; ಅವಳ ಪತಿಗಳು ಗಂಧರ್ವರಂತೆ ! ಸುರರಿಗೂ ನರರಿಗೂ ಸಮವೆ ? ದೇವತೆಗಳು ಮುಳಿದರೆ ಅವರ ಎದುರಿಗೆ ನಿಲ್ಲತಕ್ಕವರಾರು ? ನಾವು ಕೆಟ್ಟು ಹೋಗುವಕಾಲಕ್ಕೆ ನಮ್ಮನ್ನು ಯಾರು ರಕ್ಷಿಸುವರು ? ನೀನು ಈ ಚಾಪಲ್ಯವನ್ನು ಬಿಡು. ಅವಳ ಕೋರಿಕೆ ನಿನಗೆ ಬೇಡ, ನನ್ನ ಅಂತಃಪುರದಲ್ಲಿರುವ ಈ ಹೆಂಗಸರ ಗುಂಪಿನಲ್ಲಿ ನೀನು ಯಾವ ಹೆಂಗಸನ್ನು ಬಯಸುತ್ತೀ ಹೇಳು. ಮುಂದಾಗಿ ಅವಳನ್ನು ನಿನಗೆ ಕೊಟ್ಟು ಮದುವೇ ಮಾಡುವೆನು. ಸುಖವಾಗಿರು.

ಕೀಚ :—ಅಕ್ಕಾ ! ನೀನೇನು ಹುಚ್ಚಳೋ ! ನನ್ನ ಮನಸ್ಸು ಸೈರಂಧ್ರಿಯಲ್ಲಿ ಸಿಕ್ಕಿ ಬೇರುಬಿಟ್ಟುಕೊಂಡಿದೆ. ಮನಸ್ಸನ್ನು ಬಿಟ್ಟು ಮಿಕ್ಕ ಶರೀರಕ್ಕೆ ಮದುವೇ ಮಾಡುವೆಯೋ ? ನನ್ನ ಚೇಷ್ಟೆಯು ಮರುಳಾಟವಾದರೂ ಆಗಲಿ, ಇದು ಸರಿಯಲ್ಲವೆಂಮ ಜನರು ದೂರಿದರೂ ದೂರಲಿ, ಈ ಸೈರಂಧ್ರಿಯನ್ನೇ ನನಗೆ ಸೇರಿಸಿ ಕೊಡಬೇಕು. ಇನ್ನಾವ ಮಾತುಗಳನ್ನು ಹೇಳಿದರೂ ನನಗೆ ಸೊಗಸಲಾರವು. ನನ್ನ

ಕಣ್ಣುಗಳು ಇತರ ರೂಪಗಳನ್ನು ನೋಡಲಿಕ್ಕೆ ಅಸಹ್ಯಗೊಂಡಿವೆ. ಆಕೆಯನ್ನುಳಿದು ಮಿಕ್ಕವರ ಹೆಸರುಗಳು ನನ್ನ ನಾಲಿಗೆಗೆ ಶತ್ರುಗಳಾಗಿವೆ, ಗ್ರೀಷ್ಮಕಾಲದ ಸಸಿಯಂತೆ ಬಾಡುತ್ತಿರುವ ನನ್ನ ಮನಸ್ಸಿನ ಕೋರಿಕೆಯನ್ನು ನಿನ್ನ ದಯೆಯಿಂದ ಚಿಗುರಿಸು, ಕರುಳುಹರಿದ ಜಿಂಕೆಯಮರಿಯನ್ನು ನೀನೇ ರಕ್ಷಿಸಬೇಕು.

ಈ ಪ್ರಕಾರ ಪ್ರಾರ್ಥಿಸುತ್ತ ಅವಳ ಕಾಲುಗಳ ಮೇಲೆ ಬಿದ್ದನು, ರಾಣಿಗೆ ಕಣ್ಣುಗಳಲ್ಲಿ ನೀರು ಪ್ರವಾಹವಾಗಿ ಹರಿಯಿತು. ತಮ್ಮನ ಮೇಲೆ ಮೋಹವು ಹೆಚ್ಚಿತು, ಯಮುನ ಪಾಳಯಕ್ಕೆ ಕೈಕೊಟ್ಟಂತೆ ಕೈಗೊಟ್ಟು ಆವನನ್ನು ಮೇಲಕ್ಕೆ ಎಬ್ಬಿಸಿ ‹‹ ತಮ್ಮಾ! ಏಳು, ಈಗ ನಿನ್ನ ಮನೆಗೆ ಹೊರಡು. ನಾಳೆಯದಿನ ಆ ಸೈರಂಧ್ರಿಯನ್ನು ನಿನ್ನ ಬಳಿಗೆ ಕಳುಹುವೆನು. ಪರಸತಿಯರ ಸಂಗವು ಲೇಸಲ್ಲ. ಎಚ್ಚರವಾಗಿರು.'' ಎಂದು ಕಳುಹಿಸಿಕೊಟ್ಟಳು, ಕೀಚಕನ ಮನಸ್ಸಿಗೆ ಬಲು ಸಂತೋಷವಾಯಿತು. ನನ್ನ ಪುಣ್ಯದ್ರುಮವು ಫಲಿಸಿತೆಂದು ತಿಳಿದು, ಅಕ್ಕನಿಂದ ಅಪ್ಪಣೆ ತೆಗೆದುಕೊಂಡು, ಗರ್ವದಿಂದ ತನ್ನ ಮನೆಗೆ ಹೋಗಿ ಸೇರಿದನು.

ಸೂರ್ಯನೂ ಪಶ್ಚಿಮಾದ್ರಿಗೆ ಸೇರಿದನು, ದಿಕ್ಕೆಂಬ ಸ್ತ್ರೀಯು ತನ್ನ ಹಣೆಯಲ್ಲಿಟ್ಟ ಕುಂಕುಮದ ಬೊಟ್ಟೋ! ರತೀದೇವಿಯ ಕೈಯಲ್ಲಿರುವ ಕನ್ನಡಿಯೋ? ಮದನನ ಬಿರುದಿನ ಪದಕವೋ! ವಿರಹಿಗಳನ್ನು ಸುಡುವ ಕೆಂಡದ ರಾಶಿಯೋ! ಎಂಬಂತೆ ಚಂದ್ರನು ಹುಟ್ಟಿದನು. ಆಗ ಚಕ್ರವಾಕಗಳು ಹೆದರಿ ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡವು. ಮರಿದುಂಬಿಗಳು ನೆಯ್ದಿಲೆ ಹೂವುಗಳನ್ನು ಕಚ್ಚಿದುವು. ತಾವರೇಹೂಗಳು ತಮ್ಮ ಮುಖಗಳನ್ನು ಮುಚ್ಚಿಕೊಂಡುವು, ಸಾಗರದಲ್ಲಿ ಅಲೆಗಳು ಹೆಚ್ಚಿದುವು. ಚಂದ್ರನನ್ನು ಕಂಡು ಜಾರಸ್ತ್ರೀಯರು ಹೆಚ್ಚಿದರು. ಚಂದ್ರನು ವಿರಹಿಗಳ ಮನಸ್ಸಿಗೆ ಕಿಚ್ಚನ್ನಿಕ್ಕಿದನು.

ತನ್ನ ಮನೆಗೆ ಬಂದ ಕೀಚಕನಿಗೆ ವಿರಹತಾಪವು ಹೆಚ್ಚಿತು. ಅವನು ಚಿಗುರಿನ ಹಾಸಿಗೆಯ ಮೇಲೆ ಮಲಗಿ ಹಾಹಾ! ಎಂದು ಚಿಂತಿಸುತ್ತಾ ಇದ್ದನು. ಮದನನೂ ಈ ಕೀಚಕನನ್ನು ಕೊಲ್ಲುವುದಕ್ಕೆ ಚಂದ್ರನು, ಕೋಗಿಲೆ, ತುಂಬಿ, ಕಮಲ, ಮಲ್ಲಿಗೆ ಇವುಗಳನ್ನು ಕೈಬೀಸಿ ಕರೆದನು. ಹಾಸಿದ ಎಳೆ ಚಿಗುರುಗಳೊಣಗಿದುವು, ಉಸಿರಿನಲ್ಲಿ ಹೊಗೆ ತುಂಬಿ ಸುಳಿ ಬಾಳೆ ಎಲೆಗಳೆಲ್ಲ ಬಾಡಿಹೋದುವು. ವೀಳೆಯದ ಕರ್ಪೂರವು ಉರಿಯಿತು, ಮೈಗೆ ಬಳಿದ ಗಂಧವು ಸುಟ್ಟು ಕರುಕಾಯಿತು. ಬೆಳದಿಂಗಳು ಉರಿಯಿಂದ ಕರಗಿ ತವರದಂತೆ ನೀರಾಯಿತು. ಪರಿಮಳ ಬೆರೆದ ಬೀಸಣಿಗೆಯ ಗಂಧವೂ, ಪಚ್ಚ ಕರ್ಪೂರವೂ ಕಾಮಾಗ್ನಿಯಿಂದ ಸೀದು ಹೋದುವು. ಈ ಪಾಪಿಯಾದ ಕೀಚಕನು ಚಂದ್ರಕಾಂತ ಶಿಲೆಯ ಮೇಲು ಮಚ್ಚಿನಲ್ಲಿ ಮಲಗಿ ಪರಮ ಪತಿವ್ರತೆಯಾದ ದ್ರೌಪದಿಯ ಮೇಲಣ ಆಸೆಯಿಂದ ಪೀಡಿತನಾಗಿ ಪ್ರಾಣದಾಸೆ ಬಿಟ್ಟು ಈ ಹಾಳು ಚಂದ್ರನ ಉದಯವು ತನ್ನ ಕೊಲೆಗೇನೆ ಆಗಿದೆಯೋ! ಪಾಪಿಯಾದ ಬ್ರಹ್ಮನು ಸೈರಂಧ್ರಿಗೆ ಇಷ್ಟು ಚೆಲುವಿಕೆಯನ್ನು ಏತಕ್ಕೆ ಉಂಟುಮಾಡಿದನೋ? ಎಂದು ಬಿಸುಸುಯ್ದು ಅರೆಗಳಿಗೆಯನ್ನು ಒಂದು ಯುಗದಂತೆ ಕಳೆದನು. ಅಷ್ಟು ಹೊತ್ತಿಗೆ ಬೆಳಕುಹರಿಯಿತು, ಸೂರ್ಯನು ಪೂರ್ವದಿಕ್ಕಿನಲ್ಲಿ ಹುಟ್ಟಿ, ಲೋಕದ ಕತ್ತಲೆಯನ್ನೆಲ್ಲಾ ಓಡಿಸಿದನು. ತಾವರೆಗಳು ಪರಿಮಳದ ಅಕ್ಷತೆಗಳನ್ನು ಕಳುಹಿ ತುಂಬಿಗಳನ್ನು ಕರೆಯಿಸಿಕೊಂಡವು. ಹೆದರಿಕೆಯಿಂದ ಚಿಂತಿಸುತ್ತಿರುವ ಸೈರಂಧ್ರಿಯ ನಿಟ್ಟುಸಿರು ಚಂದ್ರನಿಗೆ ತಗಲಿದ್ದರಿಂದ ಅವನು ಕಾಂತಿಹೀನನಾಗಿ ಕುಂದಿಹೋದನು. ಪ್ರಾತಃಕಾಲವಾಯಿತು.

———:0:———

## ನಾಲ್ಕನೆಯ ಸಂಧಿ.

ಕುರುಕುಲಾಂತಕನಾದ ಭೀಮಸೇನನು ಪತಿವ್ರತಾತಿಲಕವಾದ ದ್ರೌಪದಿಯನ್ನು ರಕ್ಷಿಸಲಿಕ್ಕಾಗಿ ಕೀಚಕನನ್ನೂ ಆತನ ತಮ್ಮಂದಿರನ್ನೂಕೊಂದುಬಿಟ್ಟನು.

ಮರುದಿವಸ ಸುದೇಷ್ಣೆಯು ಪಾಪಿಯಾದ ತನ್ನ ತಮ್ಮನ ಮನೋಭಿಷ್ಟವನ್ನು ನೆರವೇರಿಸಬೇಕೆಂದು ಯೋಚಿಸಿದಳು. ಇದರಿಂದ ತನಗೂ ತನ್ನವರಿಗೂ ಮೃತ್ಯು ಸಂಭವಿಸಬಹುದೆಂಬ ಆಲೋಚನೆ ಅವಳಿಗೆ ಹುಟ್ಟಲಿಲ್ಲ. ತನ್ನ ತಮ್ಮನಾದ ಕೀಚಕನ ಮನೆಗೆ ಸೈರಂಧ್ರಿಯನ್ನು ಕಳುಹಬೇಕೆಂದು ನಿಶ್ಚಯಿಸಿ, ಅವಳನ್ನು ಕರೆದು ಇಂತೆಂದಳು.

ರಾಣಿ :—ಎಲೆ ಮಾಲಿನಿಯೇ ! ನನ್ನ ತಮ್ಮ ಕೀಚಕನ ಮನೆಯಲ್ಲಿ ಶ್ರೇಷ್ಠವಾದ ಮಧುವಿರುವುದು. ನೀನು ಬೇಗ ಅಲ್ಲಿಗೆ ಹೋಗಿ, ಅದನ್ನು ತಂದು ನನಗೆ ಕೊಡು.

ಸೈರಂ :—ತಾಯಿ ! ನಿಮ್ಮ ಅಪ್ಪಣೆ ಮೀರತಕ್ಕವಳಲ್ಲ. ಆದರೆ ನನ್ನ ಅರಿಕೆಯನ್ನು ಲಾಲಿಸಿರಿ. ನಿಮ್ಮ ತಮ್ಮನು ಬಲು ದುಷ್ಟನು ; ಅವನು ಏನಾದರೂ ದುರಾಲೋಚನೆ ಮಾಡಬಹುದು ; ಅವನು ನನ್ನನ್ನು ಕೆಣಕಿದರೆ ನನ್ನ ಪತಿಗಳು ಸುಮ್ಮನೆ ಇರರು. ಅವರಿಂದ ಕೀಚಕನಿಗೆ ಅಪಾಯು ಸಂಭವಿಸಿದರೆ ಆ ಅಪಕೀರ್ತಿಯು ನಮಗೇನೋ ತಪ್ಪುವುದಿಲ್ಲ. ನಾವು ನಿಮ್ಮನ್ನು ಆಶ್ರಯಿಸಿಕೊಂಡಿದ್ದೇವೆ. ನಿಮಗೆ ಅಹಿತವನ್ನು ಮಾಡುವುದು ಧರ್ಮವಲ್ಲ. ಆದುದರಿಂದ ನಾನು ಅಲ್ಲಿಗೆ ಹೋಗಲಾರೆನು. ದಯಮಾಡಿ ಮತ್ತಾರನ್ನಾದರೂ ಅಲ್ಲಿಗೆ ಕಳುಹಿರಿ. ಅಲ್ಲಿಯ ಕಷ್ಟ ಸುಖಗಳು ನಮಗೆ ಬೇಡ.

ರಾಣಿ :—(ಕೋಪದಿಂದ) ಛೀ ! ಎಂತಹ ಮಾತನಾಡುವೆ ? ಮಾಲಿನೀ ! ನಿನಗೆ ಎಷ್ಟರ ಗರ್ವವಿದೆಯೆ ? ನಿನ್ನಿಂದ ನನಗಾಗಲಿ, ನನ್ನ ಕಡೆಯವರಿಗಾಗಲಿ ಹಾನಿ ವೃದ್ಧಿಗಳು ಬರುವುದೆಂದರೆ ಏನು ?

ನನ್ನ ತಮ್ಮನು ಅಂತವನಲ್ಲ. ಅವನ ಬಳಿಗೆ ಹೋಗಿ ಕೇಳಿ ಮಧು ವನ್ನು ತಂದು ಕೊಡು. ಬೇಗ ನಡಿ.

ಆಗ ದ್ರೌಪದಿಯು ತನ್ನ ಮನಸ್ಸಿನಲ್ಲಿ ಹೀಗೆ ಚಿಂತಿಸಿದಳು. ಆಹಾ! ಇದೇನು ಕೇಡು ಬಂತು? ಈ ರಾಣಿಯು ಇಂತಹ ಅಪ್ಪಣೆ ಕೊಟ್ಟಳು. ಒಡತಿಯು ಆಜ್ಞೆಯನ್ನು ಮೀರುವುದು ಧರ್ಮವಲ್ಲ, ಅವರಿಗೆ ಕೇಡಾದರೆ ಆ ಪಾಪವೂ ನಮಗೆ ತಪ್ಪದು. ಅಯ್ಯೋ! ದೇವರೇ! ಈಗ ಏನು ಮಾಡಲಿ! ಸೇವ್ಯಾ ಧರ್ಮವು ಕೆಟ್ಟದೆಂದು ಹಿರಿಯರು ಹೇಳುವ ಮಾತು ನಿಜ. ದೇವರೇ ಗತಿ. ಆದುದರಿಂದ ಗಲಿ, ಎಂದು ಕೊಂಡು ದೇವರನ್ನು ಧ್ಯಾನಿಸಿದಳು. "ಶ್ರೀಕೃಷ್ಣಾ! ದ್ವಾರ ಕಾವಾಸ! ಅನಾಥಬಂಧುವೇ! ಇಂತಹ ಕಷ್ಟಕಾಲದಲ್ಲಿ ನನ್ನನ್ನು ರಕ್ಷಿಸತಕ್ಕವರು ಯಾರು? ಹಿಂದೆ ದುಶ್ಶಾಸನನು ನನ್ನ ಸೀರೆಯನ್ನು ಸೆಳೆದು ಹಾಕುತ್ತಿದ್ದನು. ಆಗ ಅಕ್ಷಯ ವಸ್ತ್ರವನ್ನು ಕೊಟ್ಟು ಮಾನ ಸಂರಕ್ಷಣೆ ಮಾಡಿದೆ. ಎಲೈ ಆಪದುದ್ಧಾರಕಾ! ಈಗ ಪುನಃ ಅಂತಹ ವಿಪತ್ತೇ ಸಂಭವಿಸುವಹಾಗಿದೆ. ನನ್ನನ್ನು ಸಲಹೈಯಾ ಸ್ವಾಮಿಯೇ!" ಎಂದು ಪ್ರಾರ್ಥಿಸಿ, ಅಷ್ಟದಿಕ್ಪಾಲಕರಿಗೆ ವಂದಿಸಿ ಅವರನ್ನೂ ಬೇಡಿದಳು. ತರುವಾಯ ಅರಗಳಿಗೆಯತನಕ ಕಣ್ಣು ಮುಚ್ಚಿಕೊಂಡು ಸೂರ್ಯನನ್ನು ಧ್ಯಾನಿಸಿ, ಕಣ್ತೆರೆಯುವಷ್ಟರಲ್ಲಿ ಲೋಕಬಾಂಧವನಾದ ಸೂರ್ಯನು ಮುಂದೆ ಬರುವ ತೊಂದರೆಯನು ತಿಳಿದು ಆ ಪತಿವ್ರತೆಯ ಮೈಗಾವಲಿಗಾಗಿ ಶೂರನಾದ ಒಬ್ಬ ರಾಕ್ಷಸನನ್ನು ಕಳುಹಿದನು. ಅವನು ಅದೃಶ್ಯನಾಗಿ ದ್ರೌಪದಿಯ ಸಂಗಡಲೇ ಇದ್ದನು. ತರುವಾಯ ದ್ರೌಪದಿಯು ಮೆಲ್ಲಮೆಲ್ಲನೆ ಅಡಿಗಳನಿಡುತ್ತಾ ಕೀಚಕನ ಮನೆಗೆ ಬರುತ್ತಿದ್ದಳು. ಆಕೆಯ ಕಾಲುಕಡಗಗಳ ಝಣ ಝಣ ಶಬ್ದವು ಘನ ಗರ್ಜನೆಯಂತೆಯೂ, ಅವಳ ಕಟಾಕ್ಷವು ಮಿಂಚಿನಂತೆಯೂ ಹೊಳೆಯುತ್ತಿರಲು, ಅರಮನೆಯಲ್ಲಿ ಸಾಕಿದ್ದ ನವಿಲುಗಳು

ವರ್ಷಾಕಾಲ ಬಂತೆಂಬ ಭ್ರಾಂತಿಯಿಂದ ಕುಣಿದಾಡುತ್ತಿದ್ದವು. ಅವಳ ಮೈಯ ಪರಿಮಳಕ್ಕೆ ಮೋಹಿಸಿ ತುಂಬಿಯು ಹಿಂಡುಸಂಗಡಲೇ ಬರುತ್ತಿದ್ದಿತು. ಇವಳು ಮನ್ಮಥನ ಮದದಾನೆಯೋ ? ಮದನಮಂತ್ರಾಧಿ ದೇವತೆಯೋ ? ಜನರನ್ನು ಮರುಳುಗೊಳಿಸುವ ಮುದ್ದೋ ? ಸಂಸಾರ ಸುಖದ ಸಾಕಾರಮೂರ್ತಿಯೋ ? ಮದನನು ವಿರಹಿಗಳನ್ನು ಕೊಲ್ಲಲು ಮಸೆದ ಅಲಗೋ? ಮುನಿಗಳನ್ನು ಮೋಹಿಸುವ ತಿಲಕವೋ? ಸೌಂದರ್ಯವೆಂಬ ಸಾಗರದಲ್ಲಿ ಹುಟ್ಟಿದ ಲಕ್ಷ್ಮಿಯೋ ? ಎಂಬಂತೆಯೂ ಕಾಣುತ್ತಿದ್ದಳು. ಆಕೆಯು ಮಂದಗಮನದಿಂದ ಕೀಚಕನ ಮನೆಗೆ ಬಂದಳು.



ಆ ಕೀಚಕನು ಈ ಸೈರಂಧ್ರಿಯ ಮೈಸೊಬಗನ್ನು ನೋಡಿ, ಆನಂದಪರವಶನಾದನು. ಅತ್ಯಾಶ್ಚರ್ಯದಿಂದ ತನ್ನ ಮನಸ್ಸಿನಲ್ಲಿ "ಆಹಾ ಎಂತಹ ಚೆಲುವಿಕೆ ? ಇದುವರೆಗೆ ಎಲ್ಲಿಯೂ ಈ ಸೌಂದರ್ಯವನ್ನು ಕಂಡಿಲ್ಲ. ರಕ್ತಹೊರಡದಂತೆ ಕಡಿಯುವ ಕತ್ತಿಯಾಗಿರಬಹುದೆ ? ಅಥವಾ ಬಲವಾಗಿ ಹೊಡೆದರೂ ಮೈಯಲ್ಲಿ ಬಾಸುಂಡೆಗಳೇಳದೆ ಇರುವಂತಹ ಹಗ್ಗವೋ ಏನೂ ? ಇಲ್ಲವೇ ಹೊಗೆ ಏಳದ ಎದೆಗಿಚ್ಚಿದ್ದೀತೆ ? ಈ ಕಣ್ಣುಗಳ ಧಾರೆಯು ಯಾರ ಕೊರಳನ್ನು ತಾನೇ ಕುಯ್ಯದೆ ಇರದು ? ಈ ರೂಪವನ್ನು ಕಂಡು ಇವಳನ್ನು ಮೋಹಿಸದೆ ಇರುವವರು ಈ ಲೋಕದಲ್ಲಿ ಒಬ್ಬನಾದರೂ ಇಲ್ಲ. ಇವಳು ಯಾವ ಜನ್ಮದ ಪುಣ್ಯ ವಿಶೇಷದಿಂದ ನನಗೆ ಲಭಿಸಿದಳೋ ತಿಳಿಯದು. ಇಂದಿಗೆ ನಾನೇ ಧನ್ಯನು." ಎಂದು ಕೊಂಡು, ಎದ್ದು ಅವಳ ಎದುರಾಗಿ ಬಂದು ನುಡಿಸಿದನು.

ಕೀಚ :---ಎಲೌ ಸುಂದರಾಂಗಿ ! ಇತ್ತ ಬಾ, ಇಲ್ಲಿ ಕುಳಿತುಕೋ, ಇಂದಿಗೆ




ಇನ್ನು

ಮೇಲೆ ಮನ್ಮಥನು ನನ್ನನ್ನು ಏನು ಮಾಡುವನು ? ನನಗೆ ಯಾವ ಭಯವೂ ಇಲ್ಲ. ಹತ್ತಿರಕ್ಕೆ ಬಾ.

ದ್ರೌಪ :—(ಕೇಳಿ ಬಹುಸಿಟ್ಟಿನಿಂದ) ಛೀ! ನಾಯೀ! ಸಾಕು. ಬಾಯಿ ಮುಚ್ಚು, ಏಕೆ ಬಗುಳುತ್ತೀ! ಹೆಚ್ಚು ಮಾತುಗಳಾಡಿದರೆ ನಿನ್ನ ಬಾಯಲ್ಲಿ ಹುಳುಗಳು ಬೀಳುವವು. ಈ ನೀಚ ಬುದ್ಧಿಯನ್ನು ಬಿಡು, ಜ್ಞಾನವನ್ನು ತಂದುಕೊ ಇಲ್ಲದಿದ್ದರೆ ಕೆಟ್ಟುಹೋಗುವೆ, ಮದ್ಯವನ್ನು ತರಹೇಳಿ ರಾಣಿಯು ನನ್ನನ್ನು ಇಲ್ಲಿಗೆ ಕಳುಹಿದ್ದರಿಂದ ಬಂದೆನು, ನಿನ್ನನ್ನು ಕಾಮಿಸಿ ಬಂದೆನೆಂದು ಗ್ರಹಿಸಿದೆಯಾ ? ಪಾಪಿ! ಪರವಧುವನ್ನು ಕಾಮಿಸಿ ಏತಕ್ಕೆ ಕೆಡುವೆ ? ನೀನು ಸಾಯಬೇಕೆಂಬ ಆಶೆಇದ್ದರೆ ಹಸಿದ ಶೂಲದಮೇಲೆ ನುಗ್ಗಿ ಮಡಿವುದು ಲೇಸು.

ಕೀಚ:—ಎಲೌ ಮಾಲಿನಿ ! ನೀನು ಬೈಯುತ್ತಾ ಬಂದ ಹಾಗೆಲ್ಲಾ ನನಗೆ ನಿನ್ನಲ್ಲಿ ಮೋಹವು ಹೆಚ್ಚುತ್ತಾ ಬರುವುದು. ಇವು ಗಳಿಂದ ನನಗೆ ಏತರ ವ್ಯಥೆ ಇಲ್ಲ. ಇನ್ನೂ ಬೇಕಾದ ಹಾಗೆ ಅನ್ನು, ಸಂತೋಷ.

ಎಂದು ಎದ್ದು ಅವಳ ಕೈ ಹಿಡಿಯಲಿಕ್ಕೆ ಹೋದನು. ಆಕೆಯು ಹೆಸರಿನಿಂದ ಅಬಲೆಯಾಗಿದ್ದರೂ ಶೌರ್ಯದಲ್ಲಿ ಅಬಲೆಯಲ್ಲ. ವೀರ ಪತ್ನಿ ಎಂಬ ಹೆಸರಿಗೆ ತಕ್ಕಂತೆ ತನ್ನ ಕೈಯನ್ನು ಕೊಡಹಿ, ಬಿಡಿಸಿ ಕೊಂಡು ಆ ನೀಚನನ್ನು ತಳ್ಳಿಬಿಟ್ಟಳು, ಅವನು ಒಂದು ಕಡೆ ಬಿದ್ದನು, ಪಾನಪಾತ್ರೆಯೊಂದು ಕಡೆ ಬಿದ್ದಿತು ಅವಳು ಮುಖತಿರುವಿಕೊಂಡು ವಿರಾಟರಾಯನ ಸಭೆಯ ಕಡೆಗೆ ಬೇಗಬೇಗ ಓಡಿಬಂದಳು. ಅವಳ ಸೂಕ್ಷ್ಮವಾದ ನಡುವು ವೈಯ್ಯಭಾರದಿಂದ ಓಡುವಾಗ ಮುರಿದು ಬೀಳುವುದೋ ಎಂಬಂತೆ ಇತ್ತು. ಅಷ್ಟರಲ್ಲಿ ಆ ನೀಚನು ಎದ್ದು, ಅವಳ ಬೆನ್ನು ಹಿಂದೆಯೋ ಓಡಿಬಂದು, ಆಕೆಯ ತುರು ಬನ್ನು ಹಿಡಿದೆಳೆದು "ಎಲೇ ಕೊತ್ತಿನ ಮಗಳೇ! ನೀನು ಓಡಿಹೋದರೆ

ಬಿಟ್ಟು ಬಿಡುವೆನೆಂದು ತಿಳಿದಿದ್ದೀಯೊ, ನಿಲ್ಲು ನಿಲ್ಲು!'' ಎಂದು ಕಾಲಿನಿಂದ ಒದೆದನು. ಆಗ ದ್ರೌಪದಿಯು ಧೊಪ್ಪನೆ ನೆಲದಲ್ಲಿ ಬಿದ್ದಳು, ಅವಳ ಮೈಯಿಂದ ರಕ್ತವು ಧಾರೆಧಾರೆಯಾಗಿ ಸುರಿಯು ತ್ತಿದ್ದಿತು. ಬಿರುಗಾಳಿಯಿಂದ ಮುರಿದು ಬಿದ್ದ ಎಳೆಯ ಬಾಳೆಯ ಕಂಬದಂತೆ ಆಕೆಯು ಉರುಳಿಕೊಂಡು ಬಿದ್ದು, ಮಣ್ಣಿನಲ್ಲಿ ಹೊರ ಳಿದಳು. ಅದೃಶ್ಯನಾಗಿ ಸಂಗಡಲೇ ಇದ್ದು ಸೂರ್ಯನಿಂದ ಕಳುಹಲ್ಪಟ್ಟ ಘೋರರಾಕ್ಷಸನು ಬಂದು ಆ ಕೀಚಕನನ್ನು ಒದೆದು ನೆಲದಲ್ಲಿ ಕೆಡಹಿ, ಅವನ ಬೆನ್ನಿನ ಮೇಲೆ ಬಲವಾಗಿ ಗುದ್ದಿದನು. ಆ ನೀಚನು ಪೆಟ್ಟಿಗೆ ತಡೆಯಲಾರದೆ ಬೇಗನೆ ಎದ್ದು ಅರಚಿಕೊಳ್ಳುತ್ತಾ ತನ್ನ ಮನೆಯ ಕಡೆಗೆ ಓಡಿಹೋದನು. ಆ ಸ್ತ್ರೀಯ ಆಕ್ರಂದನ ಧ್ವನಿಯನ್ನು ಕೇಳಿ, ಸಭೆಯಲ್ಲಿದ್ದ ವಿರಾಟರಾಯ ಮೊದಲಾದವರು ಆಶ್ಚರ್ಯದಿಂದಲೂ ಭಯದಿಂದಲೂ ನಡುಗುತ್ತಿದ್ದರು.

ಸೈರಂಧ್ರಿಯು ತನ್ನ ತುರುಬಿಗೆ ಹತ್ತಿದ್ದ ಮಣ್ಣನ್ನು ಕೊಡ ಹುತ್ತಾ, ಕೆನ್ನೆಯ ಮೇಲೆ ಸುರಿಯುತ್ತಿದ್ದ ರಕ್ತವನ್ನು ಸೀರೆಯ ಸೆರಗಿನಿಂದ ಒರಸಿಕೊಂಡು, ಎಲ್ಲರಿಗೂ ಕೇಳಬರುವಂತೆ ಗಟ್ಟಿಯಾಗಿ ಬೀರಿದಳು.

''ಆಹಾ! ಇದೇನು ಅನ್ಯಾಯವು!! ಈ ನೀಚನು ದಿಕ್ಕಿಲ್ಲದ ಹೆಂಗಸನ್ನು ಕಾಲಿನಿಂದ ಒದೆದುದನ್ನು ನೋಡಿದರೂ ಕೂಡ ಸಭೆಯ ವರು ವಿಚಾರಿಸದೆ ಸುಮ್ಮನೆ ಇರುವರೆ? ಹಾ! ದೈವವೇ! ನಿನಗೂ ಕರುಣೆಯಿಲ್ಲವೆ? ಈ ನನ್ನ ಉಸಿರು ಪಾಪಿಗಳಾದ ಪತಿಗಳಿಗೆ ತಗಲ ಬಾರದೆ? ನಾಲ್ವರ ನಡುವೆ ಸಿಕ್ಕಿದ ಹಾವು ಸಾಯದು ಎಂಬ ಗಾಧೆಯು ನಿಜವೆ? ಶಿವಶಿವಾ! ಈ ದುರುಳನು ನಿರಪರಾಧಿಯಾದ ನನ್ನನ್ನು ಒದೆದು ಅವಮಾನ ಪಡಿಸಿದನು. ಸಭೆಯವರು ಪ್ರತ್ಯಕ್ಷವಾಗಿ ಇದನ್ನು ನೋಡಿದರು, ಇವರು ಇದು ಏನೆಂದು ವಿಚಾರಿಸಿ ನ್ಯಾಯ

ವಾದ ತೀರ್ಪುಮಾಡದೆ, ಧರ್ಮವನ್ನೂ ಹೇಳದೆ ಬಾಯಿಮುಚ್ಚಿ ಕೊಂಡು ಕುಳಿತಿರುವರಲ್ಲಾ ಇದು ಎಂತಹ ಸಭೆ! ಘೋರವಾದ ಅರಣ್ಯಕ್ಕಿಂತ ಕಡೆಯಾಯಿತಲ್ಲವೇ? ಪೂಜ್ಯರಾದ ಕಂಕಭಟ್ಟರೇ! ನೀವು ಸಮಸ್ತ ಧರ್ಮಗಳನ್ನು ತಿಳಿದಿರುವಿರಿ. ಈ ಮಹಾರಾಜನಿಗೆ ಬುದ್ಧಿ ಹೇಳಬಾರದೆ? ಹೀಗೆ ಉದಾಸೀನ ಮಾಡುವುದು ಯತಿಗಳಿಗೆ ತಕ್ಕುದಲ್ಲ. ನೀವೂ ದೇಶಿಗರು, ಪರದೇಶಿಯಾದ ನನಗೆ ಯಾರೂ ರಕ್ಷಕರಿಲ್ಲ. ಇಂತಹ ವೇಳೆಯಲ್ಲಿ ದುರ್ಬಲರಿಗೆ ಸಹಾಯ ಮಾಡೆಂದು ಅರಸನಿಗೆ ವಿವೇಕ ಹೇಳಬೇಕಾದವರು ನೀವೇ ಅಲ್ಲವೆ!'' ಎಂದು ಗೋಳಾಡುತ್ತಿದ್ದಳು.

ಆಗ ಧರ್ಮರಾಯನು ಮುಂದಣ ರಾಜಕಾರ್ಯವನ್ನು ಯೋಚಿಸಿ, ಧೈರ್ಯದಿಂದ ಕಂಡರೂ ಕಾಣದವನ ಹಾಗೆ ಮೌನವಾಗಿದ್ದನು. ಅಣ್ಣನ ಅಪ್ಪಣೆಯಾಗಲಿಲ್ಲವೆಂದು ಅರ್ಜುನ ನಕುಲಸಹದೇವರು ಚಿಂತಿಸುತ್ತ ತಮ್ಮ ಶೌರ್ಯವನ್ನು ತೋರಿಸುವುದಕ್ಕೆ ಇದು ವೇಳೆಯಲ್ಲವೆಂದು ದುಗುಡದಿಂದ ಸುಮ್ಮನೆ ಇದ್ದರು. ಭೀಮಸೇನನೊಬ್ಬನಿಗೆ ಮಾತ್ರ ಇದು ಸಹಿಸಲಿಲ್ಲ. ಅವನು ದ್ರೌಪದಿಯ ಆಗಿನ ಸ್ಥಿತಿಯನ್ನು ನೋಡಿ ಬಹಳವಾಗಿ ಮರುಗಿದನು. ‹‹ಅಯ್ಯೋ! ಏನುಮಾಡಲಿ? ಅಬಲೆಯಾದ ಈಕೆಯು ಬಹಳ ನೊಂದಿರುವಳಲ್ಲಾ! ಇವಳನ್ನು ನೋಡಿ ಸುಮ್ಮನಿರಬಹುದೇ? ಎಂದು ಹಲ್ಲು ಹಲ್ಲು ಕಡಿಯುತ್ತಾ, ಅಲ್ಲಿಯ ಜನರಿಗೆ ತನ್ನ ಗುಟ್ಟು ತಿಳಿಯದ ಹಾಗೆ ಮರಸಿ, ಸಭಾಸ್ಥಾನದ ಮುಂದುಗಡೆ ಬಯಲಲ್ಲಿರುವ ದೊಡ್ಡದಾದ ಮರವನ್ನು ದುರದುರನೆ ನೋಡಿದನು. ಅವನ ಮನಸ್ಸಿನಲ್ಲಿ ಯೋಚಿಸಿದುದೇನಂದರೆ— ಈ ಪತಿವ್ರತೆಯನ್ನು ನೋಯಿಸಿದ ನೀಚನ ಪ್ರಾಣವನ್ನು ಮೊದಲು ಹೀರಿ ಬಿಡಬೇಕು; ಆ ಮೇಲೆ ಇವನ ಸಹೋದರರನ್ನೂ ನೆಂಟರನ್ನೂ ಹೆಸರಿಲ್ಲದಂತೆ ತೀರಿಸಿ ಬಿಡಬೇಕು; ಆಮೇಲೆ ಈ ವಿರಾಟರಾಯ

ನನ್ನು ಕೊಂದುಹಾಕಬೇಕು ; ತರುವಾಯ ಕೌರವರ ಕುಲವನ್ನು ಸಂಹರಿಸುವುದಕ್ಕೆ ಹೊರಡಬೇಕು. ಎಂದು ನಿಶ್ಚಯಿಸಿಕೊಂಡು ಕಣ್ಣುಗಳಲ್ಲಿ ಕೇಡಗಳನ್ನು ಕಾರುತ್ತಿದ್ದನು. ಆಗ ಧರ್ಮರಾಯನು ಅವನ ಇಂಗಿತವನ್ನರಿತು ಅವನನ್ನು ನೋಡಿ "ಅಯ್ಯಾ! ವಲಲನೇ! ದುಡುಕಬೇಡ, ಸೈರಿಸು, ಈ ಮರವು ಸಜ್ಜನರಿಗೆ ಆಶ್ರಯವಾಗಿದೆ. ಧರ್ಮಸ್ವರೂಪವಾದ ಈ ಮರವನ್ನು ಈಗಲೇ ಮುರಿಯುಬಾರದು, ಊರಿನ ಹೊರಗೆ ಹಲವು ಮರಗಳಿವೆ, ನಿನ್ನ ಅಡಿಗೆಯ ಮನೆಗೆ ಬೇಕಾಗಿದ್ದರೆ ಅವುಗಳಲ್ಲಿ ಯಾವುದನ್ನಾದರೂ ಮುರಿದುಕೊಂಡು ಹೋಗು, ನನ್ನ ಮಾತನ್ನು ಮನ್ನಿಸು" ಎಂದನು.

ಭೀಮನು ಈ ಮಾತನ್ನು ಕೇಳಿ, ಏನೂ ಹೇಳಲಾರದೆ, ಖಿನ್ನನಾಗಿ ಸಭೆಯಿಂದ ಹಿಂದಿರುಗಿದನು, ಆಗ ಅಳುತ್ತಾ ಅಲ್ಲಿಯೇ ನಿಂತಿದ್ದ ದ್ರೌಪದಿಯನ್ನು ನೋಡಿ ಇಂತೆಂದನು.

ಭೀಮ:—ಎಲೌ ಸಾಧ್ವಿಯೇ! ಇದು ನಿನ್ನ ಪ್ರಾರಬ್ಧ ಕರ್ಮದ ಫಲವು, ಈ ಸಭೆಯವರು ನೀಚನಾದ ಅಪರಾಧಿಯನ್ನು ಶಿಕ್ಷಿಸಿ, ನಿನ್ನನ್ನು ರಕ್ಷಿಸತಕ್ಕವರಾಗಿಲ್ಲ. ನಿನ್ನ ಕೋಪಕ್ಕೆ ಇದು ಸಮಯವಲ್ಲ, ನಿನ್ನ ಪತಿಗಳು ಸಾಮಾನ್ಯರಲ್ಲ, ನೀನಾದರೋ ಮಹಾ ಪತಿವ್ರತೆ, ಪುಣ್ಯವಧುವು, ಈಗ ನಿನ್ನ ವ್ಯಸನವನ್ನು ಬಿಡು, ಕ್ಷಮೆಯೇ ಸಕಲವಿಪತ್ತುಗಳನ್ನೂ ಪರಿಹರಿಸುವುದು. ಕ್ಷಮೆಯೇ ಶೌರ್ಯ ಧರ್ಮಗಳ ನೆಲೆಯು, ಎಂದು ತಿಳಿ, ಸದ್ಯಕ್ಕೆ ಕೋಪವನ್ನು ಬಿಟ್ಟು ತಾಳ್ಮೆಯನ್ನು ತಾಳು, ನಿನ್ನ ಮನೆಗೆ ಹೋಗು,

ದ್ರೌಪ:—ಅಯ್ಯೋ ಕರ್ಮವೇ! ನೀವು ಕೂಡ ಸಭೆಯಲ್ಲಿ ಇಂತಹ ಮಾತನಾಡುವಿರಿ. ನೀರು ಕೂಡ ತನ್ನಲ್ಲಿ ಮುಳುಗಿದವರನ್ನು ಎತ್ತಿಹಾಕಿ ಮೂರುಸಾರಿ ಮಾತ್ರವೇ ಕ್ಷಮಿಸುವುದು. ಆ ಮೇಲೆ ಮನ್ನಿಸದೆ ಮುಳುಗಿಸಿ ಬಿಡುವುದಿಲ್ಲವೇ? ಈ ಸಭೆಯಲ್ಲಿ ಎಷ್ಟೋ

ಮಂದಿ ಶೂರರಿರುವಿರಿ. ನಿಮ್ಮ ಪೌರುಷಗಳೆಲ್ಲವೂ ಬಂಜೆಯಾಗಿ ಹೋದುವೆ ? ಅನ್ಯಾಯ ಮಾಡಿದವನನ್ನು ಕಣ್ಣಿನಿಂದ ನೋಡುತ್ತಿದ್ದರೂ, ಬೇಕಾದ ನೆವ ಹೇಳಿಕೊಂಡು, ಒಡೆಯನ ಮುಖದಾಕ್ಷಿಣ್ಯದಿಂದ ಏನೂ ಮಾಡಲೊಲ್ಲದೆ ಇರುವಿರಿ, ಪರಸೇವೆಯಲ್ಲಿದ್ದರೂ ನ್ಯಾಯಕ್ಕೆ ಹೆದರಬೇಡವೆ ?

ಹೀಗೆ ಹೇಳಿದ್ದನ್ನು ಕೇಳಿ ಸಭೆಯಲ್ಲಿ ಕುಳಿತಿದ್ದ ಧರ್ಮರಾಯನಿಗೆ ಕೋಪಬಂತು. ಆಗ ಆತನು ಅವಳನ್ನು ನೋಡಿ, ‘‘ಮಾಲಿನೀ! ನಮ್ಮ ಆಟಕ್ಕೆ ಭಂಗತರುವ ಇಂತಹ ವ್ಯರ್ಥಲಾಪಗಳಿಂದ ಏಕೆ ಹೊತ್ತು ಕಳೆಯುತ್ತಿ ? ಅರಸನ ಎದುರಿಗೆ ಹೆಂಗಸಿಗೆ ಎಷ್ಟು ಬಾಯಿ? ನೀನು ಎಂತಹ ಗಯ್ಯಾಳಿ ! ಇದು ಗರತಿಯರ ಲಕ್ಷಣವಲ್ಲ. ಮನೆಗೆ ಹೋಗು'' ಎಂದನು. ಇದನ್ನು ಕೇಳಿ ಸೈರಂಧ್ರಿಯು ನೊಂದುಕೊಂಡು ‘‘ಅಯ್ಯೋ ಪಾಪವೇ ! ಹಿರಿಯರ ಮಾತಿನಲ್ಲಿ ಯಾವ ಹುರುಳೂ ಕಾಣಿಸದು. ಅದುಹಾಗಿರಲಿ, ತಪ್ಪುಮಾಡಿದವರನ್ನು ವಾಯುವೇ ಮೊದಲಾದ ದೇವತೆಗಳೇ ನೋಡಿಕೊಳ್ಳಲಿ,'' ಎಂದು ಹಿಂದಿರುಗಿ ಸುಧೇಷ್ಣೆಯ ಮನೆಗೆ ಬಂದಳು. ಇವಳ ಸ್ಥಿತಿಯನ್ನು ಕಂಡು ರಾಣಿಯಾದ ಸುಧೇಷ್ಣೆಯು, ಹೇಳಿದಳು.

ರಾಣಿ—ತಂಗಿ ! ಇದೇನು ? ನಿನ್ನ ಮುಖದಕಾಂತಿ ಕಂದಿ ಇದೆ, ನಿನ್ನ ಚಿಂತೆಗೆ ಕಾರಣವೇನು ? ಮಾಜದೆ ಹೇಳು.

ದ್ರೌಪ.—ಒಡತೀ ! ನಿಮ್ಮ ಅರಸುತನದ ವೈಭವದಲ್ಲಿ ಬಡವರಮೇಲೆ ನೆನಪು ಇರುವುದೆ ? ಎಷ್ಟು ಪದವಿ ಇದ್ದರೂ ಇಂತಹ ಮರವೆಯುಂಟೆ ? ನನ್ನನ್ನು ಅಪಹಾಸ್ಯ ಮಾಡುವಂತೆ ಕಾಣುತ್ತಿದೆ. ನಿಮ್ಮ ತಮ್ಮನ ಮನೆಯಲ್ಲಿ ಮಧುವನ್ನು ತರಹೇಳಿ ನನ್ನನ್ನು ಕಳುಹಿದಿರಲ್ಲಾ !

ರಾಣಿ—ಅಹುದಮ್ಮಾ ! ನಿಜ. ನೆನಪಿಗೆ ಬಂತು. ಅಲ್ಲಿ ನಿನಗೆ ಏನಾಯಿತಮ್ಮಾ !

ದ್ರೌಪ—ತಾಯಿ ! ಏನು ಹೇಳಲಿ ? ನೀವು ಅರಸರು, ನಾವು ತಿರುಕರು, ಇಂತಹಕಡೆ ಬಾಳುವುದು ಕಷ್ಟ. ನಿಮ್ಮ ತಮ್ಮನು ಬಲು ದುಷ್ಟನು, ಅವನು ನನ್ನನ್ನು ಕೆಣಕಿದನು, ಕಾಲಿನಿಂದ ಒದೆದು ಅವಮಾನಪಡಿಸಿದನು. ಅವನು ದಳಪತಿಯಂತೆ! ರಾಜನೇ ಅನ್ಯಾಯ ಮಾಡಿದರೆ ರಕ್ಷಕರು ಯಾರು ? ನಿಮ್ಮ ತಮ್ಮನನ್ನು ಕರಿಸಿ ಅವನಿಗೆ ತಕ್ಕ ಬುದ್ಧಿ ಕಲಿಸಿರಿ. ನನ್ನನ್ನು ರಕ್ಷಿಸಲಿಕ್ಕೆ ನಿಮ್ಮ ಕೈಯಲ್ಲಿ ಆಗದಿದ್ದರೆ ಕಳುಹಿಸಿಬಿಡಿ. ಮತ್ತೆಲ್ಲಿಗಾದರೂ ಹೋಗಿ ಬದುಕಿಕೊಳ್ಳುವೆನು.

ರಾಣಿ—ಎಲಾ ಸೌಭಾಗ್ಯವತಿ ! ಅಂಜಬೇಡ, ನಡೆದುದನ್ನು ನಿಜವಾಗಿಹೇಳು. ತಪ್ಪು ಮಾಡಿದವರನ್ನು ತಪ್ಪದೆ ಶಿಕ್ಷಿಸುವೆನು. ಪರಸತಿಯರನ್ನು ಹಿಂಸಿಸಿ, ಅವಮಾನಪಡಿಸಿದವನು ನನಗೆ ತಮ್ಮನೇ ಅಲ್ಲ. ಶತ್ರುವೆಂದು ತಿಳಿದಿರುವೆನು. ಧೈರ್ಯದಿಂದ ಹೇಳು. ಅವನನ್ನು ಕೊಲ್ಲಿಸುವೆನು.

ದ್ರೌಪ—ರಾಣಿಯರೇ ! ಆ ದುಷ್ಟನನ್ನು ನೀವು ಏಕೆ ಶಿಕ್ಷಿಸಬೇಕು ? ನನ್ನ ಗಂಡಂದಿರು ಆ ನೀಚನನ್ನು ಕೊಂದುಹಾಕುವರು. ಅಷ್ಟಕ್ಕೆ ಬಿಡರು. ಅವನ ಕುಲವನ್ನೆಲ್ಲಾ ನಾಶಮಾಡಿಬಿಡುವರೆಂದು ತಿಳಿ. ನನ್ನ ಮೇಲೆ ಮಾತಿಲ್ಲ. ಸಾರಿ ಸಾರಿ ಹೇಳಿದ್ದೇನೆ.

ಎಂಬದಾಗಿ ಹೇಳಿ, ಬೇಗ ಮನೆಗೆ ಬಂದು ಮೈಯ ಕಲ್ಮಷವೆಲ್ಲಾ ತೊಳೆದುಹೋಗುವಂತೆ ಸ್ನಾನಮಾಡಿದಳು. ಆಕೆಗೆ ಏನು ಮಾಡುವುದಕ್ಕೂ ತೋರದು. ಆಹಾರಪಾನೀಯಗಳೂ ಬೇಕಾಗಿಲ್ಲ. ದುಃಖವು ಮಿತಿಮೀರಿತು. ಅವಳು ತನ್ನ ಮನಸ್ಸಿನಲ್ಲಿ ಬಹಳವಾಗಿ ದುಃಖಿಸಿ—“ಅಯ್ಯೋ ! ಏನಿದು ಅನ್ಯಾಯ ! ಇಂತಹ ಅವಮಾನ

ಪಟ್ಟು ಬದುಕುವುದಕ್ಕಿಂತ ಪ್ರಾಣತ್ಯಾಗ ಮಾಡುವುದು ಲೇಸಲ್ಲವೆ ಆಹಾ ! ಹಾಗೆ ಮಾಡಿದರೆ ಆತ್ಮಹತ್ಯದೋಷ ಒಂದು ಬರುವುದು. ಇದು ಮಹಾಪಾತಕವಲ್ಲವೆ ? ಈಗ ನಾನು ಏನುಮಾಡಲಿ ? ಯಾರಿಗೆ ಹೇಳಲಿ ? ಯಾರನ್ನು ಸೇರಲಿ ? ಯಾರಿಂದ ನನ್ನ ಕೆಲಸವಾಗುವುದು ಛೀ ! ಛೀ ! ಸ್ತ್ರೀಜನ್ಮವು ಕೆಟ್ಟದ್ದು, ಇದಕ್ಕೆ ಧಿಕ್ಕಾರವಿರಲಿ. ನನ್ನಂತಹ ಘೋರಪಾಪಿಗಳು ಪೂರ್ವಕಾಲದಲ್ಲಿ ಯಾರಾದರೂ ಇದ್ದರೆ ? ಇಲ್ಲ. ನನಗೆ ಸಾವು ಬೇಗಬರಬಾರದೆ ?'' ಎಂದು ಹಲವುಬಗೆಯಲ್ಲಿ ಪ್ರಲಾಪಿಸಿದಳು. ಆ ಹಗಲೆಲ್ಲಾ ಬಹುಪ್ರಯಾಸದಿಂದ ಕಳೆದಳು. ಅವಳ ಮನಸ್ಸಿನಲ್ಲಿ ಯೋಚನೆಗಳು ತರಂಗತರಂಗಗಳಾಗಿ ಹುಟ್ಟಿಬರುತ್ತಿದ್ದುವು. ಮತ್ತೆ ತನ್ನಲ್ಲಿ ಅಂದುಕೊಳ್ಳುತ್ತಾಳೆ. ''ಅಯ್ಯೋ ! ಈಗ ನಾನೇನುಮಾಡಲಿ ? ಧರ್ಮರಾಯನ ಬಳಿಗೆ ಹೋಗಿ ಹೇಳಿಕೊಳ್ಳಲೇ? ಆತನಿಗೆ ಶಾಂತಿ ಎಂಬ ಪಿಶಾಚವು ಹಿಡಿದಿದೆ. ಅಲ್ಲಿಗೆ ಹೋದರೂ ಅವನು ನನ್ನ ಮಾತುಗಳನ್ನು ಕೇಳುವಹಾಗಿಲ್ಲ. ನನ್ನಲ್ಲಿ ಪ್ರೀತಿ ಇಟ್ಟಿರುವ ಅರ್ಜುನನ ಬಳಿಗೆ ಹೋಗಿ ಹೇಳಿಕೊಳ್ಳಲೇ ? ಅವನು ಅಣ್ಣನ ಮಾತಿನಿಂದ ಭ್ರಾಂತನಾಗಿ ಗೆರೆಮೀರದೆ ಇರುವನು. ಅವನಿಂದಲೂ ನನ್ನ ಕೆಲಸವು ನೆರವೇರುವಹಾಗಿಲ್ಲ. ನಕುಲಸಹದೇವರಲ್ಲಿ ಹೋಗಿ ಹೇಳಿಕೊಳ್ಳಬಹುದು. ಆದರೆ ಅವರು ಈ ನೀಚನನ್ನು ಕೊಲ್ಲತಕ್ಕಷ್ಟು ಸಮರ್ಥರಾಗಿಲ್ಲ. ಎಲ್ಲರಿಗಿಂತಲೂ ಬಲವುಳ್ಳ ಗಂಡನು ಭೀಮಸೇನನೇ ಸರಿ. ನನ್ನ ಕಷ್ಟಸುಖಗಳಿಗೆ ಆಗ ತಕ್ಕವನೂ ಅವನೊಬ್ಬನೇ ಅವನಿಗೆ ಮಾತ್ರವೇ ನನ್ನ ಮೇಲೆ ದೃಷ್ಟಿಯುಂಟು, ನೀಚನಾದ ಈ ಕೀಚಕನ ಉಪದ್ರವಗಳನ್ನೆಲ್ಲ ಅವನಲ್ಲಿ ಹೇಳಿನೋಡುವೆನು. ಅವನೂ ಕೇಳದೆ ಹೋದರೆ ಕೊನೆಗೆ ವಿಷವನ್ನು ಕುಡಿದು ಪ್ರಾಣವನ್ನು ಕಳೆದು ಕೊಳ್ಳುವೆನು.'' ಎಂದು ನಿಶ್ಚಯ ಮಾಡಿಕೊಂಡು ರಾತ್ರಿ ಕತ್ತಲೆಯಾದ ಮೇಲೆ ಮನೆಯಿಂದ ಹೊರಟಳು.

ಅವಳ ಕಣ್ಣುಗಳ ಬೆಳಕು ಕತ್ತಲೆಯನ್ನು ಕಳೆಯುತ್ತಿದ್ದಿತು, ಕಂಕಣಗಳ ಶಬ್ದದಿಂದ ತೋಳುಗಳನ್ನು ಅಲ್ಲಾಡಿಸುತ್ತಾ, ಸೆರಗನ್ನು ಎದೆಗೆ ಮುಚ್ಚಿಕೊಳ್ಳುತ್ತಾ ಕಳವಳ ಚಿತ್ತದಿಂದ ವಿರಾಟರಾಯನ ಪಾಕಶಾಲೆಗೆ ಬಂದಳು. ಅಲ್ಲಿ ಒಂದು ಕಡೆಯಲ್ಲಿ ಬಗೆಬಗೆಯ ಸೊಪ್ಪಿನರಾಶಿಗಳು ಬಿದ್ದಿದ್ದುವು. ಮತ್ತೊಂದು ಕಡೆ ಕಾಯಿಪಲ್ಯಗಳು ರಾಶಿ ರಾಶಿಯಾಗಿ ತುಂಬಿದ್ದುವು, ಬೇರೊಂದು ದಿಕ್ಕಿನಲ್ಲಿ ದಿನಸುದಿನಸಾ ವರಿಯ ಅಕ್ಕಿಯ ಮೂಟೆಗಳೂ, ಬೇಳೆಯ ರಾಶಿಗಳೂ ಹಾಕಿದ್ದುವು, ಒಂದು ಕಡೆ ದೊಡ್ಡ ದೊಡ್ಡ ಹರಿವಾಣಗಳಲ್ಲಿ ಸಂಭಾರದ ಚೂರ್ಣಗಳು ತುಂಬಿದ್ದುವು, ಒಂದು ದಿಕ್ಕಿನಲ್ಲಿ ಲಾಡು, ಮಂಡಿಗೆ, ಫೇಣಿ, ಪೂರಿ, ಚಿರೋಟಿ, ಹೋಳಿಗೆ, ಕಡುಬು ಮುಂತಾದ ಬಗೆಬಗೆಯ ಭಕ್ಷ್ಯಗಳು ತುಂಬಿದ್ದುವು, ಇನ್ನೊಂದು ಕಡೆ ಚಿತ್ರಾನ್ನ, ದಧ್ಯೋದನ, ವಾಂಗೀಭಾತ್, ಮೋಹನಭಾತ್, ಕೇಸರಿಭಾತ್, ಹುಗ್ಗಿ ಮುಂತಾದ ಅನ್ನಗಳಿದ್ದುವು, ಮತ್ತೊಂದು ಕಡೆ ಬಗೆಬಗೆಯ ಪಾಯಸಗಳು ತುಂಬಿದ್ದುವು. ಈ ರೀತಿ ಸಮಸ್ತ ಸಾಮಗ್ರಿಗಳಿಂದ ಪರಿಪೂರ್ಣವಾಗಿ ಪರಿಮಳವನ್ನು ಬೀರುತ್ತಿರುವ ಪಾಕಶಾಲೆಯ ಸೊಬಗನ್ನು ನೋಡಿ ಅವಳು ಆನಂದಗೊಂಡಳು, ಅವಳು ತನ್ನ ಮನಸ್ಸಿನಲ್ಲಿ ಚಿಂತಿಸಿದ್ದೇನಂದರೆ–ಏನಿದಾಶ್ಚರ್ಯವು? ಎಂತಹ ಪಾಕಶಾಸ್ತ್ರದ ನೈಪುಣ್ಯ? ಇವುಗಳನ್ನು ಮಾಡುವ ಕ್ರಮಗಳನ್ನು ಭೀಮಸೇನನು ಯಾರಲ್ಲಿ ಅಭ್ಯಾಸಮಾಡಿದನು ? ವಿಧಿಯು ತನ್ನ ಮನಸ್ಸಿನಲ್ಲಿ ನೆನಸಿಕೊಂಡರೆ ಯಾರ್ಯಾರಿಗೆ ಯಾವ ಯಾವ ವೃತ್ತಿಯನ್ನು ಕಲ್ಪಿಸಿಕೊಡುವುದೋ ಬಲ್ಲವರಿಲ್ಲ'' ಎಂದು ನಸುನಗುತ್ತಾ ಒಳಕ್ಕೆ ಪ್ರವೇಶಿಸಿ ಒಂದೊಂದು ಕೊಠಡಿಯನ್ನೂ ಹುಡುಕಿ ನೋಡುತ್ತಾ ಬಂದಳು, ಒಂದು ಕೋಣೆಯಲ್ಲಿ ಹಾಕಿದ್ದ ಮಂಚದ ಮೇಲೆ ಭೀಮಸೇನನು ಮಲಗಿಕೊಂಡು ನಿದ್ರಿಸುತ್ತಿದ್ದನು. ಅವನನ್ನು ನೋಡಿದ ಕೂಡಲೇ ಆಕೆಯು ಮನಸ್ಸಿನಲ್ಲಿ

ಹೆದರಿಕೆಯುಂಟಾಯಿತು. ತನ್ನ ಮನಸ್ಸಿನಲ್ಲಿ ಹೀಗೆಯೋಚಿಸಿದಳು, "ನಾನು ಇವನನ್ನು ಎಬ್ಬಿಸಿದರೆ ನನ್ನ ಮೇಲೆ ಕೋಪಿಸಿಕೊಳ್ಳುವನೋ ಏನೋ? ಇಷ್ಟು ಹೊತ್ತಿನಲ್ಲಿ ಒಂಟಿಯಾಗಿ ಇಲ್ಲಿಗೆ ಏಕೆ ಬಂದೆ? ಎಂದು ಕೇಳಿದರೆ ಯಾವ ಉತ್ತರವನ್ನು ಕೊಡಲಿ? ನಿನ್ನ ಮುಖವು ಏಕೆ ಬಾಡಿದೆ? ಯಾರೇನು ಮಾಡಿದರು? ಹೇಳು ಎಂದು ಸಾಮದಿಂದ ಸಂತೈಸಿದರೆ ಸಂತೋಷ, ನಾನು ಬಂದಿರುವ ಸಂಗತಿ ಇಲ್ಲಿಯ ಜನರಿಗೆ ತಿಳಿದರೆ ಅದೂ ಒಂದು ಬಗೆಯ ಕಷ್ಟ, ಏನು ಮಾಡತಕ್ಕದ್ದು? ಆದುದಾಗಲಿ, ಇವನನ್ನು ಎಬ್ಬಿಸಿ ನೋಡುವೆನು, ಎಂದು ಮೆಲ್ಲಮೆಲ್ಲನೆ ಹತ್ತಿರಕ್ಕೆ ಬಂದು ಹೊದ್ದಿದ್ದ ಮುಸುಕನ್ನು ತೆಗೆದು, ಗಲ್ಲವನ್ನು ಹಿಡಿದು ಅಲುಗಿದಳು, ಆಗ ಅಪ್ರತಿಮಲ್ಲನಾದ ಭೀಮಸೇನನು ನಿದ್ದೆಯಿಂದ ಥಟ್ಟನೆ ಎಚ್ಚತ್ತು ಎದ್ದು ಕುಳಿತನು. ಎದುರಿಗೆ ದ್ರೌಪದಿ ನಿಂತಿದ್ದಳು, ಅವಳನ್ನು ನೋಡಿ ಇಂತೆಂದನು.

ಭೀಮ:—ಸುಂದರೀ! ಅವೇಳೆಯಲ್ಲಿ ಹೀಗೆ ಹೊರಟು ಬಂದೆಯಲ್ಲಾ! ಇದು ಏನು? ನಿನ್ನ ಮುಖದಲ್ಲಿ ಭಯದ ಚಿಹ್ನೆಗಳು ಕಾಣುತ್ತಲಿವೆ. ಬೇಗ ಬೇಗ ಹೇಳು. ರಾತ್ರಿಯ ಕಾಲದಲ್ಲಿ ಒಂಟಿಯಾಗಿ ನೀನು ಇಲ್ಲಿಗೆ ಬರಬಹುದೆ? ಈ ಪಾಕಶಾಲೆಯ ಹೆಂಗಸರು ಬಲುಕೆಟ್ಟವರು, ನೀನು ಬಂದುದನ್ನು ಕಂಡರೆ ಇವರು ಸೈರಿಸರು. ಇವರು ಅರಮನೆಯ ನಾಯಿಗಳು, ನಾವು ಪರದೇಶಿಗಳು. ನಮ್ಮ ಬಾಳು ಬಲು ಕಷ್ಟದ್ದು. ಇತರರಿಗೆ ತಿಳಿಯದ ಹಾಗೆ ಮೆಲ್ಲಗೆ ಹೇಳು. ನಿನಗೆ ಯಾರ ದೆಸೆಯಿಂದ ಯಾವ ಉಪದ್ರವ ಬಂದಿದೆ? ಹೇಳು.

ದ್ರೌಪ:—ನಿನ್ನೆಯದಿನ ಮಟ್ಟಮಧ್ಯಾಹ್ನದಲ್ಲಿ ದುರುಳನಾದ ಕೀಚಕನು ತುಂಬಿದ ಸಭೆಯಲ್ಲಿ ನಿಮ್ಮಂತಹ ಶೂರರ ಎದುರಿಗೆ ಕಾಲಿನಿಂದ ನನ್ನನ್ನು ಒದೆದುದನ್ನು ಕಾಣಿರಾ! ಇದರಿಂದ ನನಗೆ ನೋವಾ

ದುದು ಮಾತ್ರವೇ ಅಲ್ಲ. ಎಷ್ಟು ಅವಮಾನವಾಯಿತು? ಅವನು ನನ್ನ ಬೆನ್ನ ಹಿಂದೆಯೇ ಕಾದಿರುವನು, ಈ ತೊಂದರೆಯಲ್ಲಿ ನಾನು ಇನ್ನು ಒಂದು ಕ್ಷಣವೂ ಬದುಕಲಾರೆನು, ಸ್ತ್ರೀಹತ್ಯದ ಪಾಪವು ನಿನ್ನನ್ನು ಸುತ್ತಿಕೊಳ್ಳದೆ ಬಿಡದು.

ಭೀಮ:—(ಈ ಮಾತನ್ನು ಕೇಳಿ ರೋಷಶೋಕಗಳಿಂದ ಆವಿಷ್ಟನಾಗಿ) ಈ ವೇಳೆಯಲ್ಲಿ ನಾವು ಮಾತನಾಡಲಿಕ್ಕೆ ಬಾರದು, ನಿನ್ನ ಗೋಜಿಗೆ ನಾವು ಬರತಕ್ಕವರಲ್ಲ. ಹೆಂಗಸರ ಮಾತಿಗೆ ಬರಬಾರದು, ಐವರು ಪತಿಗಳಲ್ಲಿ ಒಬ್ಬನಾಗಿರುವ ಗಂಡತನ ಕಷ್ಟದ್ದು. ಇದನ್ನು ಸುಡಬೇಕು, ನಿನಗೆ ಉಂಟಾದ ಅಪಮಾನಕ್ಕೂ ಈ ಅಪಕೀರ್ತಿಗೂ ನಾವು ಹೊಣೆಯಲ್ಲ. ನಿನ್ನ ಉಳಿದ ಗಂಡಂದಿರು ನಾಲ್ವರೂ ಬಹಳ ಬಲಶಾಲಿಗಳಾಗಿರುವರು, ಅವರಲ್ಲಿ ಹೋಗಿ ಹೇಳಿಕೋ, ನಾನೊಬ್ಬನೇ ಇದಕ್ಕೆ ಗುರಿಯೆ? ಹೋಗು.

ದ್ರೌಪ:—ಪ್ರಾಣಕಾಂತನೇ ! ಉಳಿದ ಗಂಡಂದಿರು ನನ್ನಲ್ಲಿ ಸುಖಪಡುವುದಕ್ಕೆ ಮಾತ್ರ ಬರುವರು. ಮಾನಕ್ಕೆಂದರೆ ಹಿಂದೆ ಬಿದ್ದು ಓಡಿಹೋಗುವರು. ನೀನಲ್ಲದೆ ಉಳಿದವರು ಇಂತಹ ಕಷ್ಟಕಾಲದಲ್ಲಿ ಮಾಡತಕ್ಕ ಉಚಿತಕಾರ್ಯಕ್ಕೆ ಹೊರಗಾಗುವರು. ಅವರ ಬಳಿಯಲ್ಲಿ ನೊರೆಯಿಟ್ಟರೆ ಏನೂ ಫಲವಿಲ್ಲ. ಮಮತೆಯಿಂದ ನನ್ನನ್ನು ನೋಡು, ಮನಸ್ಸಿನಲ್ಲಿ ಸಮಾಧಾನವನ್ನು ತಂದುಕೊ, ಹಾಗಿಲ್ಲದಿದ್ದರೆ ನನ್ನನ್ನು ಯಮನ ಮನೆಗೆ ಕಳುಹಿಸು.

ಭೀಮ:—ಕಲಹಕ್ಕೆಂದರೆ ನಾವು—ಕ್ರೀಡಿಸುವುದಕ್ಕಾದರೆ ತಾವು "ಕೆಲವರು ಗಳಿಸಿದರೆ ಕೆಲವರು ಉಂಡು ಜಾರುವರು" ಎಂಬ ಗಾದೆ ನಿಜವಾಯಿತು. ಇದಕ್ಕೆ ನಾವು ಹೆದರತಕ್ಕವರಲ್ಲ. ನಿನ್ನಹಾನಿವೃದ್ಧಿಗಳನ್ನು ಅವರಲ್ಲಿ ಹೇಳಿಕೋ ಅಲ್ಲಿಗೆ ಹೋಗಿ ಆ ನಾಲ್ವರ ಮನಸ್ಸನ್ನೇ ಮೆಚ್ಚಿಸು. ನಿಮ್ಮ ಧರ್ಮರಾಯನ ಹತ್ತಿರ ನಾವು ಹೆದರುತ್ತೇವೆ.

ದ್ರೌಪ.—ಲೋಕದಲ್ಲಿ ಒಬ್ಬ ಸ್ತ್ರೀಗೆ ಒಬ್ಬಗಂಡನಿದ್ದರೂ, ಅವಳಿಗೆ ಅವಮಾನ ಬಂದಾಗ ಶತ್ರುವಿನ ಮೇಲೆ ನುಗ್ಗಿ ಅವನನ್ನು ಕಡಿದು ಬಿಸುಟು ಹಗೇತೀರಿಸಿಕೊಳ್ಳುವನು. ಅಥವಾ ತಾನಾದರೂ ಕಾದಿ ಮಡಿಯುವನು. ಇದು ಸಹಜವಾದುದು, ನನಗಾದರೋ ಒಬ್ಬ ಗಂಡನಲ್ಲ, ಐವರು ಗಂಡಂದಿರಿರುವಿರಿ. ನೀವುಗಳೆಲ್ಲಾ ಮಹಾ ಶೂರರು, ಬುದ್ಧಿಶಾಲಿಗಳು, ಮೂರುಲೋಕದ ಗಂಡರು. ಒಬ್ಬ ಅಬಲೆಯನ್ನು ಆಳಲಿಕ್ಕೆ ನಿಮಗೆ ಶಕ್ತಿಯಿಲ್ಲದೆ ಹೋಯಿತು. ನೀವು ಗಂಡರೋ ಭಂಡರೋ ಹೇಳಿರಿ, ಪೂರ್ವದಲ್ಲಿ ಕೌರವನ ಸಭೆಯಲ್ಲಿ ದುರುಳನಾದ ದುಶ್ಯಾಸನನು ನನ್ನ ಮುಡಿ ಹಿಡಿದು ಎಳೆದುತಂದನು. ಈ ದಿನ ಕೀಚಕ ಕುನ್ನಿಯು ರಾಜಸಭೆಯಲ್ಲಿ ನನ್ನನ್ನು ಒಡೆದು ಕೆಡಹಿದನು. ಇವೆರಡೂ ನಿಮ್ಮ ಕಣ್ಣೆದುರಿಗೇನೇ ನಡೆದ ಕೃತ್ಯಗಳು. ಅಂದಿನ ಅವಮಾನಕ್ಕೂ ಇಂದಿನ ಅವಮಾನಕ್ಕೂ ವ್ಯತ್ಯಾಸವೇನೋ ಕಾಣೆನು; ನೀವು ಬಲಶಾಲಿಗಳೆಂದು ನಿಮ್ಮ ಮರೆಹೊಕ್ಕರೆ ದುರ್ಬಲಳಾದ ನನ್ನನ್ನು ಕೊಂದು ಬಿಟ್ಟಿರಿ.

ಭೀಮ.—ರಾಕ್ಷಸರಲ್ಲಿಯಾಗಲಿ, ದೇವತೆಗಳಲ್ಲಿಯಾಗಲಿ, ಮನುಷ್ಯರಲ್ಲಿಯಾಗಲಿ ನನ್ನ ಅಭಿಮಾನವನ್ನು ಕೊಂಡವನ ಹೆಸರು, ಏನಾಗುವುದೆಂದು ಬಲ್ಲೆಯಾ ? ನೀನು ಸಂಕಟದಿಂದ ನೊಂದಿರುವೆ ಈ ಸಂಕಟದಿಂದ ನಿನ್ನ ಮನಸ್ಸಿಗೆ ಬಂದಹಾಗೆ ಹೇಳುವೆ ಹೇಳಿಕೋ, ಇದರಿಂದನನಗೆ ಸ್ವಲ್ಪವಾದರೂ ಸಿಟ್ಟುಬರುವುದಿಲ್ಲ. ಈ ನಪುಂಸಕರೊಂದಿಗೆ ಹುಟ್ಟಿದ ನನಗೆ ಮೂಗೇ ಇಲ್ಲವೆಂದು ತಿಳಿದುಕೋ, ನಿನಗೆ ಬೇಕಾದ ಹಾಗೆ ಹೇಳಬಹುದು ಹೆದರಬೇಡ. ಆಗ ದುಶ್ಯಾಸನನ ಕರುಳನ್ನು ಕಿತ್ತು ತಿಂದಹೊರತು ತೃಪ್ತಿಯಾಗುವುದಿಲ್ಲವೆಂದು ಅವನ ಮೇಲೆ ಬೀಳಲಿಕ್ಕೆ ನುಗ್ಗಿದೆನು, ನಮ್ಮ ಅಣ್ಣಯ್ಯನು ಹಲ್ಲುಕಿರಿದು, ತಮ್ಮಾ ! ಬೇಡ, ಬೇಡ, ಎಂದು ತಡೆದು ಅಡ್ಡಬಂದನು. ಈಗ ಈ ಕುನ್ನಿ

ಯನ್ನು ಕೊಂದುಬಿಡಬೇಕೆಂದು ಹೆಮ್ಮರವನ್ನು ಮುರಿಯಲಿಕ್ಕೆ ನೋಡಿ ದೆನು. ಧರ್ಮವೃಕ್ಷವಿದು, ಇದನ್ನು ಕಡಿಯಬೇಡವೆಂದು ಅಣ್ಣನೇ ಅಡ್ಡಿಮಾಡಿದನು, ಇವೆರಡನ್ನೂ ಪ್ರತ್ಯಕ್ಷವಾಗಿನೋಡಿಯೇ ಇದ್ದೀಯೆ! ಇದರಲ್ಲಿ ನನ್ನ ತಪ್ಪೇನಿದೆ ? ಕುಂತಿಯ ಮಗನು ಹೆಂಗಸಿನ ಮಾತು ಕೇಳಿ, ಅಣ್ಣನ ಮಾತುಮೀರಿ ನಡೆದನೆಂದು ಈ ಲೋಕದಲ್ಲಿ ಕೆಟ್ಟ ಜನರು ಆಡಿಕೊಳ್ಳುವರು. ಆದುದರಿಂದ ನೀನು ನಮ್ಮಣ್ಣನಲ್ಲಿಯೇ ಹೋಗಿ ಹೇಳಿಕೋ, ಅಣ್ಣನ ಆಜ್ಞೆಯೆಂಬ ಕಣ್ಣಿಯಿಂದ ಬಿಗಿಸಲ್ಪ ಟ್ಟಿದ್ದೇನೆ. ಇದು ಸಹಿಸಲಾರದ ಉರಿಯಾಗಿದೆ. ಅರ್ಜುನನ ಕಾಲಿಗೆ ಬಿದ್ದುನಿನ್ನ ದುಃಖವನ್ನು ಹೇಳಿಕೋ,ಅವನು ಧರ್ಮರಾಯನ ಮನಸ್ಸನ್ನು ತಿದ್ದುವನು. ನಕುಲಸಹದೇವರಲ್ಲಿ ತಿಳಿಸಿ ಅವರಿಂದ ಒಂದು ಮಾತು ಹೇಳಿಸು, ಹೇಗಾದರೂ ನಿನ್ನ ಕಾರ್ಯಸಿದ್ಧಿಯಾದರೆ ಸಂತೋಷ. ಆ ದುಷ್ಟನನ್ನು ಕೊಂದು ನಿನ್ನೊಬ್ಬಳನ್ನು ಕಾಪಾಡದೆ ಇದ್ದರೆ ಆ ಪಾಪವು ಆ ನಾಲ್ವರನ್ನೇ ಸುತ್ತಿಕೊಳ್ಳುವುದು, ನಮ್ಮನ್ನು ಸುಮ್ಮನೆ ಏಕೆ ಪೀಡಿಸುತ್ತೀಯೆ ! ನಾವು ಗಂಡುತನದ ಗರ್ವದಿಂದ ನುಡಿದೆವು. ಈ ಭಂಡತನದಿಂದ ಬಾಳತಕ್ಕವರಲ್ಲ. ನಮ್ಮ ಹಾದಿಯೇ ಬೇರೆ, ನಾವು ಧರ್ಮಗಿರ್ಮಗಳನ್ನೂ ನ್ಯಾಯಗೀಯಗಳನ್ನೂ ಹಿಡಿದು ನಡೆಯ ತಕ್ಕವರಲ್ಲ. ಕೊನೆಯಮಾತು ಹೇಳುತ್ತೇನೆ, ಕೇಳು ಧರ್ಮರಾಯನನ್ನು ಆಶ್ರಯಿಸು, ಕೀಚಕನ ತಲೆಯನ್ನು ತೆಗಿಸು, ಅಥವಾ ಅರ್ಜುನನಲ್ಲಿ ಹೇಳಿಕೋ,ಅವನಾದರೂ ಆ ಪಾಪಿಯನ್ನು ಕೊಲ್ಲುವನು,ನಿಜವಾಗಿಯೇ ಹೇಳುವೆನು ಕೇಳು, ಇಂದಿನಿಂದ ನೀನು ಆ ನಾಲ್ವರಿಗೇನೇ ಹೆಂಡತಿ. ನಾವು ಈಗ ಸ್ಥಳ ತಪ್ಪಿದವರು, ಬಿಟ್ಟವರು, ನಿನ್ನ ಗೋಜನ್ನು ಬಿಟ್ಟು ಬಿಟ್ಟಿದ್ದೇವೆ. ನನ್ನಲ್ಲಿ ಹೇಳಿಕೊಂಡುದರಿಂದ ನಿನಗೆ ಏನೂ ಫಲವಿಲ್ಲ.

ದ್ರೌಪದಿಯು ಈ ಮಾತುಗಳನ್ನು ಕೇಳಿದಳು, ಕೊರಳ ಸೆರೆಯು ಗೋನಾಳಿಗೆ ಬಂತು, ಅವಳು ಬಿಕ್ಕಿಬಿಕ್ಕಿ ಅಳುತ್ತಾ, ಶೂಲದ

ಮೊನೆಯು ಹಿಂದಕ್ಕೆ ಬಂದು ತಿವಿದಂತೆಯೂ, ಚಾಳೆಯು ಸುಳಿಗೆ ಬೆಂಕಿಯ ಝಳ ತಾಗಿದಂತೆಯೂ, ಹೊಟ್ಟೆಯ ಉರಿ ನೆತ್ತಿಗೆ ಹತ್ತಲು ನಿಟ್ಟುಸಿರುಬಿಡುತ್ತಾ ಅಳತೊಡಗಿದಳು. ಎಳೆಚಿಗುರಿನಂತೆ ಕೆಂಪಾದ ಅಂಗೈಯ ಶಾಖದಿಂದ ಅಂದವಾದ ಅವಳ ಕೆನ್ನೆಯು ಕಂದಿ ಬೂದಿಯಬಣ್ಣವಾಯಿತು. ಆಕೆಯ ನಿಡುಸುಯಿಲಿನಿಂದ ಏಕಾವಳೀ ಸರದ ಮುತ್ತುಗಳು ಸುಟ್ಟು ಇದ್ದಲಾದುವು. ಎವೆಗಳು ಕಣ್ಣೀರಿನಿಂದ ತುಂಬಿದುವು. ನೀಟಾದ ಕಣ್ಣಿನ ದೃಷ್ಟಿಯಿಂದ ಸ್ತಬ್ಧಳಾಗಿ ಅಡಿಗಡಿಗೆ ತಲೆದೂಗುತ್ತಿದ್ದಳು. ಮತ್ತೊಮ್ಮೆ ಭೀಮಸೇನನ ಮುಖವನ್ನು ನೋಡಿದಳು. ಗಟ್ಟಿಯಾಗಿ ನಿಟ್ಟುಸಿರುಬಿಡುತ್ತಾ ಅವನು ಕೇಳುವಹಾಗೆ ಇಂತೆಂದಳು—ಅಯ್ಯೋ ಕರ್ಮದ ಫಲವೆ ? ಪೂರ್ವದಲ್ಲಿ ನಾನು ಯಾರ ಹೆಂಗಸರನ್ನು ಅಳಲಿಸಿದ್ದೆನೋ ! ಯಾವ ಧರ್ಮವನ್ನು ಮೀರಿ ನಡೆದೆನೋ, ಯಾವ ಪಾಪದ ಫಲಕ್ಕೆ ಸಂಚಕಾರ ಹಿಡಿದೆನೋ, ನನ್ನ ಹಾಗೆ ನವೆದ ಹೆಂಗಸರು ಈ ಲೋಕದಲ್ಲಿ ಒಬ್ಬರಾದರೂ ಇರರು. ಲೋಕದಲ್ಲಿ ನನ್ನಂತಹ ನಿರ್ಭಾಗ್ಯಸ್ತ್ರೀಯು ಹುಟ್ಟಲೇಬೇಡ. ಮತ್ತು ಈ ಭೀಮಸೇನನಿಗೆ ಸಮಾನನಾದ ಗಂಡಸೂ ಹುಟ್ಟಬೇಡ. ನನ್ನಂತೆಯೂ ಪಾಂಡವರಂತೆಯೂ ಸಂಪೂರ್ಣವಾದ ದುಃಖವನ್ನು ಅನುಭವಿಸಿದವರು ಪೂರ್ವದಲ್ಲಿ ಯಾರೂ ಇಲ್ಲ. ಮುಂದೆಯೂ ಅಂತವರು ಸಿಕ್ಕಲಾರರು, ಎಂದು ಗೋಳಾಡುತ್ತಿದ್ದಳು. ಅವಳಿಗೆ ದುಃಖವು ಮೇಲೆಮೇಲೆ ಉಕ್ಕಿಉಕ್ಕಿ ಬರುತ್ತಿದ್ದಿತು. ಮತ್ತೆ ಇಂತೆಂದಳು. ‹‹ಅಯ್ಯೋ! ನಾನು ಯಾವ ವಿಷವನ್ನು ಕುಡಿಯಲಿ? ಯಾವ ಬೆಟ್ಟವನ್ನು ಹತ್ತಿ ಧುಮುಕಲಿ ? ಯಾವ ನೀರಿನ ಮಡುವಿನಲ್ಲಿ ಬೀಳಲಿ? ಯಾವ ಅಗ್ನಿಕುಂಡದಲ್ಲಿ ಪ್ರವೇಶಿಸಲಿ ? ಯಾವ ಹಾಸರೆಗಲ್ಲಿನ ಮೇಲೆ ಬಿದ್ದು ಮಡಿಯಲಿ ? ಹಾ ! ನನಗೆ ಸಾವು ಬಾರದೆ ಇದೆಯಲ್ಲ ! ಪಾಪಿಯಾದ ಕೌರವನು ನನ್ನ ಸೀರೆಯನ್ನು ಸೆಳೆದು ಮಾನಭಂಗ

ಮಾಡಲಿಕ್ಕೆ ಪ್ರಯತ್ನಿಸಿದನು. ಅರಣ್ಯದಲ್ಲಿದ್ದಾಗ ಸೈಂಧವನು ನನ್ನನ್ನು ಎಳೆದೊಯ್ದನು. ಇಂದು ಈ ನೀಚನಾದ ಕೀಚಕನ ಕೈಯಿಂದ ಒದೆಯಿಸಿಕೊಂಡೆನು. ಈ ಮೂರುಬಾರಿ ಉಂಟಾದ ಅವಮಾನಗಳಿಗಿಂತ ಮತ್ತೇನು ಬೇಕು ? ಹುಟ್ಟಿದ್ದು ಪಾಂಚಾಲರಾಯನ ಅರಮನೆಯಲ್ಲಿ—ಪತಿಗಳಾದರೋ ದೇವತೆಗಳಿಗಿಂತ ಹೆಚ್ಚಾದ ಪರಾಕ್ರಮಶೀಲರು, ಅವರಿಗೆ ಯಾರೂ ಇದಿರೇ ಇಲ್ಲ,–ನನಗೆ ಬಂದಿರುವ ವಿಪತ್ತಾದರೋ, ವಿರಾಟರಾಯನ ಹೆಂಡಿರ ತುರುಬು ಕಟ್ಟುವುದು. ವೈ ತಿಕ್ಕುವುದು, ಕಾಲನ್ನೊತ್ತುವುದು ಮುಂತಾದ ನೀಚಕೃತ್ಯಗಳು ! ಎಂತಹ ಅವಮಾನ ! ಏನು ಗ್ರಹಚಾರ ! ಶತ್ರುಗಳಿಗೆ ವಿಧೇಯರಾಗಿ ಬದುಕುವ ಮೂಢರುಂಟೆ? ಅವಮಾನವನ್ನು ಸಹಿಸಿಕೊಂಡು ಶತ್ರುಗಳಿಗೆ ಹೆಗಲುಕೊಟ್ಟು ಹೊರತಕ್ಕ ಹುಚ್ಚರೂ ಇರುವರೆ? ಸಾಕು, ಸಾಕು. ಲೋಕಪ್ರಸಿದ್ಧವಾದ ನಿಮ್ಮ ಬಿರುದುಗಳನ್ನು ಕಿತ್ತು ಬಿಸುಡಿರಿ; ಈ ಹೊರೆ ನಿಮಗೇಕೆ ? ಪಂಚಪಾಂಡವರಂತೆ ಮೂಗಿಲ್ಲದವರು ಯಾರಿರುವರು ? ಮುಳಿದರೆ ಒಬ್ಬೊಬ್ಬರೇ ಯಮನನ್ನಾದರೂ ಕೊಲ್ಲುವ ಶಕ್ತಿಯುಳ್ಳ ಸಾಹಸಿಗಳು ನೀವು. ಐವರೂ ಸೇರಿ ನನ್ನೊಬ್ಬಳನ್ನು ಆಳಲಾರಿರಾ? ಛೀ ಛೀ ! ಪಾಪಿಗಳಿರಾ ! ನಿಮಗೆ ಅಪಕೀರ್ತಿಯ ಭಯವಾದರೂ ಬೇಡವೆ ? ನಿಮಗೆ ಈ ತೋಳಿನ ಭಾರವೇತಕ್ಕೆ ? ನೀವು ರಾಜವಂಶದಲ್ಲಿ ಏತಕ್ಕೆ ಹುಟ್ಟಿದಿರಿ ? ಕೂಳಿಗಾಗಿ ಕಷ್ಟಪಟ್ಟುಕೊಂಡು ಕಂಡವರ ಪಟ್ಟಣದಲ್ಲಿ ಹೊಟ್ಟೆ ಹೊರೆಯುತ್ತಿರುವಿರಿ. ದೇಶ, ಕೋಶ, ದುರ್ಗ, ಚತುರಂಗಬಲ ಇವುಗಳನ್ನೆಲ್ಲಾ ಕೌರವನು ಕಸಿದುಕೊಂಡು ಪಟ್ಟಣದಿಂದ ನಿಮ್ಮನ್ನು ಅಟ್ಟಿಬಿಟ್ಟನು. ನನ್ನನ್ನಾದರೋ ಈ ದುರುಳ ಕೀಚಕನಿಗೆ ಕೊಟ್ಟುಬಿಟ್ಟಿರಿ. ನಿಮಗೆ ಭಾರವು ತಗ್ಗಿತು. ಇನ್ನು ಮುಂದೆ ನೀವೈವರೂ ಸುಖವಾಗಿರಬಹುದು. ನಮ್ಮ ಭಾವನಾದ ಕೌರವರಾಯನು ಭಾಗ್ಯವಂತನಾದನು. ನೀವು ಶ್ರೀಕೃಷ್ಣನ ಪ್ರೀತಿಗೆ

ಪಾತ್ರರಾಗಿ ಧರ್ಮವನ್ನು ರಕ್ಷಿಸಿದಿರಿ. ಪರಸೇವೆಯಲ್ಲಿ ಸಿಕ್ಕಿಕೊಂಡು ಬೇರೆಬೇರೆ ವೃತ್ತಿಗಳಲ್ಲಿ ನಿಂತು ಹೊಟ್ಟೇ ಹೊರೆಯುತ್ತಿರುವಿರಿ. ಸಾಯಲಿಕ್ಕೆ ಸಿದ್ಧಳಾಗಿರುವ ನಾನು ನಿಮಗೇತಕ್ಕೆ ಹೆದರಬೇಕು? ಎಲೈ ಭೀಮಸೇನನೇ! ನನಗೆ ಸಾಯಲಿಕ್ಕೆ ಅನುಮತಿಕೊಡು. ನಿಮ್ಮಣ್ಣನ ಆಜ್ಞೆಗೆ ಅಡಿ ಹೇಳದೆ ನಡೆದುಕೊಂಡು ಧರ್ಮವನ್ನು ಪರಿಪಾಲಿಸು. ನೀನು ಮತ್ತೊಬ್ಬಹೆಂಗಸಿನ ಜತೆಯಲ್ಲಿ ಬೆರೆದಾಗ ನನ್ನನ್ನು ನೆನೆದುಕೋ. ದಿಕ್ಕಿಲ್ಲದವಳಾಗಿದ್ದರೂ ವೀರಪತ್ನಿಗೆ ಉಚಿತವಾಗಿ ನಾನು ಆಡಿದ ಬಿರುನುಡಿಗಳಿಗೆ ಕೋಪಿಸಿಕೊಳ್ಳದೆ ಕ್ಷಮಿಸೆಂದು ಪ್ರಾರ್ಥಿಸುತ್ತೇನೆ''.

ದ್ರೌಪದಿಯು ಈ ಪ್ರಕಾರ ಹೇಳಿ ಅವನ ಕಾಲುಗಳಮೇಲೆ ಬಿದ್ದಳು. ಆಗ ಭೀಮನ ಕಣ್ಣುಗಳಿಂದ ನೀರು ಹರಿದು ಬಂತು. ಅವನ ಮನಸ್ಸು ಕರಗಿ ನೀರಾಯಿತು; ರೋಷವು ಉಕ್ಕಿತು; ಅವನು ಹಗೆಗಳನ್ನು ತನ್ನ ಮನಸ್ಸಿನಲ್ಲಿಯೇ ಕೊಂದು ಹಿಂಡಿಬಿಟ್ಟನು. ಅವನ ಮೈಯಲ್ಲಿ ಪುಳಕವುಕ್ಕಿತು, ದ್ರೌಪದಿಯನ್ನು ಬಾಚಿ ಅಪ್ಪಿಕೊಂಡನು. ತನ್ನ ಸೆರಗಿನಿಂದ ಅವಳ ಕಣ್ಣೀರನ್ನೊರಸಿದನು. ಕುರುಳನ್ನು ನೇವರಿಸಿ ಗಲ್ಲವನ್ನೊರಸಿ ಮುದ್ದಿಟ್ಟನು. ಹತ್ತಿರ ಇದ್ದ ತಂಬಿಗೆಯ ನೀರಿನಿಂದ ಅವಳ ಮುಖವನ್ನು ತೊಳೆದನು. ಅವಳನ್ನು ಕುರಿತು ಹೀಗೆ ಹೇಳಿದನು—ರಾಣಿಯೇ! ಕೋಪವನ್ನು ಬಿಡು, ನನಗೆ ಇನ್ನು ಹೆಚ್ಚಾಗಿ ಹೇಳಬೇಡ. ಇಗೋ! ನಮ್ಮಣ್ಣನ ಆಜ್ಞೆಯೆಂಬ ಪರ್ವತವನ್ನು ದಾಟಿಬಿಟ್ಟೆನು. ಇನ್ನು ಕೀಚಕನ ಹೊಟ್ಟೆಯನ್ನು ಸೀಳಿ ಬಿಸುಡುವೆನು; ಮಿಸುಕಿದರೆ ಈ ವಿರಾಟರಾಯನ ಕುಲದ ಹೆಸರನ್ನೇ ತೊಡೆದುಬಿಡುವೆನು. ಈ ಅಜ್ಞಾತವಾಸಕಾಲದಲ್ಲಿ ಕೌರವರು ನಮ್ಮ ಗುರುತು ಹಿಡಿದರೂ ಹಿಡಿಯಲಿ. ಪುನಃ ಹನ್ನೆರಡುವರುಷ ವನವಾಸಮಾಡಲಿಕ್ಕಾದರೂ ಸಿದ್ಧನಾಗಿರುವೆನು; ಅಥವಾ ವೈರಿಗಳಾದ ಕೌರವರನ್ನು ಕೊಂದುಕೆಡಹುವೆನು ; ಏನಾದರೂ ಆಗಲಿ ಹಿಂದಾಗುವವನಲ್ಲ. ಭೀಮನು ಕೆಟ್ಟಕೆಲಸ ಮಾಡಿಬಿಟ್ಟನೆಂದು ದೇವ

ತೆಗಳು ಹೇಳಿಕೊಂಡರೆ ಅವರ ಮುಸುಡನ್ನು ಮೇರುಪರ್ವತದಲ್ಲಿ ತಿಕ್ಕಿ ಬಿಡುವೆನು. ಧರ್ಮರಾಯನು ಕೋಪಿಸಿದರೆ ಅವನ ಅಣ್ಣತನವು ಇಂದಿಗೆ ಹರಿದೇಹೋಗಲಿ. ಅರ್ಜುನ ನಕುಲಸಹದೇವರು ಕೋಪಿಸಿಕೊಂಡರೆ ಅವರಮೇಲೆಯೂ ಕೈ ಮಾಡುವೆನು. ಮುಂದೆ ಅವರನ್ನು ನನ್ನ ತಮ್ಮಂದಿರೆಂತಲೇ ಕರೆಯುವುದಿಲ್ಲ. ಸಾಕ್ಷಾತ್ ಶ್ರೀಕೃಷ್ಣನೇ ಬಂದರೂ ಲಕ್ಷ್ಯಮಾಡುವವನಲ್ಲ, ಆದುದಾಗಲಿ, ಕೀಚಕನ ಕುಲವನ್ನೇ ಸವರುವೆನು. ನನಗೆ ಸಮಾನರಾದ ಬಲಶಾಲಿಗಳು ಈ ಲೋಕದಲ್ಲಿ ಯಾರಿರುವರು ? ಇಷ್ಟು ದಿನಗಳೂ ಅಣ್ಣನ ಆಜ್ಞೆಯೆಂಬ ಕಣ್ಣಿಯಿಂದ ಕಟ್ಟಲ್ಪಟ್ಟಿದ್ದೆನು. ಸಿಂಹದ ಮರಿಯನ್ನು ನರಿಯು ಕೆಣಕುವಂತೆ ಈ ಕುರುಕೀಚಕಾದಿಗಳು ನನ್ನನ್ನು ಕೆಣಕಿ ಕೆಟ್ಟರು. ಈ ನಾಯಿಗಳ ಪ್ರಾಣವನ್ನು ಏಸದ ಬಡ್ಡಿಯೊಂದಿಗೆ ತೆಗೆದುಕೊಳ್ಳುವೆನು. ಧರ್ಮದ ವಾಸಿಯು ಮೇರೆ ತಪ್ಪಿತು. ಎಲೌ ದ್ರೌಪದೀ ! ಕೀಚಕ ಮತ್ತು ದುರ್ಯೋಧನ ಇವರ ಪ್ರಾಣಗಳಿಗೆ ಸಂಚಕಾರಹಿಡಿ. ಈ ಭೀಮನು ಮುನಿದರೆ ನೀತಿಗೀತಿಗಳನ್ನೂ ಧರ್ಮಗಿರ್ಮಗಳನ್ನೂ ಲೆಕ್ಕಿಸನು. ನೀನು ನನಗೆ ಕೋಪವೆಬ್ಬಿಸಿದೆ, ನಿನಗೆ ಆದ ಅವಮಾನವು ನನಗೆ ಆದುದೆಂದು ತಿಳಿ. ಇದಕ್ಕೆ ಒಂದು ಉಪಾಯವನ್ನು ಹೇಳಿಕೊಡುವೆನು, ಕೇಳು. ಆ ಜಾರಕುನ್ನಿಯಾದ ಕೀಚಕನನ್ನು ಕರೆದು, ಸಂತೋಷದಿಂದ ನಾಟ್ಯಶಾಲೆಗೆ ಬರಹೇಳು ; ನಾಳೆ ರಾತ್ರಿಗೆ ಸ್ತ್ರೀರೂಪದಿಂದ ನಾನು ಅಲ್ಲಿಗೆ ಬಂದಿರುವೆನು. ಮರೆಯಲ್ಲಿ ನಿಂತು ಆ ಕೀಚಕನ ಹೊಟ್ಟೆಯನ್ನು ಸೀಳುವೆನು. ಅವನ ರಕ್ತವನ್ನು ಶಾಕಿನೀ ದೇವತೆಗಳಿಗೆ ಕುಡಿಸುವೆನು. ಇದರಲ್ಲಿ ಸಂಶಯಪಡಬೇಡ, ಅಲ್ಲಿ ಇರುವ ಕೆಲಬಲದ ಜನರು ತಿಳಿದರೆ ಅದಕ್ಕೆ ತಕ್ಕ ಔಷಧವನ್ನು ಮಾಡಬಲ್ಲೆನು. ನೀನು ಮರೆಯಲ್ಲಿರು ; ಹೋಗು.

ಈ ಮಾತುಕೇಳಿ ದ್ರೌಪದಿಗೆ ಸಂತೋಷ ಹೆಚ್ಚಿತು. ‘‘ಗಂಡಸ

ರಲ್ಲಿ ಗಂಡಸು ನೀನೊಬ್ಬನೇ ಸರಿ. ನನ್ನ ಪುಣ್ಯೋದಯದಿಂದ ನನಗೆ ನೀನೊಬ್ಬನೇ ಗಂಡನಾದೆ.'' ಎಂದು ಹೇಳಿ ವಂದಿಸಿ ಪತಿಯಿಂದ ಅಪ್ಪಣೆ ತೆಗೆದುಕೊಂಡು ತನ್ನ ಮನೆಗೆ ಹಿಂದಿರುಗಿಬಂದಳು. ಆಗ ಸೂರ್ಯನು ಆ ಪತಿವ್ರತೆಯ ಚಿಂತೆಯೆಂಬ ಅಂಧಕಾರವನ್ನು ತೊಲಗಿಸಬೇಕೆಂದು ಜಾಗ್ರತೆಯಲ್ಲಿ ಉದಿಸಿದನು. ಮುಚ್ಚಿಕೊಂಡಿದ್ದ ತಾವರೆಗಳೆಲ್ಲಾ ಅರಳಿದವು; ಸೂರ್ಯೋದಯವಾಯಿತು ; ಕೀಚಕನು ಎದ್ದು ಅರಮನೆಗೆ ಬರುತ್ತಿದ್ದನು. ದಾರಿಯಲ್ಲಿ ಸೈರಂಧ್ರಿಯನ್ನು ಕಂಡನು. ಹಿಂದಿನ ದಿನದಂತೆ ಅವಳಮೇಲೆ ಕೈ ದುಡುಕಲಿಕ್ಕೆ ಅವನಿಗೆ ಧೈರ್ಯಸಾಲದು. ವಿನಯದಿಂದ ಅವಳನ್ನು ನುಡಿಸಿದನು.

ಕೀಚಕ—ಸೈರಂಧ್ರೀ! ನಿನ್ನ ಮೇಲಣ ಬಯಕೆಯಿಂದ ನನಗೆ ನಿನ್ನೆಯರಾತ್ರಿ ನಿದ್ರೆಯೇ ಹಿಡಿಯಲಿಲ್ಲ. ಆ ರಾತ್ರಿಯನ್ನು ಒಂದು ಯುಗವಾಗಿ ಕಳೆದೆನು. ನೀನು ದಯಾಸಾಗರಳು ; ದೀನನಾದ ನನ್ನನ್ನು ಕಟಾಕ್ಷಿಸಿ ನೋಡು. ಪಾಪಿಯಾದ ಮದನನು ನನ್ನ ಪಾಲಿಗೆ ಯಮನಾಗಿದ್ದಾನೆ; ಇದನ್ನು ನೀನೇ ಬಲ್ಲೆ. ನನ್ನನ್ನು ಕೈ ಬಿಡದೆರಕ್ಷಿಸು.

ದ್ರೌಪ.—ಅಹುದು. ದಳಪತಿಯೇ ! ನಿನ್ನ ಮಾತು ನಿಜ ; ಪರ ಸ್ತ್ರೀಯನ್ನು ಬಯಸುವದು ದುರಾತ್ಮನಿಗೆ ಮನ್ಮಥನು ಯಮನೇ ಆಗ ವನು. ಅಂತವನಿಗೆ ಅಮೃತವೂ ವಿಷವೇ ಆಗುವುದು. ಆಲಿಕಲ್ಲುಗಳು ಬೆಂಕಿಯ ಕಿಡಿಗಳಾಗುವುವು. ತನ್ನ ಬಂಧುಗಳೇ ತನಗೆ ಶತ್ರುಗಳಾಗುವರು; ಪ್ರೀತಿಸಿದವರು ಕೂಡ ಒಲ್ಲದವರಾಗುವರು. ಅಂತಹ ಪಾಪಿಯನ್ನು ಈ ಭೂದೇವಿಯು ಹೊರಲಾರಳು.

ಕೀಚ—ಎಲೆ ದೇವೀ, ನಿನ್ನ ಪುರಾಣಧರ್ಮಗಳನ್ನು ಆಮೇಲೆ ಕೇಳಿ ತಿಳಿದುಕೊಳ್ಳುವೆನು. ನಿನ್ನ ಕರುಣಾಕಟಾಕ್ಷವೆಂಬ ಕವಚವನ್ನು ನನ್ನ ಮೈಗೆ ತೊಡಿಸು. ಮದನಬಾಣದ ತೀಕ್ಷ್ಣತೆಯನ್ನು ಹೋಗಲಾಡಿಸು. ನಿನಗೆ ದಾಸನಾಗಿ ಬಿದ್ದಿರುವೆನು.

ಈ ಪ್ರಕಾರ ಹೇಳಿ ಅಳಿಮನದಿಂದ ದ್ರೌಪದಿಗೆ ಕೈಮುಗಿದು ಪ್ರಾರ್ಥಿಸಿದನು.

ದ್ರೌಪ—ಎಲೈ ಕೀಚಕನೇ! ಎಷ್ಟುಬಗೆಯಿಂದ ಹೇಳಿದರೂ ನೀನು ಕೇಳುವುದಿಲ್ಲ. ಈ ಸುದ್ದಿ ನನ್ನ ಗಂಡಂದಿರಿಗೆ ತಿಳಿದರೆ ಅವರು ನಿನ್ನ ವಂಶವನ್ನೇ ಸವರಿಬಿಡುವರು. ಆದಾಗ್ಯೂ ಒಂದು ತಂತ್ರ ಮಾಡೋಣ. ನೀನು ಈ ರಾತ್ರಿ ನಾಟಕದ ಮನೆಗೆ ಬಂದು ಅಲ್ಲಿ ಇರು. ನಿನ್ನ ಆಯುಷ್ಯವು ತುಂಬಿದೆ; ಮುಂದಿನ ಪರಿಣಾಮ ಈ ರಾತ್ರಿ ಹೇಳಲಾರೆನು. ಮರೆಯಾದ ಕತ್ತಲೆಯಲ್ಲಿ ನಾನು ಅಲ್ಲಿಗೆ ಬರುವೆನು. ನನ್ನ ಮೇಲಣ ಹಂಬಲನ್ನು ನೀನಂತೂ ಬಿಡುವಹಾಗೆ ಕಾಣುವುದಿಲ್ಲ. ಆದುದಾಗಲಿ, ಬಾ.

ಕೀಚ—ಆಹಾ! ಇಂದಿಗೆ ನನ್ನ ಮನಸ್ಸು ನೆಮ್ಮದಿಯಾಯಿತು. ನನಗೆ ಬಹಳ ಸಂತೋಷ, ನೀನು ಬೇಡಿದ್ದನ್ನು ಕೊಡುವೆನು, ನಿನ್ನ ಕಾಲಿಗೆ ಬೀಳುವೆನು, ಮೋಸಮಾಡಬೇಡ; ತಪ್ಪದೆಬಾ. ಮಹಾಪ್ರಸಾದವೆಂದು ತಿಳಿಯುವೆನು.

ಈ ಪ್ರಕಾರವಾಗಿ ಹೇಳಿ, ಬಹು ಸಂತೋಷದಿಂದ ತನ್ನ ಮನೆಗೆ ಹೋದನು. ಎಂದಿಗೆ ಹೊತ್ತುಮುಳುಗುವುದು? ನಾನು ಎಂದಿಗೆ ಸೈರಂಧ್ರಿಯ ಸಮಾಗಮಮಾಡುವೆನು? ಎಂಬದಾಗಿ ಅವನು ಚಿಂತಿಸುತ್ತಾ ಆ ಹಗಲನ್ನೆಲ್ಲಾ ಬಹು ಪ್ರಯಾಸದಿಂದ ಕಳೆದನು. ಸೂರ್ಯನು ಈ ಕಾಮುಕನ ಅವಸ್ಥೆಯನ್ನು ನೋಡಿ, ಇವನ ಅವತಾರವು ಬೇಗ ಮುಗಿಯಲಿ ಎಂದು, ಅಸ್ತಾದ್ರಿಯ ತಪ್ಪಲಲ್ಲಿರುವ ಕಮಲವನಕ್ಕೆ ಇಳಿದನು. ಹೊತ್ತು ಮುಳುಗಿತು; ಕತ್ತಲೆಯಾಯಿತು

ಆಗ ದ್ರೌಪದಿಯು ಸಂತೋಷದಿಂದ ಆ ಕಗ್ಗತ್ತಲೆಯಲ್ಲಿ ತನ್ನ ಕಣ್ಣುಗಳ ಬೆಳಕೇ ತನಗೆ ದಾರಿಯನ್ನು ತೋರಿಸಲು, ಅಡಿಗೆಯ ಮನೆಯ ಕಡೆಗೆ ಬೇಗಬೇಗ ಬಂದಳು; ಭೀಮಸೇನನನ್ನು ಎಚ್ಚರಿಸಿದಳು 'ಎಲೈ

ಪ್ರಾಣಕಾಂತನೇ ! ಏಳು. ತಡವೇಕೆ ? ಮನೋದಾರ್ಢ್ಯವನ್ನು ಬಿಡ ಬೇಡ ; ಹೆಂಗಸಿಗೆ ಕೊಟ್ಟ ಭಾಷೆ ಮರೆಯಬೇಡ ; ಆ ಮದಾಂಧನನ್ನು ನಾಟ್ಯಶಾಲೆಗೆ ಬರಹೇಳಿರುವೆನು. ಆ ಕಾಮುಕನನ್ನು ಕಡಿದು ಹಾಕಿ, ನನ್ನಲ್ಲಿರುವ ನಿನ್ನ ಪ್ರೇಮರಸವನ್ನು ಹೊರಪಡಿಸು.'' ಎಂದು ಪ್ರಾರ್ಥಿಸಿ ದಳು. ಅವನು ಎದ್ದು ನಗುತ್ತಾ ಮಲ್ಲಗಂಟಿನಲ್ಲಿ ವಸ್ತ್ರವನ್ನುಟ್ಟನು. ಆ ನೀಚನನ್ನು ಈಗಲೇ ಕೊಂದುಬಿಡುವೆನೆಂದು ಪ್ರತಿಜ್ಞೆಮಾಡಿದನು. ಇವ ನು ಸ್ತ್ರೀರೂಪವನ್ನು ಧರಿಸಲಿಕ್ಕೆ ತಕ್ಕ ಸಹಾಯಗಳನ್ನೆಲ್ಲಾ ದ್ರೌಪದಿಯೇ ಮಾಡಿದಳು. ಹೊಸಮಾದಿರಿಯಾಗಿ ಜಡೆ ಹಾಕಿದಳು. ಅಂದವಾಗಿ ಸೀರೆಯುಡಿಸಿದಳು. ಮೈಗೆ ದಿವ್ಯಗಂಧವನ್ನು ಬಳಿದಳು. ಹಣೆಯಲ್ಲಿ ತಿಲಕವನ್ನು ತಿದ್ದಿದಳು. ತಲೆಯಮೇಲೆ ಅಕ್ಷತೆಗಳನ್ನು ಚೆಲ್ಲಿದಳು. ಅಪೂರ್ವವಾದ ಆ ಸ್ತ್ರೀರೂಪವನ್ನು ನೋಡಿ ಮೆಚ್ಚಿದಳು. ಶಹಬಾಸ್ ! ಶತ್ರುವು ಈಗಲೇ ನಿರ್ನಾಮವಾಗುವನು. ಬೇಗ ಹೊರಡೆಂದು ಅವ ಸರಿಸಿದಳು, ಆ ಕಗ್ಗತ್ತಲೆಯಲ್ಲಿ ಭೀಮನು ಅವಳ ಸಂಗಡ ಹೊರಟು, ನಾಟಕದ ಮನೆಗೆ ಬಂದು ಸೇರಿದನು. ಅಲ್ಲಿ ಹಾಕಿದ್ದ ಮಂಚದ ಮೇಲೆ ಮಲಗಿ ಆ ಖಳನ ಬರವನ್ನು ನಿರೀಕ್ಷಿಸುತ್ತಲಿದ್ದನು.

ಕೀಚಕನು ಉರಿಯುತ್ತಿರುವ ಮಾರಿಯ ಬೇಟೆಗೆ ಸಿಕ್ಕಿದ್ದಾನೆ. ಅವನ ಆಯುಷ್ಯವು ಕೊನೆಗಾಣುವ ದಿನ. ಎಂದಿಗೆ ಹೊತ್ತು ಮುಳು ಗುವುದೆಂದು ನಿರೀಕ್ಷಿಸುತ್ತಿದ್ದನು. ಅವನು ಕತ್ತಲೆಯಾದಮೇಲೆ ಪನ್ನೀರಿ ನಿಂದ ಸ್ನಾನಮಾಡಿದನು. ದಿವ್ಯವಾದ ವಸ್ತ್ರಗಳನ್ನು ಧರಿಸಿದನು. ಅನ ರ್ಘ್ಯಾಭರಣಗಳಿಂದ ಅಲಂಕರಿಸಿಕೊಂಡನು ; ದಿವ್ಯವಾದ ಗಂಧವನ್ನು ಅನುಲೇಪಿಸಿಕೊಂಡನು; ತನ್ನ ಸುಂದರರೂಪವನ್ನು ಒಲುವುಗನ್ನಡಿಯಲ್ಲಿ ನೋಡಿ ಮೆಚ್ಚಿಕೊಂಡನು. ವೈಯಾರದಿಂದ ಕತ್ತಿಯನ್ನು ತಿರುವುತ್ತಾ, ತನ್ನ ಅರಮನೆಯಿಂದ ಏಕಾಂಗಿಯಾಗಿ ಹೊರಟು, ಯಮಪಾಶದಿಂದ ಎಳೆಯಿಸಿಕೊಂಡವನಂತೆ ಸ್ಮಶಾನದ ಮಾರ್ಗವಾಗಿ ನಾಟಕಶಾಲೆಗೆ

ಬಂದನು. ದಾರಿಯಲ್ಲಿ ಇವನಿಗೆ ಹಲವು ಅಪಶಕುನಗಳಾದವು; ಗೂಗೆಗಳು ಕೂಗಿದುವು ; ನರಿಗಳು ಅರಚಿದುವು. ಅವನು ಇವುಗಳಲ್ಲಿ ಒಂದನ್ನಾದರೂ ಲಕ್ಷ್ಯಮಾಡಲಿಲ್ಲ. ಯಮನ ಬಾಯೊಳಕ್ಕೆ ಹೊಗುವಂತೆ ಆ ನಾಟ್ಯಶಾಲೆಯೊಳಕ್ಕೆ ಪ್ರವೇಶಿಸಿ, ತಡವರಿಸುತ್ತಾ, ಆ ಮಂಚವಿರುವಸ್ಥಳಕ್ಕೆ ಬಂದನು. ಆ ಕತ್ತಲೆಯಲ್ಲಿ ಅಲ್ಲಿಗೆ ಯಾರುಬಂದಿರುವರೆಂಬುದು ಗೊತ್ತಾಗಲಿಲ್ಲ. ಆಗ ಅವಳು ಸೈರಂಧ್ರಿಯೆಂಬ ಭ್ರಾಂತಿಯಿಂದ ಇಂತೆಂದನು.

ಕೀಚ—ಎಲೌ ಸುಂದರಿ ! ಇಗೋ ತಾಂಬೂಲವನ್ನು ತೆಗೆದುಕೊ ; ದಿವ್ಯವಾದ ಗಂಧವನ್ನು ನಿನಗೋಸ್ಕರವಾಗಿ ತಂದಿದ್ದೇನೆ. ಈ ಮಲ್ಲಿಗೆ ಹೂವಿನ ಹಾರವನ್ನು ನೋಡು. ಇವು ನಿನಗೆ ತಕ್ಕುವಾಗಿವೆಯೇ? ಅನರ್ಘವಾದ ಪೀತಾಂಬರವಿದೆ; ಇದನ್ನು ತೆಗೆದುಕೊಂಡು ಉಟ್ಟುಕೊ, ಮಾಲಿನಿ ! ನಿನ್ನ ಮಾಲಿನ್ಯವೆಲ್ಲಾ ಇಂದಿಗೆ ತೊಳೆದು ಹೋಯಿತು. ನಿನ್ನ ಮನಸ್ಸಿಗೆ ಒಪ್ಪಿದರೆ ಇವುಗಳನ್ನೆಲ್ಲಾ ಅಂಗೀಕರಿಸು. ನಿನಗೆಣೆಯಾದ ಪುರುಷನು ನಾನೇ ಸರಿಯಲ್ಲವೇ ! ನನ್ನಂತಹ ಸುಂದರರು ದೇವತೆಗಳಲ್ಲಿ ಕೂಡ ಯಾರೂ ಇಲ್ಲ. ಇನ್ನು ಮನುಷ್ಯರಲ್ಲಿ ನನ್ನನ್ನು ಹೋಲುವವರುಂಟೆ? ಇಂತಹ ಚೆಲುವನನ್ನು ಹಿಂದೆ ನೀನು ಎಲ್ಲಿಯಾದರೂ ಕಂಡಿರುವೆಯಾ? ನಿಜವಾಗಿ ಹೇಳು. ನನ್ನ ಮೇಲೆ ಆಣೆ. ನಿನ್ನಂತಹ ಸುಂದರಿಯರು ಮೊದಲು ನನ್ನನ್ನೇ ಕಾಮಿಸುವರು. ನನ್ನನ್ನು ನೋಡಿ ಮನಸೋಲದ ಸ್ತ್ರೀಯರೇ ಇಲ್ಲ. ನೀನೂ ನನ್ನನ್ನು ಒಲಿಸಿ ಧನ್ಯಳಾಗು, ನಿನ್ನ ಮೇಲೆ ಆಣೆ. (ಹೀಗೆಲ್ಲಾ ಮನಸ್ಸಿಗೆ ಬಂದಂತೆ ಮಾತನಾಡುತ್ತಿದ್ದನು.)

ಕಪಟದ್ರೌಪದಿ—ಎಲೈ ಕೀಚಕನೇ ! ನಿನ್ನಂತಹ ಸುಂದರ ಪುರುಷರು ಈ ಲೋಕದಲ್ಲಿ ಯಾರೂ ಇಲ್ಲ. ಹಾಗೆಯೇ ನನ್ನಂತಹ ಚೆಲುವೆಯರೂ ಒಬ್ಬರಾದರೂ ಕಾಣೆಸರು. ನನ್ನ ರೂಪವು ಇತರ

ಲಲನೆಯರ ರೂಪದಂತೆ ಅಲ್ಲ, ಇದು ಒಂದು ಹೊಸಮಾದಿರಿಯಾ ದುದು, ನಿನ್ನ ಒಳಿಗೆ ನಾನೇ ಒಲಿದು ಬಂದಿರುವೆನು. ನನಗೆ ಸೋಲದ ಪುರುಷರು ಒಬ್ಬರೂ ಇಲ್ಲ. ನನಗೆ ನೀನೇ ಸಮಾನನು. ನಿನ್ನನ್ನು ಒಲಿದೆನು. ನನ್ನ ಹೆಣ್ಣುತನದ ರೀತಿಯನ್ನು ನೋಡು.

ಕೀಚ:—(ಸಂತೋಷದಿಂದ ಉಬ್ಬಿ, ಭೀಮಸೇನನ ಮೈಸವರಿ ನೋಡಿ ಎದೆಯನ್ನು ಮುಟ್ಟಿ ನೋಡಿದನು, ಸಾಮಾನ್ಯವಾಗಿ ಸ್ತ್ರೀಯರ ಎದೆಯಂತೆ ಕಾಣಬರಲಿಲ್ಲ, ಕಠಿನವಾಗಿತ್ತು. ಇದನ್ನು ಕಂಡು ಮನಸ್ಸಿನಲ್ಲಿ ಚಿಂತಿಸುತ್ತಾ) ಎಲೌ ಸುಂದರಿಯೇ ! ನಿನ್ನ ಎದೆಯು ಶಿಲೆಯಂತೆ ಇದೆ. ಅತಿಕೋಮಲವಾಗಿದ್ದ ನಿನ್ನ ಶರೀರವು ಇಷ್ಟು ಬೇಗ ಏಕೆ ಹೀಗೆ ಗಟ್ಟಿಯಾಯಿತು ? ಈಗ ನೀನು ಮಾಯಾರೂಪವನ್ನೇನಾದರೂ ಧರಿಸಿರುವೆಯಾ ? ಹೆದರದೆ ಹೇಳು.

ಕಪಟ ದ್ರೌಪ:—ಎಲಾ ನೀಚನೇ ! ಪರಸತಿಯನ್ನು ಬಯಸಿದವನಿಗೆ ಅಮೃತವು ವಿಷವಾಗುವುದು ; ಮೃದುವಾದುದು ಕಠಿನವಾಗುವುದು ; ಇದನ್ನು ನೀನೇ ಪ್ರತ್ಯಕ್ಷವಾಗಿ ನೋಡಿದೆಯಲ್ಲವೇ ?

ಹೀಗೆ ಹೇಳಿ ಭೀಮಸೇನನು ಅವನ ಮುಂದಲೆಯನ್ನು ಹಿಡಿದುಕೊಂಡನು. ಆಗ ಕೀಚಕನು "ಛೀ ಛೀ ! ಚಪಲೆಯೇ ! ತೊಲಗು ತೊಲಗು" ಎನ್ನುತ್ತಾ ಮುಂದಕ್ಕೆ ನುಗ್ಗಿದನು. ಭೀಮನು ಅವನ ಬೆನ್ನಿಗೆ ಕೈಹಾಕಿ, ಅವನ ತುರುಬನ್ನು ಹಿಡಿದುಕೊಂಡನು. ಆಗ ಕೀಚಕನು ಕಳವಳಗೊಂಡು, ಬಹು ಕೋಪದಿಂದ "ಓಹೋ! ಮೋಸವಾಯಿತು ಇವನು ಹೆಂಗಸಲ್ಲ, ವಂಚಕನಾಗಿ ಕಾಣಿಸುತ್ತಾನೆ; ಇವನ ಕರುಳನ್ನು ಬಗಿದು ಕೊಲ್ಲುವೆನು ?" ಎನ್ನುತ್ತಾ ಭೀಮಸೇನನ ಮೇಲೆ ಬಿದ್ದು ಕಾದಿ ಅವನನ್ನು ತಿವಿದನು. ಆಗ ಭೀಮನು ಕೋಪದಿಂದ ಕೀಚಕನ ಬೆನ್ನಿನಮೇಲೆ ಗುದ್ದಿದನು. ಅವನ ಮೈಯನ್ನು ಸುತ್ತಿಕೊಂಡು ಬಲವಾಗಿ ಅಮುಕಿದನು. ಅವನು ಸ್ವಲ್ಪವೂ ಹೆದರದೆ ಭೀಮ

ನನ್ನು ಬಿಗಿದನು, ಹೀಗೆ ಕೀಚಕ ಭೀಮಸೇನರು ಜತೆಜತೆಯಾಗಿರುವ ಮಂದರಗಿರಿಗಳಂತೆ ಹೋರಾಡುತ್ತಿದ್ದರು. ಪಕ್ಕದಲ್ಲಿಯೇ ನಿಂತಿದ್ದ ದ್ರೌಪದಿಯು ಅವರನ್ನು ನೋಡಿ ನಗುತ್ತಿದ್ದಳು. ಆಗ ಕೀಚಕನು ಭೀಮನಮೇಲೆ ಬಿದ್ದನು. ಅವನು ನೆಲದಲ್ಲಿ ಹಾಗೆಯೇ ಕುಳಿತುಕೊಂಡು ಅರೆಗಳಿಗೆಯ ತನಕ ಮೈಮರೆತಿದ್ದನು. ಸ್ವಲ್ಪ ಹೊತ್ತಿನ ಮೇಲೆ ಆಭೀಮನು ಚೇತರಿಸಿಕೊಂಡು ಮೇಲಕ್ಕೆದ್ದು, ಕೋಪದಿಂದ ಹಲ್ಲುಗಳನ್ನು ಕಡಿಯುತ್ತಾ, ಬೆಟ್ಟದ ಮೇಲೆ ಬರಸಿಡಿಲು ಬೀಳುವಂತೆ ಉನ್ನತಬಾಹುಸತ್ವದಿಂದ ಕೀಚಕನ ಮೇಲೆ ಬಿದ್ದು, ನೆತ್ತಿಯ ಮೇಲೆ ಮೊತ್ತಿದನು. ಶತ್ರುವಿನ ಮುಷ್ಟಿಯ ಪೆಟ್ಟಿನಿಂದ ಕೀಚಕನ ತಲೆ ಬಿರಿಯಿತು; ಅವನ ಮೈ ಹುಡಿಹುಡಿಯಾಯಿತು ; ಕಣ್ಣುಗಳು ತಿರುಗಿಕೊಂಡುವು; ಆದರೂ ಅವನು ಕಂಗೆಡದೆ ಮೆಲ್ಲಮೆಲ್ಲನೆ ಚೇತರಿಸಿಕೊಂಡು ಎದ್ದನು; ಹಗೆ ತೀರಿಸಿಕೊಳ್ಳಬೇಕೆಂದು, ಸಿಟ್ಟಿನಿಂದ ಆನೆಯು ಸಿಂಹದ ಮೇಲೆ ಬೀಳುವಂತೆ ಭೀಮನ ಮೇಲೆ ಬಿದ್ದು, ಅವನ ಪಕ್ಕೆಗಳನ್ನು ತಿವಿದನು. ಆಗ ಭೀಮನು ಹಿಂದಿರುಗಿ, ಕೋಪದಿಂದ ಕೀಚಕನ ಎದೆಯನ್ನು ತಿವಿದನು. ಅವನ ಎದೆ ಜಳ್ಳಾಗಿ ಕರುಳುಗಳು ಕಿತ್ತು ಈಚೆಗೆ ಬಂದು ಬಿಟ್ಟುವು. ಕಣ್ಣುಗಳು ಬಿರಿದುವು. ನಿಮಿಷಮಾತ್ರದಲ್ಲಿಯೇ ಕೀಚಕನು ಕೆಳಕ್ಕೆ ಧೊಪ್ಪನೆ ಬಿದ್ದು ಮಡಿದನು. ಭೀಮನು ಆ ಹೆಣದ ತಲೆಯನ್ನು ಎದೆಯಲ್ಲಿ ಸೇರಿಸಿ, ಕೈಕಾಲುಗಳನ್ನು ಹೊಟ್ಟೆಯಲ್ಲಿ ಸಿಕ್ಕಿಸಿ, ಮುದ್ದೆಯಾಗಿ ಮಾಡಿ, ಈಚೆಗೆ ಹೊರಟು ಬಂದು, ಪ್ರೇಮಾಸ್ಪದೆಯಾದ ದ್ರೌಪದಿಗೆ ಕೀಚಕನ ಸ್ಥಿತಿಯನ್ನು ತೋರಿಸಿದನು. ಯಮನ ಕೋಣದಿಂದ ತುಳಿಯಲ್ಪಟ್ಟ ಹಾಗೆ ಕೀಚಕನು ಸತ್ತು ಬಿದ್ದಿದ್ದನು. ಅದನ್ನು ನೋಡಿ ದ್ರೌಪದಿಗೆ ಪರಮಾನಂದವಾಯಿತು. ಆ ಸಾಧ್ವಿಯು ಭೀಮನನ್ನು ಅಪ್ಪಿಕೊಂಡು ಮುದ್ದಿಟ್ಟಳು. ಆಗಲಾತನು ದ್ರೌಪದಿಯನ್ನು ಸಂತೈಸಿ, „ ಎಲೆ ಸತಿಯೇ ! ನೀಚನ

ಭಯಬಿಡು ಮನೆಗೆಹೋಗಿ ನಿಶ್ಚಿಂತೆಯಿಂದ ಸುಖವಾಗಿ ಮಲಗು,'' ಎಂದು ಹೇಳಿಬಿಟ್ಟು ತನ್ನ ಮನೆಗೆ ಹೋದನು.

ಸ್ತ್ರೀಸ್ವಭಾವವು ಚಂಚಲವಾದುದು; ಪತಿಯು ಹೇಳಿದಂತೆ ಸುಮ್ಮನೆ ಮನೆಗೆ ಹೋಗಿ ಸೇರಬಾರದಾಗಿತ್ತೆ? ಅವಳು ಹಾಗೆ ಮಾಡ ಲಿಲ್ಲ. ಈ ಸಂದರ್ಭದಲ್ಲಿಯೇ ದುಷ್ಟರಾದ ಉಪಕೀಚಕರನ್ನು ತೀರಿಸಿ ಬಿಡುವುದು ಸುಲಭ. ಇಲ್ಲದಿದ್ದರೆ ವಿರೋಧವು ಪ್ರಬಲಿಸು ವುದು ಎಂದು ಯೋಚಿಸಿದಳು. ಅಲ್ಲಿ ಕಾವಲಿದ್ದ ಜನರನ್ನು ಕೂಗಿ ಎಬ್ಬಿಸಿ "ಇಗೋ ನೋಡಿರಿ. ಈ ದುರುಳನಾದ ಕೀಚಕನು ಇಲ್ಲಿಗೆ ಬಂದು ಬಲಾತ್ಕಾರದಿಂದ ನನ್ನನ್ನು ಕೆಣಕಿದನು. ನನ್ನ ಪತಿಗಳಾದ ಗಂಧರ್ವರಿಗೆ ಇದು ತಿಳಿಯಿತು. ಅವರು ಕೋಪಗೊಂಡು ಇವನ ಆಯುಷ್ಯವನ್ನು ತೀರಿಸಿಬಿಟ್ಟರು,'' ಎಂದಳು. ಅವರು ಗಾಬರಿಯಾಗಿ ಕೈದೀಪಗಳನ್ನು ಹತ್ತಿಸಿಕೊಂಡು ಬಂದು ಕೀಚಕನ ಸ್ಥಿತಿಯನ್ನು ನೋಡಿ ಭಯಪಟ್ಟು, ಅಲ್ಲಿಂದ ಬೇಗಬೇಗ ಓಡಿಹೋಗಿ, ಅವನ ತಮ್ಮಂದಿರಿಗೆ ಈ ಸುದ್ದಿಯನ್ನು ಹೇಳಿದರು. ಈ ಮಾತು ಕೇಳಿ ಅವರಿಗೆ ಎದೆಯಲ್ಲಿ ಶೂಲದಿಂದ ಇರಿದಂತೆ ಆಯಿತು. ಅವರು ಬಾಯಿಬಾಯಿ ಬಿಡುತ್ತಾ, ಕೆದರಿದ ಮಂಡೆಯಿಂದ ಅಲ್ಲಿಗೆ ಓಡಿಬಂದು ನೋಡಿದರು. ಅಣ್ಣನು ಮಡಿದು ಬಿದ್ದಿದ್ದನು. ಅವನನ್ನು ನೋಡಿ ದುಃಖಿಸಿ "ಅಯ್ಯೋ ಅಣ್ಣಾ! ನಿನ್ನ ಪರಿಣಾಮವು ಹೀಗಾಯಿತೆ? ಮುಂದೆ ನಮಗೆ ಇನ್ನಾರು ಗತಿ? ಪರದೇಶಿಗಳಾದೆವಲ್ಲಾ; ಮುಂದೆ ನಾವು ಯಾರನ್ನು ಸೇರೋಣ,'' ಎಂದು ಸ್ವಲ್ಪ ಹೊತ್ತು ಗೋಳಾಡಿದರು. ಆ ಬಳಿಕ ಇವನನ್ನು ಕೊಂದ ಕ್ರೂರಕರ್ಮಿಗಳು ಯಾರೋ ತಿಳಿಯಲಿಲ್ಲವಲ್ಲಾ; ತಿಳಿ ದರೆ ಅವನನ್ನು ಈಗಲೇ ಸಿಗಿದು ಇವನ ಜತೆಯಲ್ಲಿಯೇ ಸುಟ್ಟು ಬಿಡ ಬಹುದೆಂದು ಅತ್ತಿತ್ತ ನೋಡಿದರು. ಹತ್ತಿರದಲ್ಲಿಯೇ ನಿಂತಿದ್ದ ದ್ರೌಪ ದಿಯು ಇವರನ್ನು ನೋಡಿ, ಮುಗುಳುನಗೆಯಿಂದ "ಈ ನೀಚನು

ನನ್ನನ್ನು ಕೆಣಕಿ ಈ ಗತಿಗೆ ಬಂದನು, ನೋಡಿರಿ'' ಎಂದಳು. ಆಹಾ! ಇವಳ ದೆಸೆಯಿಂದಲೇ ಅಣ್ಣಯ್ಯನು ಮಡಿದನೇ? ಇವಳಿಗೆ ತಕ್ಕ ಪ್ರಾಯಶ್ಚಿತ್ತಮಾಡಿಯೇ ಬಿಡಬೇಕು.'' ಎಂದು ನಿಶ್ಚಯಿಸಿದರು. ತತ್‌ಕ್ಷಣವೇ ವಿರಾಟರಾಯನ ಬಳಿಗೆ ಓಡಿಹೋಗಿ ಅವನನ್ನೆಬ್ಬಿಸಿ, ಕೀಚಕನು ಮಡಿದ ಸುದ್ದಿಯನ್ನು ತಿಳಿಸಿದರು. ಇದನ್ನು ಕೇಳಿ ಅವನು ಬಹಳವಾಗಿ ದುಃಖಿಸಿ ಮುಂದೆ ಏನು ಮಾಡಬೇಕೋ ತೋರದಲ್ಲಾ, ಎಂದು ಚಿಂತಿಸುತ್ತಿದ್ದನು. ಅದಕ್ಕವರು ‹‹ಪ್ರಭುವೇ ? ನಮ್ಮ ಅಣ್ಣನು ಸೈರಂಧ್ರಿಯ ದೆಸೆಯಿಂದ ಲೋಕಾಂತರವನೆಯ್ದಿದನು. ಆ ನೀಚಳನ್ನು ಆತನ ಜತೆಯಲ್ಲಿಯೇ ಸೇರಿಸಿ ಸುಟ್ಟು ಬಿಟ್ಟರೆ ಪರಲೋಕದಲ್ಲಿಯಾದರೂ ಸುಖಪಡುವನು, ಇದಕ್ಕೆ ಅನುಮತಿ ಕೊಡಬೇಕು'' ಎಂದು ವಿನಯದಿಂದ ಪ್ರಾರ್ಥಿಸಿದರು. ನಿಮ್ಮ ಮನಸ್ಸಿಗೆ ಬಂದಂತೆ ಮಾಡಿಕೊಳ್ಳಿರಿ ಎಂದು ವಿರಾಟರಾಯನು ಹೇಳಿಬಿಟ್ಟನು. ಆಗ ಅವರು ಅಲ್ಲಿಂದ ಹೊರಟು ಬಂದು ದ್ರೌಪದಿಯನ್ನು ನೋಡಿ, ‹‹ಛೀ! ಮಾಯಗಾತಿ! ನಮ್ಮಣ್ಣನನ್ನು ಕೊಲ್ಲಿಸಿದ ಪಾಪಕ್ಕೆ ತಕ್ಕ ಫಲವನ್ನು ಅನುಭವಿಸುವೆ, ಬಾ'' ಎಂದು ಹಿಡಿದುತಂದು, ಕೀಚಕನಿಗೆ ಕಟ್ಟಿದ ಚಟ್ಟದಲ್ಲಿಯೇ ಅವನ ಕಾಲುದೆಸೆಯಲ್ಲಿ ಅವಳನ್ನು ಬಿಗಿದು ಕಟ್ಟಿದರು. ಆ ಮೇಲೆ ಅದನ್ನು ಅವರೇ ಹೊತ್ತುಕೊಂಡು ಹೋಗುತ್ತಿದ್ದರು. ಆಗ ಲಾಸಾಧ್ವಿಯು ‹‹ಅಯ್ಯೋ ಪಾಪಿಗಳಿರಾ ! ನಿಮಗೇನು ಕೇಡುಗಾಲ ಬಂತು!'' ಎಂದು ಉಪಕೀಚಕರನ್ನು ಶಪಿಸಿ, ತನ್ನ ಪತಿಗಳನ್ನು ಕುರಿತು ‹‹ಗಂಧರ್ವರಿರಾ ! ನಾನು ಸಾಯುತ್ತಿದ್ದೇನೆ, ಬೇಗ ಬಂದು ನನ್ನನ್ನು ಬಿಡಿಸಿರಿ'' ಎಂದು ಒದರುತ್ತಾ ತಾವು ಇಟ್ಟುಕೊಂಡಿದ್ದ ಸಂಕೇತನಾಮಗಳಿಂದ ‹‹ಹೊ ಜಯನೇ ! ಜಯಂತನೇ ! ವಿಜಯನೇ, ವಿಜಯೋದ್ಭವನೇ, ಜಯಸೇನನೇ, ನೀವು ಎಲ್ಲಿದ್ದೀರಿ? ಈ ನೀಚರು ನನ್ನನ್ನು ಎಳೆದೊಯ್ದು ಸುಟ್ಟುಬಿಡುವರು. ತಡೆಮಾಡದೆ ಬೇಗ ಬಂದು

ಸಲಹಿರಿ'' ಎಂದು ಕೂಗಿಕೊಂಡಳು. ಪಾಕಶಾಲೆಯಲ್ಲಿ ಮಲಗಿದ್ದ ಭೀಮನು ಆ ಆರ್ತಧ್ವನಿಯನ್ನು ಕೇಳಿ, ಈ ನೀಚರಿಗೂ ಆಯುಸ್ಸು ಮುಗಿದು ಬಂದಿದೆ. ಇವರನ್ನೂ ಕೀಚಕನ ಬಳಿಗೇನೇ ಕಳುಹಿಬಿಡು ವೆನು. ಎಂದು ತತ್‍ಕ್ಷಣದಲ್ಲಿಯೇ ಎದ್ದು ಸುಡುಗಾಡಿನ ಬಳಿಗೆ ಓಡಿ ಬಂದನು. ಇವನ ಭಯಂಕರ ರೂಪವನ್ನು ನೋಡಿ ಉಪಕೀಚಕರು ಹೆದರಿ, ದಿಕ್ಕುತೋರದೆ "ಎಲಾ! ಗಂಧರ್ವನು ಬಂದಹಾಗೆ ಕಾಣು ತ್ತಿದೆ, ನಮ್ಮ ಜೀವಕ್ಕೂ ವಿಪತ್ತು ಬರುವಂತೆ ತೋರುತ್ತದೆ. ಈ ಪೀಡೆ ತೊಲಗಿ ಹೋಗಲಿ, ಬಿಟ್ಟು ಬಿಡೋಣವೆ?'' ಎಂದು ಹೇಳಿ ಕೊಳ್ಳುತ್ತಿದ್ದರು. ಭೀಮಸೇನನು ಹತ್ತಿರ ಇದ್ದ ದೊಡ್ಡದೊಂದು ಮರ ವನ್ನು ಮುರಿದು ಕೈಯಲ್ಲಿ ಹಿಡಿದುಕೊಂಡು, ಅವರನ್ನು ಕೂಗಿ ಹೇ ಳಿದನು. "ಎಲೆಲೇ ನಾಯಿಗಳಿರಾ! ಓಡಿಹೋದರೆ ಬಿಡುವೆನೆ? ನಿಮ್ಮಣ್ಣನ ಜತೆಯಲ್ಲಿ ನೀವೂ ಯಮಲೋಕಕ್ಕೆ ಹೊರಡಿರಿ. ಒಂಟಿ ಯಾಗಿ ಅವನನ್ನೇಕೆ ಕಳುಹಬೇಕು? ನೀವು ಒಡಹುಟ್ಟುಗಳಲ್ಲವೆ?'' ಎಂದು ಆ ಹೆಮ್ಮರದಿಂದ ಬಡಿದು ಆ ನೂರೈದು ಮಂದಿ ಉಪಕೀ ಚಕರನ್ನು ಹೊಡೆದು ಕೊಂದುಹಾಕಿದನು. ಆ ಬಳಿಕ ದ್ರೌಪದಿಯ ಕಟ್ಟುಗಳನ್ನು ಬಿಚ್ಚಿ, ಬಿಡಿಸಿ, "ಪ್ರಿಯಳೆ! ದುಷ್ಟರು ನಾಶವಾದರು. ಧೈರ್ಯದಿಂದ ಮನೆಗೆಹೋಗು'' ಎಂದು ಹೇಳಿಕಳುಹಿಸಿ ತಾನು ಅಡಿಗೆ ಯಮನೆಗೆ ಹೋಗಿ ಸೇರಿದನು. ಅಷ್ಟು ಹೊತ್ತಿಗೆ ಬೆಳಗಿನ ಜಾವವಾ ಯಿತು. ದ್ರೌಪದಿಯು ಕೊಳದಲ್ಲಿ ಸ್ನಾನಮಾಡಿ, ಮಡಿಯನ್ನುಟ್ಟು, ಶ್ರೀಕೃಷ್ಣನನ್ನು ಧ್ಯಾನಿಸುತ್ತಾ, ರಾಜಬೀದಿಯಲ್ಲಿ ಹೊರಟು ಅಂತಃ ಪುರಕ್ಕೆ ಬರುತ್ತಿದ್ದಳು. ಜನರು ಈಕೆಯನ್ನು ನೋಡಿ, ಮಾತನಾಡಿಸ ಲಿಕ್ಕೆ ಹೆದರಿ, ಅಲ್ಲಲ್ಲಿಯೇ ಗುಜುಗುಂಪಲು ಬೀಳುತ್ತಿದ್ದರು. ಅವಿ ವೇಕಿಯಾದ ಕೀಚಕನು ಈ ಪತಿವ್ರತೆಯನ್ನು ಕೆಣಕಿಕೆಟ್ಟನೆಂದು ಕೆಲ ವರೂ, ಪರಸ್ತ್ರೀಯರನ್ನು ಬಯಸುವವನಿಗೆ ಸಾವು ತಪ್ಪದೆಂದು ಕೆಲ

ವರೂ, ಅವನು ಮಾತ್ರವಲ್ಲ, ಅವನ ತಮ್ಮಂದಿರು ನೂರೈದು ಮಂದಿ ಯೂ ಹೋದರಂತೆ! ಪಾಪ! ಅವರೇನು ಮಾಡಿದರೋ? ಎಂದು ಕೆಲ ವರೂ, ನಮಗೆ ಈ ಸುದ್ದಿಗಳೇಕೆ ? ದೊಡ್ಡ ದೊಡ್ಡವರ ಮಾತು, ಎಲ್ಲಿಯಾದರೂ ಹೋಗಲಿ ಎಂದು ಕೆಲವರೂ ಮಾತನಾಡಿಕೊಳ್ಳುತ್ತಿದ್ದರು. ಕಂಡ ಕಂಡ ಜನರೆಲ್ಲಾ ಈಕೆಯು ಪರಾಶಕ್ತಿಯೆಂದು ತಿಳಿದು ಕೈಮುಗಿಯುತ್ತಿದ್ದರು. ಇವಳು ಬರುತ್ತಿರುವಾಗ ಬಾಣಸದ ಮನೆಯ ಬಾಗಿಲಲ್ಲಿ ನಿಂತಿದ್ದ ಭೀಮಸೇನನನ್ನು ಕಡೆಗಣ್ಣಿನಿಂದ ನೋಡಿ, ಅವನ ಮೇಲೆ ಮುಗುಳುನಗೆಯನ್ನು ಚೆಲ್ಲುತ್ತಾ, "ಶೂರರಾದ ಗಂಧರ್ವ ರಾಯರಿಗೆ ನಮಸ್ಕಾರ" ಎಂದು ಹೇಳಿ ಬೇಗ ಬೇಗ ನಡೆದು ತನ್ನ ಮನೆಗೆ ಬಂದು ಸೇರಿದಳು. ಅಷ್ಟು ಹೊತ್ತಿಗೆ ಸೂರ್ಯೋದಯ ವಾಯಿತು.

ಕೀಚಕರೆಲ್ಲರೂ ಮಡಿದ ಸುದ್ದಿಯು ಬೇಗಬೇಗನೆ ಊರಲ್ಲೆಲ್ಲಾ ಹರಡಿತು. ಎಲ್ಲರ ಬಾಯಲ್ಲಿಯೂ ಇದೇ ಮಾತು, ಇದೇ ಕಥೆ, ವಿರಾಟರಾಜನ ಕಿವಿಗೂ ಮುಟ್ಟಿತು. ಅವನು ತನ್ನ ಮನಸ್ಸಿನಲ್ಲಿ "ಇದೇನು ? ವಿಪತ್ತಿನ ಮೇಲೆ ವಿಪತ್ತು ಬರುತ್ತದೆ. ಈ ನಾರಿಯು ಮಾರಿಯೇ ಸರಿ. ಇವಳಿಂದಲೇ ನೂರಾರು ಮಂದಿ ಶೂರರು ಮಡಿದು ಹೋದರು." ಎಂದುಕೊಂಡು, "ಇವಳನ್ನು ಕಳುಹಿಸಿ ಬಿಡು, ತನ್ನ ಮನಸ್ಸು ಬಂದ ಕಡೆಗೆ ಹೋಗಿಸೇರಲಿ" ಎಂದು ರಾಣಿಗೆ ಹೇಳಿದನು. ಆಗ ಸುಧೇಷ್ಣೆಯು, ತಮ್ಮಂದಿರು ಸತ್ತದುಃಖದಿಂದಲೂ, ಪತಿಯ ಆಜ್ಞೆಯಿಂದಲೂ ಮನಸ್ಸಿನಲ್ಲಿ ನೊಂದುಕೊಂಡು ಸೈರಂಧ್ರಿಯನ್ನು ಕುರಿತು ಇಂತೆಂದಳು.

ಸುಧೇ:—ಅಮ್ಮಾ! ನಿನಗೆ ಸಾವಿರ ನಮಸ್ಕಾರಗಳು, ನಿನ್ನನ್ನು ಕಂಡರೆ ಭಯವಾಗುತ್ತದೆ. ನೀನು ಸಾಮಾನ್ಯ ಸ್ತ್ರೀಯಲ್ಲ, ನಿನ್ನ ಮಹಿಮೆ ಪ್ರಬಲವಾದುದೆಂದು ತಿಳಿಯಿತು. ನಾನು ಮಾತ್ರವೇ ಅಲ್ಲ;

ಮಹಾರಾಜನೂ, ಅಧಿಕಾರಿಗಳೂ, ಪಟ್ಟಣದ ಜನರೂ ನಿನ್ನ ಹೆಸರನ್ನು ಕೇಳಲು ಹೆದರುತ್ತಿದ್ದಾರೆ. ತಾಯಿ! ನೀನು ಇಲ್ಲಿ ಇರಬೇಡ, ಮನಸ್ಸು ಬಂದ ಕಡೆಗೆ ಹೋಗಿ ಸುಖವಾಗಿರಬಹುದು; ದಯಮಾಡಿ ನನ್ನ ಕೋರಿಕೆಯನ್ನು ನಡಿಸೆಂದು ಬೇಡುತ್ತೇನೆ.

ದ್ರೌಪ:—ದೇವೀ! ತಮ್ಮ ಮಾತನ್ನು ಶಿರಸಾವಹಿಸುವೆನು. ಇದರಲ್ಲಿ ನನ್ನ ತಪ್ಪೇನೂ ಇಲ್ಲ. ನಿಮ್ಮ ತಮ್ಮನು ದಾರಿತಪ್ಪಿ ನಡೆದುದರಿಂದ ನನ್ನ ಗಂಡಂದಿರು ಸೈರಿಸದೆ ಅವನನ್ನು ಶಿಕ್ಷಿಸಿದರು. ಅವನ ತಮ್ಮಂದಿರು ಅವನೊಂದಿಗೆ ನನ್ನನ್ನು ಸುಡಲಿಕ್ಕೆ ಯತ್ನಿಸಿದ್ದರಿಂದ ಅವರಿಗೂ ಉಳಿಗಾಲ ಬರಲಿಲ್ಲ. ನಿಮ್ಮ ಸೇವೆಮಾಡಿಕೊಂಡು ನಿಮಗೆ ಎರಡು ಬಗೆಯುವ ಸ್ವಭಾವ ನಮ್ಮಲ್ಲಿಲ್ಲ. ದುಷ್ಟರು ನೀತಿ ತಪ್ಪಿನಡೆದರೆ ತಮ್ಮಿಂದ ತಾವೇ ಕೆಡುವರು. ಇದಕ್ಕೆ ಯಾರೇನು ಮಾಡಬಲ್ಲರು?

ಸುಧೇ:—ಮಾಲಿನೀ! ಅವರು ತಮ್ಮಿಂದ ತಾವೇ ಕೆಟ್ಟರೋ, ಅನ್ಯರಿಂದ ಕೆಟ್ಟರೋ ಆ ಸುದ್ದಿ ಹೇಗಾದರೂ ಹೋಗಲಿ. ನಿಮ್ಮದೇನೂ ತಪ್ಪಿಲ್ಲ. ನಮಗೆ ನಿಮ್ಮನ್ನು ಕಂಡರೆ ಭಯವಾಗುತ್ತದೆ. ನೀವು ಇನ್ನು ಇಲ್ಲಿರಬೇಡಿರಿ. ಕೈಮುಗಿಯುವೆನು.

ದ್ರೌಪ:—ಒಡತೀ! ಇಷ್ಟು ಅಸಮಾಧಾನವು ನಿಮಗೇಕೆ? ನಾವು ಇಲ್ಲಿಯೇ ಇರಬೇಕೆಂಬ ಯೋಚನೆಯಿಲ್ಲ. ನೀವು ಹೇಳುವುದಕ್ಕೆ ಮುಂಚೆಯೇ ಹೊರಟು ಹೋಗಲಿಕ್ಕೆ ಸಿದ್ಧರಾಗಿದ್ದೇವೆ. ಇನ್ನು ಹದಿಮೂರು ದಿನಗಳು ಮಾತ್ರ ನಾವು ಇಲ್ಲಿರುವೆವು. ಅದುವರೆಗೆ ಕಾಪಾಡಿದರೆ ತರುವಾಯ ನಿಮಗೆ ಶುಭವನ್ನುಂಟು ಮಾಡಿ ಹೊರಟು ಹೋಗುವೆವು. ನೀವು ಹೆದರಬೇಡಿರಿ. ದುಷ್ಟರೆಲ್ಲರೂ ಸತ್ತರು. ನಾವು ಜಗಳಗಂಟಿಗಳೆಂದು ತಿಳಿಯದೆ ಇರಿ. ನಿಮಗೆ ಲೇಸಾಗುವುದು.

ಈ ಪ್ರಕಾರ ಸಮಾಧಾನ ಹೇಳಿ ತನ್ನ ಮನೆಗೆ ಹೋದಳು. ಸುಧೇಷ್ಣೆಯು ಹೆಚ್ಚು ಮಾತನಾಡಿದರೆ ಮತ್ತೇನು ಮಾಡಿಬಿಡುವಳೋ

ಎಂಬ ಭಯದಿಂದ ಅವಳ ಮಾತಿಗೆ ಒಪ್ಪಿಕೊಂಡು ಸುಮ್ಮನಾದಳು. ಕೀಚಕನೂ ಅವನ ತಮ್ಮಂದಿರೂ ಸತ್ತ ಸುದ್ದಿಯು ಬೇಗಬೇಗನೆ ಎಲ್ಲಾ ಕಡೆಗೂ ಹಬ್ಬಿಕೊಂಡಿತು.

——:0:——

## ಐದನೆಯ ಸಂಧಿ.

ದುರ್ಯೋಧನನು ಯುದ್ಧಸನ್ನದ್ಧನಾಗಿ ಬಂದು, ದಕ್ಷಿಣದಿಕ್ಕಿನಲ್ಲಿ ಗೋವುಗಳನ್ನು ಹಿಡಿಯಲಿಕ್ಕೆ ಸುಶರ್ಮನನ್ನು ಕಳುಹಿಸಿದನು. ಅವನು ವಿರಾಟರಾಯನ ಸಂಗಡ ಕಾದಿ, ಜಯಪಡೆಯುವಷ್ಟರಲ್ಲಿ ಭೀಮನು ಅವನನ್ನು ಸೋಲಿಸಿ ಓಡಿಸಿದನು.

ದುರ್ಯೋಧನನು ಪಾಂಡವರಿರುವ ಸ್ಥಳವನ್ನು ಯಾರು ಕಂಡು ಬಂದು ತಿಳಿಸುವರೋ, ಅವರಿಗೆ ಹೆಚ್ಚಾಗಿ ಬಹುಮಾನ ಕೊಡುವೆನೆಂದು ಪ್ರಕಟಿಸಿ, ದಿಕ್ಕುದಿಕ್ಕಿಗೂ ದೂತರನ್ನು ಕಳುಹಿದ್ದನಷ್ಟೆ. ಆ ದೂತರು ಭೂಮಿಯಲ್ಲಿ ಎಲ್ಲಾ ಕಡೆಗಳಲ್ಲಿಯೂ ಸುತ್ತಿಸುತ್ತಿ ನೋಡಿದರೂ ಪಾಂಡವರ ಸುದ್ದಿಯೇ ತಿಳಿಯಲಿಲ್ಲ. ಇನ್ನು ಹೆಚ್ಚು ದಿನಗಳು ಸುಮ್ಮನೆ ಕಾಲಕಳೆಯುವುದರಿಂದ ಪ್ರಯೋಜನವಿಲ್ಲವೆಂದು ತಿಳಿದು, ಅವರು ಹಿಂದಿರುಗಿ, ಹಸ್ತಿನಾಪುರಕ್ಕೆ ಬಂದು ಸೇರಿದರು. ರಾಜಸಭೆಗೆ ಹೋಗಿ, ಕೌರವರಾಯನನ್ನು ಕಂಡು, ಕೈಮುಗಿದು ಇಂತೆಂದರು.

ದೂತ:—ಜೀಯಾ! ತಮ್ಮ ಅಪ್ಪಣೆಯಂತೆ ನಾವು ಸಮಸ್ತ ದೇಶಗಳಲ್ಲಿಯೂ ಸುತ್ತಿಸುತ್ತಿ ಪಾಂಡವರನ್ನು ಹುಡುಕಿದೆವು. ನಮ್ಮ ಬುದ್ಧಿಯನ್ನೆಲ್ಲಾ ವೆಚ್ಚಮಾಡಿ ನೋಡಿದೆವು. ಎಲ್ಲೆಲ್ಲಿ ನೋಡಿದರೂ ಅವರ ಸುಳಿವೇ ಇಲ್ಲ. ಆ ಪಾಂಡವರು ಪಾತಾಳಲೋಕಕ್ಕೆ ಹೋದರೋ ಇಂದ್ರಲೋಕವನ್ನು ಸೇರಿದರೋ ನಮಗೆ ಆ ಸುದ್ದಿ ತಿಳಿಯದು. ಈ ಲೋಕದಲ್ಲಂತೂ ಅವರ ಹೆಸರೇ ಇಲ್ಲ. ನಿನ್ನ ವೈರಿಗಳು ನಿರ್ನಾಮರಾದರು.

ಕುರುಪತಿ:—(ಈ ಮಾತುಕೇಳಿ ನಗುತ್ತಾ) "ಬಹಳ ಸಂತೋಷ. ನೀವು ಹೋಗಿದ್ದ ಕಡೆಗಳಲ್ಲೆಲ್ಲಾ ಚೆನ್ನಾಗಿ ಹುಡುಕಿ ನೋಡಿದಿರೆಂದು ನಂಬುತ್ತೇನೆ. ಆದರೂ ಇಷ್ಟುಮಟ್ಟಿಗೆ ನೋಡಿದ ಮಾತ್ರದಿಂದಲೇ ಅವರು ನಾಶವಾದರೆಂದು ಹೇಳುವುದಕ್ಕಾಗದು. ನೋಡೋಣ, ಮುಂದೆ ಏನಾದರೂ ತಿಳಿದರೆ ಬಂದು ಹೇಳಿರಿ."

ಈ ಪ್ರಕಾರ ಅವರನ್ನು ಮನ್ನಿಸಿ ಕಳುಹಿದನು. ಒಂದೆರಡು ದಿನಗಳು ಕಳೆದ ಮೇಲೆ ದಕ್ಷಿಣದಿಕ್ಕಿಗೆ ಹೋಗಿದ್ದ ದೂತನೊಬ್ಬನು ಅವಸರವಸರದಿಂದ ಓಡಿಬಂದನು. ಅವನು ಬಂದು ದೊರೆಯನ್ನು ಕಂಡು ನಮಸ್ಕರಿಸಿ,

ದೂತ:—ಎನ್ನೊಡೆಯಾ! ತಮ್ಮ ಮನಸ್ಸಿಗೆ ಸಂತೋಷಕರವಾದ ಒಂದು ಸುದ್ದಿ ತಂದಿರುವೆನು.

ಕೌರವ:—ಅದೇನು ಬೇಗ ಹೇಳು, ಕೇಳೋಣ.

ದೂತ:—ಜೀಯಾ! ಕೇಳು. ತಮ್ಮ ಅಪ್ಪಣೆಯಿಂದ ಪಾಂಡವರನ್ನು ಹುಡುಕಲಿಕ್ಕೆ ಹೊರಟ ನಾನು ದೇಶಾಂತರದಿಂದ ಬಹಳ ದೇಶಗಳನ್ನು ಸುತ್ತಿ ನೋಡುತ್ತಾ ಬಂದೆನು. ಎಲ್ಲಿಯೂ ಅವರ ಸುಳಿವೇ ಇಲ್ಲ. ಅವರು ಎಲ್ಲಿಗೆ ಹೋದರೋ ತಿಳಿಯದು. ಆದರೂ ಒಂದು ಸಂತೋಷ ಸುದ್ದಿ ಮಾತ್ರ ತಿಳಿದು ಬಂದ ಹಾಗಾಯಿತು.

ಕೌರವ—ಅದೇನು ಬೇಗ ಹೇಳಬಾರದೆ!

ದೂತ—ಪ್ರಭುವೇ! ಮತ್ಸ್ಯನಗರದಲ್ಲಿ ವಿರಾಟರಾಯನು ಆಳುತ್ತಿರುವನಷ್ಟೆ. ನಮ್ಮ ತ್ರಿಗರ್ತರಾಜರಿಗೆ ವೈರಿಯಾದ ಕೀಚಕನೂ ಅವನ ತಮ್ಮಂದಿರೂ ಆ ವಿರಾಟರಾಯನಲ್ಲಿ ಹೋಗಿ ಸೇರಿಕೊಂಡಿದ್ದರು.

ದುರ್ಯೋಧನ.—ಹೌದು. ಏನಾಯಿತು?

ದೂತ—ಆ ಕೀಚಕನು ರಾವಣಾಸುರನ ಹಾಗೆ ಪರಸ್ತ್ರೀಯ

ನ್ನು ಕೆಡಿಸಲಿಕ್ಕೆ ಯತ್ನಿಸಿದನಂತೆ. ಇದನ್ನು ತಿಳಿದು ಆ ರಾತ್ರಿಯೇ ಗಂಧರ್ವರು ಬಂದು ಕೀಚಕನನ್ನೂ, ಅವನ ತಮ್ಮಂದಿರಾದ ನೂರೈದು ಮಂದಿ ಉಪಕೀಚಕರನ್ನೂ ನಿಶ್ಶೇಷವಾಗಿ ಕೊಂದು ಹಾಕಿದರಂತೆ! ಈ ಸಮಾಚಾರವು ಆದೇಶದ ಜನರಿಗೆಲ್ಲಾ ಭಯವನ್ನು ಹುಟ್ಟಿಸಿದೆ. ಕೀಚಕನ ವೈರಿಗಳಾದ ತ್ರಿಗರ್ತರಿಗೆ ಇದಕ್ಕಿಂತಲೂ ಹೆಚ್ಚಿನ ಸಂತೋಷ ಯಾವುದು? ಕಂಡು ಕೇಳಿದ ಸಂಗತಿ ಬಿನ್ನಹ ಮಾಡಿದ್ದೇನೆ.

ಕುರುಪತಿ:—(ಚಿಂತಿಸುತ್ತಾ) ಏನಿದು? ಅತ್ಯಾಶ್ಚರ್ಯ! ಆಹಾ! ಹೀಗೆ ನಡೆಯಿತೆ !! (ಕ್ಷಣಕಾಲ ಮೌನವಾಗಿದ್ದು, ಬಳಿಕ ಅವನನ್ನು ನೋಡಿ) ಎಲಾ ! ಅದೇನು !! ಮತ್ತೊಮ್ಮೆ ಹೇಳು, ಕೇಳೋಣ. ಕಿವಿಗಳಿಗೆ ಹಿತವಾದ ಸುದ್ದಿಯನ್ನು ಕೇಳಿದ ಹಾಗಾಯಿತು. ಸುಭಟನಾದ ಕೀಚಕನು ಮಡಿದನೇ! ಅವನನ್ನು ಗಂಧರ್ವರು ಕೊಂದುಹಾಕಿದರೇ !! ಇನ್ನೇನು! ವಿರಾಟರಾಯನ ತೋಳು ಮುರಿದೇ ಹೋಯಿತು. (ಸ್ವಲ್ಪ ಹೊತ್ತು ಚಿಂತಿಸಿ) ಛೀ! ಛೀ !! ಈ ಮಾತು ನಿಜವಾಗಿರಬಹುದೇ ! ಇದನ್ನು ನಂಬಲಿಕ್ಕೆ ಅವಕಾಶವಿಲ್ಲವಲ್ಲಾ !! ದೇವಲೋಕದ ಜನರು ಮನುಷ್ಯರ ಸಂಗಡ ಕಾದಿದರೆಂದರೇನು? ನಿನ್ನ ಮಾತು ಸುಳ್ಳಾಗಿ ತೋರುತ್ತದೆ. ಜೋಕೆ, ಇಂತಹ ಮಾತುಗಳನ್ನು ನಮ್ಮಲ್ಲಿ ಹೇಳಬಾರದು. ನಿಜವಾಗಿ ನಡೆದ ವರ್ತಮಾನವನ್ನು ಹೇಳಬೇಕು.

ದೂತ—(ಕೈಮುಗಿದು) ಬುದ್ಧೀ ! ಬಡವನ ಮೇಲೆ ಕೋಪ ಮಾಡಬಾರದು. ದಯಮಾಡಿ ನನ್ನ ಮಾತನ್ನು ಲಾಲಿಸಿರಿ. ಇದರಲ್ಲಿ ಸ್ವಲ್ಪವಾದರೂ ಅಸತ್ಯವಿಲ್ಲವೆಂದು ಪ್ರಮಾಣಮಾಡಿ ಹೇಳುತ್ತೇನೆ. ಒಬ್ಬ ದೇವತಾಸ್ತ್ರೀಯು ವಿರಾಟರಾಯನ ಹೆಂಡತಿಯಾದ ಸುಧೇಷ್ಣೆಯನ್ನು ಓಲೈಸಿಕೊಂಡಿದ್ದಳು; ಒಂದುದಿನ ಅವಳು ಓಲಗದಲ್ಲಿದ್ದಾಗ ದಳಪತಿಯಾದ ಕೀಚಕನು ಅಲ್ಲಿಗೆ ಹೋದನಂತೆ! ಅವನ ದೃಷ್ಟಿಯು ಆ ದೇವಕನ್ಯೆಯ ಮೇಲೆ ಬಿತ್ತು. ಅವರವರಿಗೆ ಸ್ವಲ್ಪಮಾತು ಕಥೆಗಳು

ನಡೆದು, ಏನೋ ಒಂದು ವಿಧವಾಗಿ ಸಮಾಧಾನವಾಯಿತು. ಒಂದು ದಿನ ರಾತ್ರಿ ಆ ಸ್ತ್ರೀಯು ಕೀಚಕನನ್ನು ನಾಟ್ಯಗೃಹಕ್ಕೆ ಬರಹೇಳಿ, ಸಂಕೇತಮಾಡಿಕೊಂಡು ಹೋದಳಂತೆ. ಆಡಿದ ಮೇರೆಗೆ ಅದೇ ರಾತ್ರಿ ಗಂಧರ್ವರು ಬಂದು ಕೀಚಕರನ್ನೆಲ್ಲಾ ಕೊಂದು ಹಾಕಿದ್ದು ನಿಜ. ಇದ ರಲ್ಲಿ ಸ್ವಲ್ಪವೂ ಅನುಮಾನವಿಲ್ಲ.

ಕೌರವ—(ಮೂಗಿನ ಮೇಲೆ ಬೆರಳಿಟ್ಟುಕೊಂಡು, ಸ್ವಲ್ಪ ಹೊತ್ತು ಆಲೋಚಿಸಿ, ಸಭೆಯಲ್ಲಿದ್ದವರನ್ನು ನೋಡಿ) ಸಾಮಾಜಿಕರೇ ! ಇವನು ಹೇಳಿದ ಮಾತುಗಳನ್ನು ಕೇಳಿದಿರಾ ! ಸ್ವಲ್ಪ ಯೋಚನೆಮಾಡಿ ನೋಡಿ. ಈ ಮಾತಿನಲ್ಲಿ ಸುಳ್ಳಿಲ್ಲವೆಂದು ಇವನು ಹೇಳುತ್ತಾನೆ. ಗಂಧರ್ವ ಸ್ತ್ರೀಯೆಂದರೇನು ! ವಿರಾಟರಾಯನ ಅಂತಃಪುರದಲ್ಲಿ ಸೇರುವುದೆಂದರೇನು ! ! ಇದು ಅಸಂಭವವು. ಆ ಗಂಧರ್ವ ಸ್ತ್ರೀಯೇ ದ್ರೌಪದಿಯೆಂದು ತೋರುತ್ತದೆ. ಕೀಚಕನನ್ನು ಕೊಂದವನು ಭೀಮಸೇನನಾಗಿಯೇ ಇರಬೇಕು. ಪಾಂಡವರ ಕಪಟೋಪಾಯದಿಂದ ಈ ಕಾರ್ಯವು ನಡೆದಿರುವುದು ನಿಜ. ನನ್ನ ಶತ್ರುಗಳು ಸಾಯಲಿಲ್ಲವೆಂದು ಖಂಡಿತವಾಗಿ ಹೇಳಬಲ್ಲೆನು.

ಮಂತ್ರಿಗಳು—ಸ್ವಾಮಿ ! ವಾಯುವು ಪರಿಮಳವನ್ನು ಕದ್ದೊಯ್ಯುತ್ತಿರುವುದು. ಅದರ ಹೆಜ್ಜೆಯನ್ನು ಕಂಡು ಹಿಡಿಯಬೇಕಾದರೆ ತುಂಬಿಗಳ ಹೊರತು ಮತ್ತಾವ ಪಕ್ಷಿಗಳಿಂದಲೂ ಸಾಧ್ಯವಲ್ಲ. ಹಾವಿನ ಹೆಜ್ಜೆ ಹಾವಿಗೆ ತಿಳಿಯುವುದೇ ಹೊರತು ಮಿಕ್ಕ ಪ್ರಾಣಿಗಳಿಗೆ ಹೇಗೆ ಗೊತ್ತಾದೀತು ? ನಿಮ್ಮ ಶತ್ರುಗಳ ಇರುವಿಕೆಯು ನಿಮಗೇ ಗೊತ್ತು. ಈ ದೂತನಿಗೆ ಹೇಗೆ ತಿಳಿದೀತು ?

ಕುರುಪತಿ—ಇದರಲ್ಲಿ ಅಷ್ಟೇನೂ ಚಮತ್ಕಾರವಿಲ್ಲ. ಭೂಲೋಕದಲ್ಲಿ ಭೀಮ, ಬಲರಾಮ, ಕೀಚಕ, ಶಲ್ಯ ಇವರು ಸಮಾನ ಬಲರೆನಿಸಿರುವರು. ಇವರೊಂದಿಗೆ ಕಾದತಕ್ಕ ಐದನೆಯ ವೀರನೇ

ಇಲ್ಲ. ಸಮರ್ಥನಾದ ಕೀಚಕನನ್ನು ಕೊಲ್ಲಬೇಕಾದರೆ ಭೀಮನ ಹೊರತು ಮತ್ತೊಬ್ಬರೂ ಸಮರ್ಥರಲ್ಲ. ನಮ್ಮ ದಾಯಾದ್ಯರಾದ ಪಾಂಡವರು ಆ ವಿರಾಟ ನಗರದಲ್ಲಿಯೇ ಗುಟ್ಟಾಗಿದ್ದುಕೊಂಡು ಕಾಲವನ್ನು ಎಣಿಸುತ್ತಿರುವರು. ಅಜ್ಞಾತವಾಸದ ಅವಧಿಯು ಮುಗಿಯುವುದರೊಳಗಾಗಿ ಅವರನ್ನು ಕಂಡು ಹಿಡಿದು ಬಯಲಿಗೆ ತಂದರೆ ಮತ್ತೆ ಹದಿಮೂರುವರ್ಷ ಅವರು ಕಾಡಿಗೆ ಹೋಗಬೇಕಾಗುವುದು.

ಸಭೆಯವರು— (ಗಟ್ಟಿಯಾಗಿ ಕೈಚಪ್ಪಾಳೆ ತಟ್ಟಿ) ನಿಜ ! ಒಡೆಯನ ಮಾತು ಸಮಂಜಸವಾಗಿದೆ. ಪಾಂಡವರ ಗುಟ್ಟು ರಟ್ಟಾಗುವ ಕಾಲ ಬಂತು. (ಎಂಬದಾಗಿ ಕೂಗಿದರು.)

ಆ ಬಳಿಕ ಕೌರವನು ಭೀಷ್ಮದ್ರೋಣಾದಿ ವೀರರನ್ನು ಮಂತ್ರಾಲೋಚನೆಯ ಮನೆಗೆ ಕರೆಸಿಕೊಂಡು, ಆಗತಾನೇ ಬಂದ ಸುದ್ದಿಯನ್ನೂ ಮುಂದಣ ರಾಜಕಾರ್ಯವನ್ನೂ ಕುರಿತು ಅವರೊಂದಿಗೆ ಆಲೋಚನೆ ಮಾಡಿದನು.

ಕೌರವ—ಧೀಮಂತರೇ! ಈ ಲೋಕದಲ್ಲಿ ಕೀಚಕನ ಸಮಬಲರು ಭೀಮ, ಶಲ್ಯ, ಬಲರಾಮ, ಇವರು ಮೂವರ ಹೊರತು ಮತ್ತಾರೂ ಇಲ್ಲವಷ್ಟೆ! ಯಾರೋ ಗಂಧರ್ವರಂತೆ! ರಾತ್ರಿಹೊತ್ತಿನಲ್ಲಿ ಬಂದು, ಕೀಚಕನನ್ನು ಕೊಂದು ಹಾಕಿದರಂತೆ! ಇದರಲ್ಲಿ ಅಬದ್ಧವಿಲ್ಲವಂತೆ ! ನಿಧಾನವಾಗಿ ಯೋಚಿಸಿನೋಡಿರಿ. ಗಂಧರ್ವರೆಂಬ ಮಾತು ಬಯಲಿನ ಅಪವಾದ. ಕೀಚಕನು ಕಾಮುಕನಾಗಿ ದ್ರೌಪದಿಯನ್ನು ಬಯಸಿರಬೇಕು. ಆ ನೀಚನನ್ನು ಕತ್ತಲೆಯಲ್ಲಿ ಭೀಮಸೇನನೇ ಕೊಂದು ಹಾಕಿರಬೇಕು. ಎಂದು ನನಗೆ ತೋರುತ್ತದೆ. ನಿಮ್ಮ ಅಭಿಪ್ರಾಯವೇನು ?

ಭೀಷ್ಮ—ರಾಜನೇ ! ನಿನ್ನ ಮಾತು ಯುಕ್ತಿಯುಕ್ತವಾಗಿಯೇ ಇದೆ. ಮಾತಿನ ಹೋಲಿಕೆಯೂ ಸರಿಯಾಗಿದೆ. ಕೀಚಕನು

ಸತ್ತದ್ದು ಲೋಕಕ್ಕೆ ಹಿತವೇ ಆಯಿತು; ನಮಗೂ ಇದು ಸಂತೋ
ಷಕರವಾಗಿಯೇ ಇದೆ. ಇದಕ್ಕೆ ಅನುಸಾರವಾಗಿ ಮತ್ತೊಂದು
ಕಾರಣವೂ ಕಾಣಬರುತ್ತಿದೆ ನೋಡು. ಧರ್ಮರಾಯನು ವಾಸಮಾ
ಡುವ ದೇಶದಲ್ಲಿ ಕ್ಷಾಮಬಾಧೆಯಿಲ್ಲ. ಬೆಳೆಗಳು ಚೆನ್ನಾಗಿ ಆಗು
ವುವು. ತೋಟಗಳು ಸ್ವಲ್ಪವೂ ಒಣಗುವುದಿಲ್ಲ. ಸುಳ್ಳು, ಕೊಲೆ,
ಪಾತಕ ಮೊದಲಾದ ಅಕೃತ್ಯಗಳು ತಲೆದೋರುವುದಿಲ್ಲ. ಆ ಪ್ರದೇ
ಶದಲ್ಲಿ ಜನರೆಲ್ಲರೂ ಸೌಖ್ಯವಾಗಿರುವರು. ಲಕ್ಷ್ಮಿಯು ಎಲ್ಲಿ ನೆಲ
ಸಿರುವಳೋ ಅಲ್ಲಿ ನಾಡು ಸೊಂಪಾಗಿರುವುದು. ಎಲ್ಲಿ ಐಶ್ವರ್ಯವಿರು
ವುದೋ ಅಲ್ಲಿ ತಂಪೂ ಪರಿಮಳವೂ ಇರುವುವು. ಪಾಂಡವರು ಅಂತಹ
ಸ್ಥಳದಲ್ಲಿಯೇ ಇರುವರೆಂಬುದು ನಿಜ. ಇದರಲ್ಲಿ ಅನುಮಾನವಿಲ್ಲ.

ದ್ರೋಣಾಚಾರ್ಯ—ಸರಿ ಸರಿ. ಆರ್ಯರ ಮಾತನ್ನು ನಾವು ಒಪ್ಪು
ತ್ತೇವೆ. ತಕ್ಕ ಆಧಾರಗಳಿಂದ ಇದನ್ನು ಸಾಧಿಸಬಹುದು. ಈ ಕಾಲ
ದಲ್ಲಿ ಉತ್ತರಕ್ಕೆ ಹಿಮಾಚಲವೂ, ಮಿಕ್ಕ ಮೂರು ಕಡೆಗಳಲ್ಲಿ ಸಮು
ದ್ರವೂ ಮೇರೆಯಾಗಿರುವ ಭರತ ಖಂಡದ ದೇಶಗಳೆಲ್ಲವೂ ಕ್ಷಾಮ
ಬಾಧೆಯಿಂದ ಪೀಡಿತವಾಗಿ ಬೆಂದು ಬೆಂಡಾಗುತ್ತಿವೆ. ಆದರೂ ಮಧ್ಯ
ದೇಶದಲ್ಲಿ ವಿರಾಟರಾಯನ ಸೀಮೆಯಲ್ಲಿ ಮಾತ್ರ ಉತ್ತಮವಾದ ಬೆಳೆ
ಯಾಗಿದೆ. ಅಲ್ಲಿಯ ಜನರೆಲ್ಲಾ ಆರೋಗ್ಯವಂತರಾಗಿ ಸುಖದಿಂದಿ
ದ್ದಾರೆ. ಈ ಪ್ರದೇಶವೇ ಪಾಂಡವರ ಚಾವಡಿಯಾಗಿರಬೇಕು.

ಕರ್ಣ:—ಆ ಮಾತು ಹಾಗಿರಲಿ ! ಅಂತು ಪಾಂಡವರು
ಸಿಕ್ಕಿದಂತೆಯೇ ಆಯಿತು. ಅವಧಿ ತೀರುವುದಕ್ಕಿಂತ ಮುಂಚೆಯೇ
ಆ ಪಾಂಡವರನ್ನು ಕಂಡು ಹಿಡಿಯಬೇಕು. ಆಗ ಅವರು ಸತ್ಯಕ್ಕೆ
ಕಟ್ಟುಬಿದ್ದು ಮೊದಲಿನಂತೆ ವನವಾಸಕ್ಕೆ ಹೊರಡಬೇಕಾಗುವುದು.
ಆದುದರಿಂದ ಮುಂದಿನ ಕೆಲಸಕ್ಕೆ ತೊಡಗೋಣ. ಅವರ ನೆಲೆಯನ್ನು
ಗೊತ್ತುಮಾಡುವ ಮಾರ್ಗವನ್ನು ನಾನೇ ಬಲ್ಲೆನು.

ಭೀಷ್ಮ:—ರಾಜನೆ! ಈ ಕರ್ಣನು ದುಡುಕಿಮಾತನಾಡು ವಂತೆ ತೋರುತ್ತದೆ. ರಾಜಾಸ್ಥಾನದಲ್ಲಿ ನೀತಿಮಾರ್ಗವನ್ನು ಅರಿ ಯದೆ ಇರುವ ಮಂತ್ರಿಗಳ ಮಾತನ್ನು ಕೇಳಿದರೆ ನಿರ್ನಿಮಿತ್ತವಾಗಿ ಕೇಡುಂಟಾಗುವುದೇ ಹೊರತು ಮತ್ತಾವ ಲಾಭವೂ ಇಲ್ಲ. ಗಾಜ ನ್ನು ಸಾಣೆಗೆ ಕೊಟ್ಟರೆ ಬೆಳ್ಳಿಯು ಒಡವೆಯಾದೀತೆ? ಹಾಗೆಯೇ ಕರ್ಣನ ಬೀಜ ಮಂತ್ರಗಳಿಂದ ಕೇಡುಬಾರದೆ ತಪ್ಪದು. ಆ ಪಾಂಡ ವರು ಸತ್ಯಕ್ಕೆ ವಶರಾಗಿ ನಡೆಯತಕ್ಕವರೇ ಹೊರತು ಯುದ್ಧಕ್ಕೆ ಹೆದರಿ ಓಡಿಹೋಗತಕ್ಕವರಲ್ಲ. ಅವರ ಅಜ್ಞಾತವಾಸದ ಅವಧಿಯು ಮುಗಿ ಯುತ್ತಬಂತು. ಈ ವೇಳೆಯಲ್ಲಿ ಅವರನ್ನು ಕರೆಯಿಸಿ ಅವರ ಅರ್ಧ ರಾಜ್ಯವನ್ನು ಅವರಿಗೆ ಕೊಡು. ಇದರಿಂದ ನಿನಗೇನೂ ನಷ್ಟವಿಲ್ಲ, ಲೋಕವೂ ಮೆಚ್ಚುವುದು. ನಿನಗೂ ಶ್ರೇಯಸ್ಸು ಉಂಟಾಗುವುದು. ಕರ್ಣನು ಈಗ ಹೇಳಿದ ಸಲಹೆಯು ಯುಕ್ತವೆಂದು ನನಗೆ ತೋರಲಿಲ್ಲ.

ಕುರುರಾಯ:—ಹಿರಿಯರು, ಒಳ್ಳೆಯ ಮಾತನಾಡಿದಿರಿ. ಇದು ನಿಮಗೆ ಚೆನ್ನಾಗಿದೆ. ನನಗೆ ಮಾತ್ರ ಸಮ್ಮತವಿಲ್ಲ. ನೀವು ಹೇಳಿದಹಾಗೆ ಪಾಂಡವರಿಗೆ ನನ್ನ ಭೂಮಿಯನ್ನು ಎಂದಿಗೂ ಕೊಡ ಲಾರೆನು. ನನ್ನ ತಂದೆಯ ಮಾತೂ ಈ ಸಂದರ್ಭದಲ್ಲಿ ನಡೆಯತಕ್ಕ ದ್ದಲ್ಲ. ಸಂಧಿಯ ಸುದ್ದಿ ನನ್ನಲ್ಲಿ ಹೇಳಬೇಡಿರಿ. ನಿಮಗೆ ಪಾಂಡವ ರಲ್ಲಿ ಪಕ್ಷಪಾತವಿದೆ. ಮರುಳಾಟದಿಂದ ಆ ಕುನ್ನಿಗಳನ್ನು ಗೌರವಿಸಿ ದೊಡ್ಡವರನ್ನಾಗಿ ಮಾಡುವಿರಿ. ಇದು ನಿಮಗೆ ಸ್ವಭಾವ. ಆದರೂ ಚಿಂತೆಯಿಲ್ಲ. ಈಗ ನಾನು ವಿರಾಟರಾಯನ ಗೋಗಣವನ್ನು ಸೆರೆ ಹಿಡಿಯುವೆನು. ಪಾಂಡವರು ಆ ಪಟ್ಟಣದಲ್ಲಿಯೇ ಇದ್ದರೆ, ಅವರು ಧರ್ಮದಮೇಲೆ ಮರ್ಯಾದೆಗಳನ್ನು ಬಲ್ಲವರಾದ್ದರಿಂದ ತಮಗೆ ಆಶ್ರ ಯವನ್ನು ಕೊಟ್ಟಿರುವ ವಿರಾಟರಾಯನನ್ನು ರಕ್ಷಿಸಬೇಕಲ್ಲವೆ! ಇದಕ್ಕಾಗಿ ಗೋವುಗಳನ್ನು ಬಿಡಿಸಿಕೊಳ್ಳಬೇಕೆಂದು ಯುದ್ಧಕ್ಕೆ

ಬಂದು ನಿಲ್ಲುವರು. ಆಗ ನಾವು ಅವರ ಗುರುತನ್ನು ಕಂಡು ಹಿಡಿಯ ಬಹುದು. ಆಮೇಲೆ ತಿರುಗಿ ಹದಿಮೂರು ವರುಷ ವನವಾಸಕ್ಕೆ ತಾಂಬೂಲವನ್ನು ಕೊಟ್ಟು ಕಳುಹಿಸೋಣ.

ಕರ್ಣ:—ರಾಯನ ಮಾತು ಯುಕ್ತಿಯುಕ್ತವಾಗಿದೆ. ಇದಾಗ ಬಹುದಲ್ಲವೆ? ಇದರಲ್ಲಿ ಯಾವ ತಪ್ಪೂ ಕಾಣಬರುವುದಿಲ್ಲ. ಇದು ನಮ್ಮೆಲ್ಲರಿಗೂ ಸಮ್ಮತವಾದ ಮಾರ್ಗ. ಶತ್ರುಗಳ ಕಾಪಟ್ಯವನ್ನು ತಿಳಿಯುವುದಕ್ಕೆ ಇದರ ಹೊರತು ಬೇರೆ ಉಪಾಯವಿಲ್ಲ. ಹಿರಿಯರು ಹೇಳಿದಂತೆ ಆ ದೇಶವು ಇತರ ದೇಶಗಳಿಗಿಂತ ಸುಭಿಕ್ಷವಾಗಿದೆ. ಆದುದರಿಂದ ಪಾಂಡವರು ಅಲ್ಲಿಯೇ ಇರುವರೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ.

ಸುಶರ್ಮ:—ಗುರುಗಳಿಗೆ ಸಮ್ಮತವಾಗಿದ್ದರೆ, ಕೃಪಾಚಾರ್ಯರು ಅಸಮಾಧಾನಗೊಳ್ಳದೆ ಇದ್ದರೆ, ಭೀಷ್ಮಾಚಾರ್ಯರ ಮನಸ್ಸಿನಲ್ಲಿ ಅಧೈರ್ಯವು ತೋರದೆ ಇದ್ದರೆ, ಅಶ್ವತ್ಥಾಮರು ಒಪ್ಪಿದರೆ, ಶಕುನಿಯು ಆಗಬಹುದೆಂದು ಹೇಳಿದರೆ, ರಾಜಸಹೋದರರು ಇದು ಸರಿಯೆಂದು ಸಮ್ಮತಿಸಿದರೆ, ನಮ್ಮ ಮಹಾರಾಜರ ಆಲೋಚನೆಯೇ ಬಹುಚೆನ್ನಾಗಿ ತೋರುತ್ತದೆ.

ಭೀಷ್ಮ:—ಸುಶರ್ಮನ ಮಾತು ಒಪ್ಪತಕ್ಕದ್ದಾಗಿದೆ. ಇದರಲ್ಲಿ ಯಾವ ದೋಷವೂ ಇಲ್ಲ. ಪಾಂಡವರ ಸ್ಥಿತಿ ತಿಳಿಯಬೇಕಾದರೆ ಇದೇ ಉತ್ತಮವಾದ ಮಾರ್ಗ. ನೀತಿಯನ್ನು ಬಲ್ಲವರೆಲ್ಲರೂ ಇದನ್ನು ಒಪ್ಪುತ್ತಾರೆ. ಅಜ್ಞಾತವಾಸದ ಅವಧಿಯು ಮುಗಿಯುತ್ತಾ ಬಂತು. ಇನ್ನು ಅಯ್ದಾರು ದಿನಗಳು ಮಾತ್ರ ಉಳಿದಿದೆ. ಅದು ಕಳೆದುಹೋದರೆ ಈ ಭೂಮಿಗೆ ಪಾಂಡವರು ಹಕ್ಕುದಾರರಾಗುವರು.

ಇತರ ನಾಯಕರು:—ಆರ್ಯರೆ! ತಾವು ಲೆಕ್ಕಮಾಡುವುದರಲ್ಲಿ ಸ್ವಲ್ಪ ಹೆಚ್ಚುಕಡಿಮೆಯಾಗಿರಬಹುದೆಂದು ಕಾಣುತ್ತದೆ. ನಿದಾ

ನವಾಗಿ ಆಲೋಚಿಸಿರಿ. ರಾಜಕಾರ್ಯವನ್ನು ನಡಿಸಬೇಕಾದರೆ ದುಡು ಕುತನಮಾಡಸಲ್ಲದು. ಯಾವ ವಿಧದಿಂದಲಾದರೂ ಪಾಂಡವರ ಇರ ವನ್ನು ತಿಳಿಯಬೇಕು. ಅವಧಿ ಮುಗಿಯುವುದರೊಳಗೆ ಅವರನ್ನು ಕಂಡುಹಿಡಿದರೆ ಈ ಸಮಸ್ತಭೂಮಿಯೂ ಕುರುಪತಿಗೇಸೇ ಸೇರುವುದು.

ಕೌರವ:—ಹಿರಿಯರು, ಮುಖ್ಯವಾಗಿ ಭೀಷ್ಮ ದ್ರೋಣರು ನಮ್ಮ ಕರ್ಣನ ಸಲಹೆಯನ್ನು ಒಪ್ಪಿದಂತೆ ಆಯಿತು. ಆದುದರಿಂದ ಮುಂ ದಿನ ಕಾರ್ಯವನ್ನು ನಡೆಸಲು ಪ್ರಯತ್ನಿಸಬಹುದು. (ಸೇನಾಪತಿಯ ನ್ನು ನೋಡಿ,) ಎಲೈ ದಳಪತಿಯೆ! ನಮ್ಮ ಸೈನ್ಯವೆಲ್ಲ ಮತ್ಸ್ಯ ರಾಜ್ಯದ ಮೇಲೆ ದಂಡೆತ್ತಿ ಹೊರಡಲಿ. ಎಲ್ಲರೂ ಯುದ್ಧಕ್ಕೆ ಸನ್ನದ್ಧರಾಗ ಬೇಕೆಂದು ಡಂಗುರವನ್ನು ಹೊಯ್ಸಿರಿ. ಅಕ್ಷೌಹಿಣಿನಾಯಕರ ನ್ನೆಲ್ಲ ಸೇರಿಸಿರಿ. ಆಹಾರ ಸಾಮಗ್ರಿಗಳು ತುಂಬಿರುವ ಕೊಟ್ಟಿಗೆ ಬಂಡಿಗಳು ಸಿದ್ಧವಾಗಲಿ. ಎಲ್ಲ ಕಡೆಗಳಲ್ಲಿಯೂ ಬಾವುಟಗಳನ್ನೆತ್ತಿ ಸಿರಿ. ಮಾಮೂಲಿನಂತೆ ನಾಡು ಬಿಟ್ಟಿಗಳು ಅಲ್ಲಲ್ಲಿ ಬಂದು ಕಾದಿರು ವಂತೆ ಅಪ್ಪಣೆ ಕೊಟ್ಟು ಕಳುಹಿರಿ. ಇಂದಿನ ಸಭೆ ತೀರಿತು.

ಅನಂತರ ರಾಜನ ಆಜ್ಞೆಯನ್ನು ಪಡೆದು ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋದರು.

ಕೂಡಲೆ ಪಟ್ಟಣದ ಹೊರಗಡೆ ವಿಶಾಲವಾದ ಡೇರೆಗಳು ಹೊ ಡೆಸಲ್ಪಟ್ಟವು. ರಾಜಾಜ್ಞೆಯಂತೆ ಸಕಲ ಸನ್ನಾಹಗಳೂ ಮಾಡಲ್ಪ ಟ್ಟವು. ರಾಜನು ಸುಮುಹೂರ್ತದಲ್ಲಿ ಸುಶರ್ಮನೇ ಮೊದಲಾದ ಸೇನಾಪತಿಗಳೊಡನೆ ಪ್ರಯಾಣ ಹೊರಟನು. ಭೀಷ್ಮ, ದ್ರೋಣ, ಕರ್ಣ, ಕೃಪ, ಅಶ್ವತ್ಥಾಮ, ಮುಂತಾದ ಮಹಾ ಪ್ರಧಾನರು ಚತು ರಂಗಬಲದೊಡನೆ ಗುಂಪು ಗುಂಪಾಗಿ ಹೊರಟರು. ಸೈನ್ಯವೆಲ್ಲ ಒಂ ದುಕಡೆ ಸೇರಿತು. ಮುಂದಿನ ಕಾರ್ಯನಿರ್ವಾಹ ಕ್ರಮವು ಗೊತ್ತು ಮಾಡಲ್ಪಟ್ಟಿತು. ಧೈರ್ಯಶಾಲಿಗಳಾಗಿಯೂ ಛಲಗಾರರಾಗಿಯೂ

ಇರುವವರನ್ನು ಪರೀಕ್ಷಿಸಿ, ಗೋವುಗಳನ್ನು ಹಿಡಿದುಕೊಂಡು ಬನ್ನಿ ರೆಂದು ಮೊದಲೇ ಶತ್ರುರಾಜ್ಯಕ್ಕೆ ಕಳುಹಿಸಿದನು. ಸೇನೆಯು ನೆಲದ ಅಗಲಕ್ಕೂ ಸೇರಿತು. ಅಕ್ಷೌಹಿಣಿಯ ಬಲವೆಲ್ಲ ಗುಂಪು ಕೂಡಿತು. ಮಾವಟಿಗರು ಅಂಕುಶಗಳನ್ನು ಹಿಡಿದುಕೊಂಡು ಆನೆಗಳನ್ನು ಯುದ್ಧಕ್ಕೆ ಸಿದ್ಧಪಡಿಸಿದರು. ಕುದುರೆಗಳಿಗೆ ಜೀನುಗಳನ್ನು ಹಾಕಿದರು. ರಥಗಳಿಗೆ ವೇಗವಾಗಿ ಓಡುವ ಕುದುರೆಗಳನ್ನು ತಂದು ಕಟ್ಟಿದರು. ಕಾಲಾಳೆಲ್ಲವೂ ಬಗೆಬಗೆಯ ಆಯುಧಗಳನ್ನು ಹಿಡಿದುಕೊಂಡು ಹೊರಟಿತು. ಅರಸನ ಎದುರಿಗೆ ರಾಜಚಿಹ್ನೆಗಳಾದ ಛತ್ರಿ, ಸೂರೇಪಾನ, ಭಲ್ಯ, ಮುಂತಾದ ಬಿರುದುಗಳನ್ನು ಹಿಡಿದುಕೊಂಡು ಹೊರಟರು. ಆಯುಧಗಳ ಸಾಲು ಆಕಾಶವನ್ನು ಮುತ್ತಿತು. ಸೈನ್ಯದ ಭಾರಕ್ಕೆ ಭೂಮಿ ತಗ್ಗಿತು. ಸುವಾಸಿನಿಯರು ವೀರರಿಗೆಲ್ಲ ಆರತಿಗಳನ್ನೆತ್ತಿದರು. ಉಪ್ಪಾರತಿಗಳನ್ನು ಚೆಲ್ಲಿದರು. ಸೈನ್ಯದ ಮಧ್ಯಭಾಗದಲ್ಲಿ ಶ್ರೇಷ್ಠವಾದ ರಥದ ಮೇಲೆ ಕುರುರಾಯನು ಕುಳಿತನು. ಆಗ ಭಟ್ಟರು ಅವನ ಬಿರುದಾವಳಿಗಳನ್ನು ಹೊಗಳಿದರು. ಕೈವಾರಿಗಳು ಜಯ ಜಯಧ್ವನಿ ಮಾಡಿದರು. ಭೇರಿ, ಕನಕತಮಟೆ ಮೊದಲಾದ ವಾದ್ಯಗಳು ಮೊಳಗಿದುವು. ಎಲ್ಲರೂ ಬಹು ಸಂಭ್ರಮದಿಂದ ಜೈತ್ರಯಾತ್ರೆ ಹೊರಟರು. ಮುಂದಿನ ಫಲವು ಹೇಗಾಗುವುದೆಂಬುದನ್ನು ಸೂಚಿಸತಕ್ಕ ಕೆಲವು ಶಕುನಗಳಾದವು. ಯಾವುವೆಂದರೆ,

ಆಕಾಶದಲ್ಲಿ ಹೊಗೆ ಯೆದ್ದಿತು. ಭೂಕಂಪ ವುಂಟಾಯಿತು, ಸೂರ್ಯನು ಗುಡಿ ಕಟ್ಟಿದನು, ನಕ್ಷತ್ರಗಳುದುರಿದುವು. ದಿಕ್ಕು ದಿಕ್ಕಿನಲ್ಲಿಯೂ ಧೂಮಕೇತುಗಳು ಕಾಣಿಸಿಕೊಂಡವು. ಗೂಬೆಗಳು ಕೂಗಿದವು. ನರಿಗಳು ಗೋಳಿಟ್ಟವು. ಇಂತಹ ಉತ್ಪಾತಗಳಾದರೂ ರಾಜನು ಲಕ್ಷ್ಯ ಮಾಡಲಿಲ್ಲ. 'ಈ ಶಕುನಗಳು ನಮ್ಮನ್ನು ಏನು ಮಾಡುವುವು? ಮುಂದಕ್ಕೆ ಹೊರಡಿರಿ.' ಎಂದು ದೊರೆ ಅಪ್ಪಣೆ ಮಾಡಿದನು.

ಎಲ್ಲರೂ ಸಂಭ್ರಮದಿಂದ ಹೊರಟರು. ಪಟ್ಟಾಕತ್ತಿಗಳು, ಲಾಳ ಮುಂಡಿಗೆ, ಚಾಮರ, ಸೂರೇಪಾನ, ಸಬಳ (ಹಾರೆ), ಶ್ವೇತಛತ್ರಿಗಳೂ, ಝಲ್ಲರಿಗಳೂ, ಭೇರಿ ಡೊಂಕಣಿ ಮುಂತಾದುವುಗಳಿಂದ ಆಕಾಶವು ತುಂಬಿತು. ಸೈನ್ಯದ ಹಿಂದೆ ಪ್ರಸಿದ್ಧರಾದ ನಾಯಕರು, ಮಣಿಯಗಾರರು, ಪರಿಚಾರಕರು, ಕೆಲಸಗಾರರು ಮೊದಲಾದವರು ಗುಂಪು ಕೂಡಿ ನಡೆದರು. ಇವರು ಪಯಣದ ಮೇಲೆ ಪಯಣ ಮಾಡುತ್ತ ಹೋಗುವಾಗ ವಾದ್ಯಗಳ ಅಬ್ಬರದಿಂದ ಸಮುದ್ರದ ತಾಯಿಮಳಲು ಕಾಣುವಹಾಗೆ ನೀರು ಉಕ್ಕಿತು. ಎತ್ತಿದ ಸೂರೇಪಾನ, ನವಿಲುಕಣ್ಣಿನವಲಯ, ಗದೆ, ಚಾಮರ, ಕುಂತ, ಸಬಳ ಮುಂತಾದುವು ಗಗನವನ್ನು ಮುತ್ತಿದುವು. ಗಾಳಿ ಬೀಸಲಿಕ್ಕೆ ಸ್ಥಳವೇ ಇಲ್ಲ. ಸೂರ್ಯನ ಬೆಳಕಂತೂ ಕಾಣಲೇ ಬಾರದು. ಇಷ್ಟು ದೊಡ್ಡ ಸೇನೆಯನ್ನು ತಡೆಯುವುದು ಕಷ್ಟವೆಂಬಂತೆ ಕುರುಸೈನ್ಯವು ಹೊರಟಿತು. ಮೊಳಗುವ ವಾದ್ಯರಭಸದಿಂದ ನೆಲವು ಅದುರಿತು. ಆದಿಶೇಷನ ಹೆಡೆಗಳು ಕುಗ್ಗಿದವು. ಅಷ್ಟದಿಗ್ಗಜಗಳು ತಮ್ಮ ತಲೆಗಳನ್ನು ಕೊಡಹಿದವು. ಸಮುದ್ರವು ರತ್ನಗಳನ್ನು ಕಾರಿತು. ಸೈನ್ಯದ ಕಾಲುಗಳಿಂದ ಎದ್ದ ಧೂಳಿಯು ಸೂರ್ಯಮಂಡಲವನ್ನು ಮುಚ್ಚಿತು. ಸೇನೆಯ ಪರಿಮಿತಿಯೇ ಗೊತ್ತಿಲ್ಲ. ಇದು ಪ್ರಳಯಕಾಲದ ಸಮುದ್ರ ಪ್ರವಾಹವೋ ಏನೋ. ಈ ಸೈನ್ಯದ ಎದುರಿಗೆ ಇಂದ್ರಾದಿ ದಿಕ್ಪಾಲಕರು ಕೂಡ ನಿಲ್ಲಲಾರರು. ಬಡ ಅರಸುಗಳಿಗೆ ಈ ಸೈನ್ಯವನ್ನು ಎದುರಿಸುವ ಶಕ್ತಿಯುಂಟೆ? ಎಲ್ಲಿಯ ಸಾಮರ್ಥ್ಯ! ಎಲ್ಲಿಯ ಸೈನ್ಯ! ಏನು ಗುಂಪು! ಎಂತಹ ಕೋಲಾಹಲ ಧ್ವನಿ! ಎಂದು ನೋಡಿದವರು ಹೊಗಳುತ್ತಿದ್ದರು.

ಕೌರವೇಂದ್ರನು ತನ್ನ ಸೈನ್ಯವನ್ನು ಎರಡು ಭಾಗವಾಗಿ ವಿಂಗಡಿಸಿದನು. ಅವುಗಳಲ್ಲಿ ಒಂದನ್ನು ತ್ರಿಗರ್ತರಾಜನಾದ ಸುಶರ್ಮನ

12

ವಶಕ್ಕೆ ಕೊಟ್ಟು, ಅಯ್ಯಾ! ನೀನು ದಕ್ಷಿಣಕಡೆಯಿಂದ ಹೋಗಿ ವಿರಾಟನ ಗೋವುಗಳನ್ನು ಸೆರೆ ಹಿಡಿ. ನಾವು ಉತ್ತರ ದಿಕ್ಕಿನಿಂದ ಬಂದು ಗೋಗಣವನ್ನು ಹಿಡಿಯುವೆವು, ಎಂದು ಹೇಳಿ ಅಪ್ಪಣೆ ಕೊಟ್ಟನು. ಆಗ ಸುಶರ್ಮನು ಹದಿನಾರು ಸಾವಿರ ಮಹಾರಥರನ್ನು ಕೂಡಿಕೊಂಡು, ದಕ್ಷಿಣ ದಿಕ್ಕಿಗೆ ದಂಡೆತ್ತಿ ಹೊರಟನು. ಅವನು ಕೃಷ್ಣಪಕ್ಷದ ಅಷ್ಟಮಿಯ ದಿವಸ ವಿರಾಟರಾಯನ ಗೋವುಗಳನ್ನು ಸಂಧಿಸಿ ಸೆರೆ ಹಿಡಿದನು. ಗೋಪಾಲಕರು ಬಂದು ಎದುರಿಗೆ ನಿಲ್ಲಲು ಅವರನ್ನು ಹೊಡೆದು ಕೆಡಹಿದನು. ದನಗಳು ಹೊಸ ಮುಖಗಳನ್ನು ನೋಡಿ ಬೆದರಿ, ಹಿಂಡುಗಳು ಒಡೆದುಹೋಗಿ 'ಅಂಭೆ!' ಎಂದು ಒರಲುತ್ತಾ ದಿಕ್ಕುದಿಕ್ಕಿಗೆ ಓಡುತ್ತಿದ್ದವು. ಆ ದನಗಳ ಸುತ್ತಲೂ ಸೈನ್ಯವನ್ನು ಕೋಟೆಯಂತೆ ನಿಲ್ಲಿಸಿ ದನಗಳ ಹಿಂಡನ್ನು ಸೆರೆ ಹಿಡಿದರು. ಗೋಪಾಲಕರು ಬಂದು ನಿಲ್ಲಲು ಅವರನ್ನು ತುಂಡು ತುಂಡಾಗಿ ಕಡಿದು ಹಾಕಿದರು. ಮೇಲೆ ಮೇಲೆ ಹೆಚ್ಚು ಹೆಚ್ಚಾಗಿ ಸೈನ್ಯವು ಬರುತ್ತಲೇ ಇತ್ತು. ಅದನ್ನು ನೋಡಿ, ಉಳಿದ ಗೋಪಾಲಕರು 'ಇವರೊಂದಿಗೆ ಕಾದುವುದಕ್ಕೆ ನಮ್ಮಿಂದಾಗದು. ಏನು ಮಾಡೋಣ. ಅರಸನ ಬಳಿಗೆ ಹೋಗಿ ಮೊರೆಯಿಡುವುದೇ ವಾಸಿ,' ಎಂದು ಯೋಚಿಸಿದರು. ತಮ್ಮ ಕಂಬಳಿ, ಕೊಂಬು, ಕಲ್ಲಿಗಳನ್ನು ಅಲ್ಲಲ್ಲಿಯೇ ಬಿಸುಟು, ಗಾಯದಿಂದ ನೊಂದು ಕೊರಳಲ್ಲಿ ಪ್ರಾಣವನ್ನು ಬಿಗಿ ಹಿಡಿದುಕೊಂಡು ದಗೆಯಿಂದ ನಾಲಿಗೆಯು ಒಣಗಿ ಹೋಗುತ್ತಿರಲು, ರಣಭೀತಿಯಿಂದ ಕಂದಿದ ಮುಖ, ತೊದಲಿನ ನುಡಿ, ಮರಣ ಕಂಪನದ ಕೈಸನ್ನೆಗಳು, ಇವುಗಳಿಂದ ಹೆದರುತ್ತ ಓಡಿ ಹೋಗಿ ಪಟ್ಟಣವನ್ನು ಸೇರಿದರು. ಅವರ ಮೈಯಲ್ಲಿ ರಕ್ತವು ಸುರಿಯುತ್ತಿತ್ತು. ಮಾತನಾಡಲಿಕ್ಕೆ ಉಸಿರಿಲ್ಲ, ಹಾಗೂ ಹೀಗೂ ಕಷ್ಟದಿಂದ ವಿರಾಟರಾಯನ ಸಭೆಗೆ ಬಂದು ಸೇರಿದರು. ಅವರಲ್ಲಿ ಕೆಲವರು ಭಯದಿಂದ ದಾರಿಯಲ್ಲಿಯೇ ಬಿದ್ದು

ಮಡಿದರು. ಮತ್ತೆ ಕೆಲವರು ಪ್ರೈಮರೆತರು. ಉಳಿದವರು ಧೈರ್ಯ ತಂದುಕೊಂಡು, ಅರಸನ ಬಳಿಗೆ ಹೋಗಿ ಕೈಮುಗಿದು, ‘‘ಪ್ರಭುವೆ! ಯಾವುದೊ ದೊಡ್ಡ ಸೈನ್ಯ ಬಂದಿದೆ. ನಮ್ಮ ಕಡೆಯ ಅರವತ್ತು ಸಾವಿರ ಪಶುಗಳನ್ನೂ ಸೆರೆ ಹಿಡಿದುಕೊಂಡಿರು. ನಮ್ಮಲ್ಲಿ ಬಹುಜನ ಸತ್ತುಹೋದರು. ನಮಗೆ ದಿಕ್ಕೇ ತೋರದು. ಏನು ಮಾಡೋಣ’’ ಎಂದು ಬಿನ್ನವಿಸಿದರು.

ವಿರಾಟರಾಯನು ಈ ಮಾತನ್ನು ಕೇಳಿ, ನಿಟ್ಟುಸಿರನ್ನು ಬಿಟ್ಟು ಚಿಂತಿಸುತ್ತಾ, ‘ಅಹಾ! ಪ್ರಮಾದ ಬಂತು. ಈಗ ಏನು ಮಾಡಲಿ? ನಮ್ಮ ಕೀಚಕನಾದರೂ ಇದ್ದರೆ ಅವನು ಶತ್ರುಸೈನ್ಯವನ್ನು ಮೊತ್ತಿ ಓಡಿಸುತ್ತಿದ್ದನು. ಅಯ್ಯೋ! ನಮ್ಮ ದುರ್ದೈವದಿಂದ ಅವನೂ ಮೊನ್ನೆ ಹೋಗಿಬಿಟ್ಟನಲ್ಲಾ! ಮುಂದೇನುಗತಿ!’ಎಂದು ಹಲುಬುತ್ತಿದ್ದನು. ಆಗ ಸೈನಿಕರು ‘‘ಮಹಾಪ್ರಭುವೇ! ಇದಕ್ಕೆ ಯೋಚನೆಏಕೆ! ನಮಗೆವೀಳೆಯವನ್ನು ಕೊಡಿರಿ. ಈಗಲೇ ಹೋಗಿ ವೈರಿಗಳನ್ನು ಕೊಂದು ಗೋಗಣವನ್ನು ಬಿಡಿಸಿಕೊಂಡು ಬರುವೆವು’’ ಎಂದು ಕೂಗಿಕೊಂಡರು. ಯುದ್ಧಕ್ಕೆ ನಾನು ಮುಂದು ತಾನು ಮುಂದು ಎಂದು ಸಾಮಂತ ನರಪತಿಗಳು ಅರಸನ ಅಪ್ಪಣೆಯನ್ನು ಬೇಡುತ್ತಾ ನಿರೀಕ್ಷಿಸುತ್ತಿದ್ದರು. ಆಗ ಸೇನಾಪತಿಗಳು ಆಣೆ ಭಾಷೆಗಳನ್ನು ಇಟ್ಟುಕೊಳ್ಳುತ್ತಾ, ತಮ್ಮ ತಮ್ಮ ಶಕ್ತಿಸಾಹಸಗಳನ್ನು ಹೇಳಿಕೊಳ್ಳುತ್ತಾ, ಆಯುಧಗಳನ್ನು ತೆಗೆದುಕೊಂಡು ಹೊರಟರು. ಆನೆಗಳೂ, ಕುದುರೆಗಳೂ, ರಥಗಳೂ, ಕಾಲ್ಬಲವೂ ಯುದ್ಧಕ್ಕೆ ಸಿದ್ಧವಾಗಿ ಹೊರಟವು.

ಆಗ ಪಾಂಡವರು ಒಂದು ಕಡೆಯಲ್ಲಿ ರಹಸ್ಯವಾಗಿ ಸೇರಿ, ಮಂತ್ರಾಲೋಚನೆ ಮಾಡಿದರು. ಧರ್ಮರಾಯನು ತಮ್ಮಂದಿರನ್ನು ನೋಡಿ, ಇಂತೆಂದನು.—‘ಇಂದಿನ ಸಮಾಚಾರವನ್ನು ಕೇಳಿದಿರಾ? ದನಗಳನ್ನು ಸೆರೆ ಹಿಡಿದವರು ಕೌರವನ ಕಡೆಯವರು. ಇವರು ನಮ್ಮ

ನ್ನು ಪರೀಕ್ಷಿಸುವುದಕ್ಕೋಸ್ಕರವೇ ಬಂದು ಇದ್ದಾರೆ. ಅವಧಿ ತೀರುವು ದಕ್ಕೆ ಮುಂಚಿತವಾಗಿಯೇ ನಮ್ಮನ್ನು ಕಂಡು ಹಿಡಿದು, ಪುನಃ ನಮಗೆ ವನವಾಸವನ್ನು ಅನುಗ್ರಹಿಸಬೇಕೆಂದು ದಯಮಾಡಿಸಿದರು. ಆಗಲಿ. ಸಂತೋಷವಾಯಿದೆ ಮುಗಿಯಲಿ, ಅಥವಾ ಮುಗಿಯದೆ ಇರಲಿ. ದನ ಗಳ ಸೆರೆ ಹಿಡಿದುದನ್ನು ಕಿವಿಯಿಂದ ಕೇಳಿದರೆ ಮಹಾ ಪಾತಕವೆನಿಸು ವುದು. ಇಂತಹ ಸಂದರ್ಭದಲ್ಲಿ ಜಲಪಾನಮಾಡುವುದು ಕೂಡ ತಪ್ಪು. ನಾನಂತು ಇದನ್ನು ಕೇಳಿಸಹಿಸಿಕೊಂಡಿರಲಾರೆನು. ಇವರ ಸಂಗಡಲೇ ಹೋಗಿ ದನಗಳ ಮಂದೆಯನ್ನು ಬಿಡಿಸಿಕೊಂಡು ಬರುವೆನು' ಎಂದನು. ಈ ಮಾತನ್ನು ಕೇಳಿ ಅವನ ತಮ್ಮಂದಿರು 'ಆರ್ಯನೆ! ನಿಮ್ಮ ಕಷ್ಟವು ನಮ್ಮದಲ್ಲವೇ? ನಾವೂ ನಿಮ್ಮ ಸಂಗಡ ಬಂದು, ಯುದ್ಧದ ವಿಚಿತ್ರ ಗಳನ್ನು ನೋಡಿಕೊಂಡು ಬರುತ್ತೇವೆ. ನಮ್ಮ ಗುರುತು ಯಾರಿಗೂ ಗೊತ್ತಾಗುವ ಹಾಗಿಲ್ಲ. ಹೊರಡೋಣ? ನಡೆಯಿರಿ' ಎಂದರು. ಶಿಖಂಡಿ ವೇಷವನ್ನು ಧರಿಸಿದ್ದ ಅರ್ಜುನನೂ ಸೈರಂಧ್ರಿಯೂ ಮಾತ್ರ ಅಂತಃ ಪುರದಲ್ಲಿಯೇ ನಿಂತರು. ಉಳಿದ ನಾಲ್ವರು ವಿರಾಟರಾಯನ ಸಂಗ ಡಲೇಹೊರಟರು.

ರಾಯನ ಒಡಹುಟ್ಟಿದವರೂ, ಸಾವಿರಾರುಮಂದಿ ರಾಜಪುತ್ರ ರೂ, ತಮ್ಮ ತಮ್ಮ ಕೊರಳುಗಳಲ್ಲಿ ಪದಕಗಳನ್ನೂ, ಕಾಲಿನಲ್ಲಿ ಬಿರು ದುಬಳೆಗಳನ್ನೂ, ತಲೆಗಳಲ್ಲಿ ಕಿರೀಟಗಳನ್ನೂ, ಹಲವು ರತ್ನ ಖಚಿತವಾದ ಆಭರಣಗಳನ್ನೂ ಧರಿಸಿದರು. ಪರಿಮಳದ ಕಸ್ತೂರಿಯ ತಿಲಕವನ್ನು ಹಣೆಯಲ್ಲಿಟ್ಟು, ಶ್ರೇಷ್ಠವಾದ ಗಂಧವನ್ನು ಮೈಗೆ ಅನುಲೇಪನಮಾಡಿ ಕೊಂಡು, ಬಲವಾದ ತಲೆಕೂದಲುಗಳನ್ನು ಬಿಗಿದು ಕಟ್ಟಿ, ಕೈಯಲ್ಲಿ ಕತ್ತಿಗಳನ್ನು ಹಿಡಿದು ತಮ್ಮತಮ್ಮ ಚತುರಂಗಬಲದೊಡನೆ ಯುದ್ಧಕ್ಕೆ ಹೊರಟರು. ವಾದ್ಯಗಳ ಝೇಂಕಾರವು ಕಿವಿಗಳನ್ನು ಕಿವುಡುಮಾಡುತ್ತಿತ್ತು. ಸೈನ್ಯದಪಾದಘಾತದಿಂದ ಕೆಂಧೂಳಿ ಯೆದ್ದು ಆಕಾಶವನ್ನು ಮುತ್ತಿತು.

ವಿರಾಟರಾಯನ ಸೈನ್ಯವು ಯುದ್ಧಕ್ಕೆ ಬಂದುದನ್ನು ನೋಡಿ ಸುಶ
ರ್ಮನಕಡೆಯವರು ದನಗಳ ಮಂದೆಯನ್ನು ಹಿಂದಕ್ಕೆ ಬಿಟ್ಟುಕೊಂಡು
ಯುದ್ಧಕ್ಕೆ ಸಿದ್ಧರಾದರು. ವಾದ್ಯಗಳ ಅಬ್ಬರವು ದಿಕ್ಕುಗಳ ಮೂಲೆ
ಗಳನ್ನೆಲ್ಲಾ ಬಿರಿಯುವಂತೆ ಮಾಡಿತು. ವಿರಾಟನ ಬಲವು ಶತ್ರು ಸೈನ್ಯದ
ಮೇಲೆ ಬಿದ್ದು ಕೊಲ್ಲುತ್ತ ಬಂದಿತು.

ಆಗ ಕುರುಸೈನ್ಯವು "ಛೆ! ಛೆ! ವಿರಾಟರಾಯನ ಚುಕ್ಕಿ
ಗಳಿರಾ! ಏಕೆ ಆತುರಪಟ್ಟು ಸಾಯುತ್ತೀರಿ? ಸುಮ್ಮನೆ ಹಿಂದಕ್ಕೆ
ಹೋಗಿ ಜೀವವನ್ನು ಉಳಿಸಿಕೊಳ್ಳಿರಿ. ಹೆಡತಲೆಯ ಹಾವೆನಿಸಿದ್ದ
ಕೀಚಕರೆಲ್ಲರೂ ಮಡಿದುಹೋದರು. ನಿಮ್ಮಲ್ಲಿ ಇನ್ನಾವ ಶೂರ
ರಿದ್ದಾರೆ? ವಿರಾಟರಾಯನು ದಂಡೆತ್ತಿಕೊಂಡು ಬಂದು, ಕಡೆಗೆ ನರಿಯ
ಹಲ್ಲುಕಿರಿಯುವ ಹಾಗೆ ಕೆಟ್ಟನು" ಎಂದು ಕೈಹೊಯ್ದು ನಗು
ತ್ತಿತ್ತು. ಕುದುರೆಗಳು ನುಗ್ಗಿದವು. ಆನೆಗಳು ತುಳಿಯುತ್ತಿದ್ದವು.
ರಥದ ಕುದುರೆಗಳು ವೇಗವಾಗಿ ಓಡುತ್ತಿದ್ದವು. ಕಾಲಾಳುಗಳು
ಆಯುಧಗಳನ್ನು ಹಿಡಿದು ಕಾದಿದರು. ಇದರಿಂದ ಶತ್ರು ಸೈನ್ಯವೆಲ್ಲ
ಕದಡಿಹೋಯಿತು. ಅವರ ಮೈಯಲ್ಲಿ ಆಯುಧಗಳು ಹೊಕ್ಕು
ಮೂಳೆಗಳನ್ನು ಮುರಿದು ಬಿಟ್ಟವು. ನೆತ್ತಿಯು ಒಡೆದುಹೋಗಿ ಮಿದು
ಳಿನಿಂದ ರಕ್ತವು ಸುರಿಯುತ್ತಿತ್ತು. ಉಭಯಸೈನ್ಯಗಳಲ್ಲಿಯೂ ಆನೆಗಳ
ಗುಂಪು ಮಡಿದುಬೀಳುತ್ತಿತ್ತು. ಕುದುರೆಗಳ ಸೈನ್ಯವು ನೂರಾರು
ತುಂಡುಗಳಾಗಿ ಉರುಳಿದವು. ಕಾಲಾಳುಗಳು ಮುಂದೆ ಮುಂದೆ
ನುಗ್ಗಿ ಪೆಟ್ಟುತಿಂದು ಮಡಿದರು. ರಥಗಳು ತುಂಡು ತುಂಡಾಗಿ ಉರು
ಳಿದವು. ಇವುಗಳಿಗೆ ಕಟ್ಟಿದ್ದ ಕುದುರೆಗಳ ಮಿದುಳಿನ ಜೊಂಡಿನಿಂದ
ರಣಭೂಮಿಯು ರಕ್ತದ ಗುಂಡಿಯಾಯಿತು. ಶಾಕಿನೀ ಡಾಕಿನೀ
ಗಣಕ್ಕೆ ಆನಂದವಾಯಿತು. ಮುಂಭಾಗದ ಸೈನ್ಯವೆಲ್ಲ ಮುರಿದು
ಹೋದುದರಿಂದ ದೊರೆಗಳಮೇಲೆ ಬಿದ್ದು ಖಾಡಾಖಾಡಿಯಿಂದ ಯುದ್ಧ

ಮಾಡಲಿಕ್ಕೆ ತೊಡಗಿದರು. ವಿರಾಟರಾಯನ ಕಡೆ ಏಳುಸಾವಿರ ಮಂದಿ ಮಹಾರಥರು ತಮ್ಮ ಸೈನ್ಯ ಸಮೇತರಾಗಿ ಸುಶರ್ಮನ ಸೈನಿಕರ ಮೇಲೆ ರಥಗಳನ್ನು ನುಗ್ಗಿಸಿದರು. ಆಗಲಾ ಸೈನ್ಯವು ಚೆದರಿ, ದಿಕ್ಕು ಪಾಲಾಗಿ ಓಡಿತು. ಸುಶರ್ಮನು ತನ್ನ ಬಲವು ಕಂಗೆಟ್ಟು ಓಡಿಹೋಗುತ್ತಿರುವುದನ್ನು ನೋಡಿದನು. ಅವನಿಗೆ ಬಲುಕೋಪ ಬಂತು. ಆಗ ಅವನು ವಿರಾಟರಾಯನ ರಥವನ್ನು ತರುಬಿ, ಅವನಮೇಲೆ ಬಾಣದ ಮಳೆಯನ್ನು ಸುರಿಸಿದನು. ಬಳಿಕ, 'ಎಲೈ ವಿರಾಟರಾಯನೆ! ನೀನೊಬ್ಬ ಬಡಮಾಂಡಲಿಕ. ನಿನಗೆ ಶೌರ್ಯವೆಲ್ಲಿಂದ ಬಂತು? ಸುಮ್ಮನೆ ಏಕೆ ಪ್ರಾಣವನ್ನು ಕಳೆದುಕೊಳ್ಳುವೆ?' ಎಂದು ಬಾಣಗಳನ್ನು ಸುರಿಸಿದನು. ಇಬ್ಬರಲ್ಲಿಯೂ ಬಾಣಗಳು ಮುಗಿದುಹೋದುವು. ಆಗ ಕತ್ತಿಗಳನ್ನು ಹಿಡಿದುಕೊಂಡು ಹೊಯ್ದಾಡಿದರು. ಅದೂ ಮುಗಿಯಿತು. ಆ ಮೇಲೆ ಪರಿಘವನ್ನೂ, ಪಟ್ಟಾಕತ್ತಿಯನ್ನೂ ಹಿಡಿದು ಕಾದಿದರು. ಅದೂ ಸಾಕಾಯಿತು. ಆ ಮೇಲೆ ಮಲ್ಲಯುದ್ಧದಿಂದ ತಿವಿದಾಡಿದರು. ಆಗ ಸುಶರ್ಮನು ವಿರಾಟರಾಯನ ಶೌರ್ಯವನ್ನು ಹೊಗಳುತ್ತ ಸಿಟ್ಟಿನಿಂದ ಗಾಯಹೊಂದಿದರೂ ಬಿಡದೆ ವಿರಾಟರಾಯನನ್ನು ಸೆರೆಹಿಡಿದನು. ಆಗ ಸೈನಿಕರು 'ಎಲಾ! ಮೋಸಬಂತು! ದೊರೆಯು ಶತ್ರುಗಳ ಕೈಗ ಸಿಕ್ಕಿಹೋದನು. ಇಷ್ಟುಮಂದಿ ಸೈನ್ಯವಿದ್ದೂ, ರಾಜನನ್ನು ಹಗೆಯ ಕೈಗೆ ಒಪ್ಪಿಸಿಬಿಟ್ಟೆರಲ್ಲ! ಕೀಚಕನು ಬದುಕಿದ್ದರೆ, ರಾಜನನ್ನು ಸಿಕ್ಕಿಸುತ್ತಲಿದ್ದನೆ!' ಎಂದು ಕಿರಚಿಕೊಂಡರು. ಆಗ ಮತ್ಸ್ಯರಾಯನ ಸಹೋದರರು 'ಇದೇನು ಮಕ್ಕಳಾಟಿಕೆಯೆ? ಯುದ್ಧಕ್ಕೆ ತಾನೇಕೆ ಹೋಗಬೇಕು? ಉಕ್ಕಿದವನ ಹೆಗಲು ಬೆಂದು ಹೋಗದಿರುವುದೆ? ಯಾರೇನು ಮಾಡುವರು?'' ಎನ್ನುತ್ತಿದ್ದರು. ಸೇನೆಯು ಅನಾಯಕವಾಯಿತು.

ಧರ್ಮರಾಯ—(ತಮ್ಮಂದಿರನ್ನು ನೋಡಿ) ಆಹಾ! ಪ್ರಮಾದವು!

ವಿರಾಟರಾಯನಿಗೀಗತಿ ಬಂತಲ್ಲ ! ಈಗ ನಾವು ಸುಮ್ಮನಿರುವುದು ಸರಿಯಲ್ಲ. ಭೀಮಸೇನನೇ! ಬೇಗ ಹೋಗಿ ವಿರಾಟರಾಯನನ್ನು ಬಿಡಿಸಿಕೊಂಡುಬಾ. ಶತ್ರುಸೈನ್ಯಕ್ಕೆ ಜಯವನ್ನುಂಟುಮಾಡಬೇಡ.

ಭೀಮ :—ಅಣ್ಣಾ! ತಮ್ಮ ಅಪ್ಪಣೆಯನ್ನು ಶಿರಸಾವಹಿಸಿದೆನು. ಇಗೋ ನೋಡಿ. ಈ ದೊಡ್ಡ ಆಲದ ಮರವನ್ನು ಮುರಿದು ಇದರಿಂದ ಶತ್ರುವಾದ ಸುಶರ್ಮನ ತಲೆಯನ್ನು ಮೊದಲು ಒಡೆದು ಬಿಡುವೆನು. ಆ ಬಳಿಕ, ಕುರುಸೈನ್ಯವನ್ನೆಲ್ಲ ಅರೆದು ಬಿಡುವೆನು. ಚಿಂತಿಸಬೇಡಿರಿ.

ಧರ್ಮರಾಯ:—ತಮ್ಮಾ ! ಸೈರಿಸು ಸೈರಿಸು. ಈ ಘೋರ ಕೃತ್ಯ ಮಾಡಬೇಡ. ಈ ಮರವನ್ನು ಮುರಿದರೆ ನಮಗೆ ಕೇಡು ಮೂಡದೆ ತಪ್ಪದು. ಇದು ಅಮಾನುಷ ಕೃತ್ಯವಲ್ಲವೇ ! ಭೀಮಸೇನನೇ ಈ ಕೆಲಸ ಮಾಡಿದನೆಂದು ತತ್ಕ್ಷಣವೇ ಕುರುಪತಿಯು ತಿಳಿಯದೆ ಇರುವನೆ ? ಇದರಿಂದ ನಮಗೆಷ್ಟು ತೊಂದರೆಯಾಗುವುದು ನೋಡು. ಸ್ವಲ್ಪ ಸೈರಿಸು. ಸಾಹಸಕೃತ್ಯಕ್ಕೆ ಇದು ಸಮಯವಲ್ಲ.

ಭೀಮ:—ಏಕೆ ಹೀಗೆ ಹೇಳುತ್ತೀರಿ ? ಭಯವೇನು ಬಂದಿದೆ ? ಕುರುರಾಯನಿಗೆ ತಿಳಿದರೆ ತಾನೇ ನಮ್ಮನ್ನೇನು ಮಾಡುವನು? ಅವನನ್ನು ಕೂಡ ಈ ಸೈನ್ಯದೊಂದಿಗೆ ಒರಸಿಬಿಟ್ಟರೆ ನಮಗೆ ಇನ್ನಾರು ಶತ್ರುಗಳಿರುವರು ? ನಾನು ಬೇರೆ ಸುಮ್ಮನಿರುವುದಿಲ್ಲ.

ಧರ್ಮರಾಯ :—ತಮ್ಮಾ ! ಇನ್ನೂ ನಿನಗೆ ಬಾಲಬುದ್ಧಿಯೇ ಇದೆ. ಇಂತಹ ಉಗ್ರ ಕೃತ್ಯವನ್ನು ಚಿಂತಿಸಬೇಡ. ಎಷ್ಟೋ ಕಷ್ಟಪಟ್ಟು ಇಷ್ಟು ಕಾಲವನ್ನೂ ನೂಕಿದೆವು. ಅವಧಿಯು ಮುಗಿದು ಬಂದಿದೆ. ಇಂತಹ ವೇಳೆಯಲ್ಲಿ ನಾವಾಗಿ ನಾವು ಇಂತವರೆಂದು ಶತ್ರುಗಳಿಗೆ ಕಾಣಿಸಿಕೊಂಡರೆ ಇದಕ್ಕಿಂತಲೂ ಹುಚ್ಚುತನವುಂಟೆ ? ಈ ಮಾತು ಸಾಕು. ಹೊತ್ತು ಬಹಳವಾಯಿತು. ಜಾಗ್ರತೆಯಲ್ಲಿ ಯುದ್ಧ ಮಾಡಿ ವಿರಾಟರಾಯನನ್ನು ಬಿಡಿಸು. ಹೋಗು.

ಭೀಮ :—ನಿಜ. ತಮ್ಮ ಮಾತು ಒಪ್ಪಿದೆನು. ಇಗೋ ಹೊರಡುವೆನು.

ಈ ಪ್ರಕಾರ ಹೇಳಿ, ಅಣ್ಣನ ಅಪ್ಪಣೆ ಪಡೆದು ಶತ್ರು ಸೈನ್ಯದೊಳಕ್ಕೆ ನುಗ್ಗಿದನು. ಆನೆ, ಕುದುರೆ, ರಥ, ಕಾಲಾಳುಗಳನ್ನು ಕಡಿದಿಟ್ಟನು. ಬಾಣರಾಶಿಯಿಂದ ಎಂಟು ಸಾವಿರ ಕುದುರೆಗಳನ್ನು ಸೀಳಿದನು. ಐನೂರು ಆನೆಗಳನ್ನು ಕತ್ತರಿಸಿದನು. ಸಾವಿರ ರಥಗಳನ್ನು ಮುರಿದಿಟ್ಟನು. ಲೆಕ್ಕಕ್ಕೆ ಒಂದು ಲಕ್ಷ ಕಾಲಾಳುಗಳು ಯಮಪುರವನ್ನು ಸೇರಿದರು. ಆಮೇಲೆ ಸುಶರ್ಮನ ಬೆನ್ನು ಹತ್ತಿ, 'ಛಿ! ಭ್ರಷ್ಟನೆ! ವಿರಾಟರಾಯನನ್ನು ಬಿಟ್ಟುಬಿಡು. ಇಲ್ಲದಿದ್ದರೆ ನಿನ್ನ ಪರಿಣಾಮವಾಗಲಾರದು.' ಎಂದು ಹೇಳಿ ಆ ಸುಶರ್ಮನನ್ನು ಕೈಸೆರೆ ಹಿಡಿದು ವಿರಾಟರಾಯನನ್ನು ಬಿಡಿಸಿದನು.

ಆಗ ವಿರಾಟರಾಯನು ಬಹಳ ಸಂತೋಷಿಸಿ, 'ಅಯ್ಯಾ! ಶೂರಾಗ್ರಣಿಯೆ! ನನಗೆ ಜೀವದಾನ ಮಾಡಿ, ಕಾಪಾಡಿದೆ. ಬಹಳ ಉಪಕಾರವಾಯಿತು. ನೀನು ಪರಮಸಾಹಸಿ, ನನ್ನ ಮೆಚ್ಚಿಗೆಯ ವಲಲನೆ! ನನ್ನನ್ನು ಬಿಡಿಸಿ ಶತ್ರುವನ್ನು ಸೆರೆ ಹಿಡಿದೆಯಲ್ಲ! ನಿನ್ನ ಸಮಾನರಿಲ್ಲ?' ಎಂದು ಮನ್ನಿಸಿದನು. ಆ ಬಳಿಕ ಧರ್ಮರಾಯನು ಬಂದು ನೋಡಿ, ರಾಜನಿಗೆ ಬಿಡುಗಡೆಯಾದುದಕ್ಕೆ ಸಂತೋಷಿಸಿ, ಸುಶರ್ಮನನ್ನು ಸೆರೆಯಿಂದ ಬಿಟ್ಟುಬಿಡಬೇಕೆಂದು ವಿರಾಟರಾಯನಿಗೆ ಹೇಳಿದನು. ಕಂಕಭಟ್ಟನ ಇಷ್ಟದಂತೆ ಸಿಕ್ಕಿದ್ದ ಶತ್ರುವನ್ನು ಬಿಟ್ಟುಬಿಟ್ಟರು. ಹೀಗೆ ಆ ರಾತ್ರಿಯು ಯುದ್ಧದಲ್ಲಿ ಗೆದ್ದುದರಿಂದ ಸೆರೆಹಿಡಿದಿದ್ದ ದನಗಳೆಲ್ಲ ಪಟ್ಟಣದ ಕಡೆಗೆ ಹಿಂದಿರುಗಿದವು. ಆಗ ವಿರಾಟರಾಯನು ಅವರನ್ನು ನೋಡಿ 'ಪರೋಪಕಾರಿಗಳಿರಾ! ನೀವು ನಾಲ್ವರೂ ಯಾವ ದೇಶದ ವೀರರೋ ತಿಳಿಯದು. ನೀವು ರಾಜರುಗಳೇ ಹೊರತು ಸಾಮಾನ್ಯರಲ್ಲವೆಂದು ತೋರುತ್ತಿದೆ. ನಾನು ಈ ರಾಜ್ಯ

ವನ್ನು ನಿಮಗೆ ಒಪ್ಪಿಸಿ ನಿಮ್ಮ ಸೇವೆ ಮಾಡಿಕೊಂಡು ಇರುವೆನು, ಎನ್ನಲು ಧರ್ಮರಾಯನು ಪ್ರಭುವೆ! ನಿನ್ನ ಸನ್ಮಾನಕ್ಕೆ ಬಲು ಸಂತೋಷವಾಯಿತು. ಈ ಭೂಮಿಯು ನಮ್ಮದೇ ಸರಿ. ಪಟ್ಟಣಕ್ಕೆ ಹೊರಡೋಣ. ನಡೆಯಿರಿ? ಎಂದು ಹೊರಟರು. ಕೌರವ ಸೇನೆಯು ಮಾನ ಭಂಗದಿಂದ ಜರುಗಿಕೊಂಡಿತು. ಸುಶರ್ಮನು ದುಃಖದಿಂದ ತಲೆಯಮೇಲೆ ಮುಸುಕು ಹಾಕಿಕೊಂಡು ಪಾಳಯಕ್ಕೆ ತಿರುಗಿದನು. ಸೂರ್ಯನು, ಈ ಲೋಕದ ಜನರು ನಿದ್ರೆಯಿಂದ ವಹಿಸಿದ್ದ ಮೌನವೆಂಬ ಮುದ್ರೆಯನ್ನು ಒಡೆದು ಬಿಟ್ಟುದರಿಂದ ಎಲ್ಲರೂ ಎಚ್ಚರಗೊಂಡು ತಮ್ಮ ನಿತ್ಯ ಕರ್ಮಗಳನ್ನು ಮಾಡತೊಡಗಿದರು. ಅತ್ತ ಕುರುರಾಯನು ಉತ್ತರಕಡೆ ಗೋವುಗಳನ್ನು ಹಿಡಿದುಕೊಂಡನು.

---

## ಆರನೆಯ ಸಂಧಿ.

**ಶತ್ರುಭಯಂಕರನಾದ ಅರ್ಜುನನು ವಿರಾಟರಾಯನ ಮಗನಾದ ಉತ್ತರನಿಗೆ ಸಾರಥಿಯಾದನು.**

ಇತ್ತ ಉತ್ತರ ದಿಕ್ಕಿನಲ್ಲಿ ದುರ್ಯೋಧನನ ಸೈನಿಕರು ಹಸುಗಳ ಮಂದೆಯನ್ನು ಸೆರೆ ಹಿಡಿದರು. ಭೀಷ್ಮ, ದ್ರೋಣ, ಕರ್ಣ, ಮೊದಲಾದ ಶೂರರು ಮೈಗಾವಲಾಗಿದ್ದರು. ಕರ್ಣ, ದುಶ್ಶಾಸನ, ಸೈಂಧವರು ಗೋಪಾಲಕರನ್ನು ಹಿಡಿದು ಹೊಡೆಯುತ್ತಾ ಬಂದರು. ಸೈನ್ಯದ ಮುಂದಾಳುಗಳು ನುಗ್ಗಿ, ಸಿಕ್ಕಿ ಸಿಕ್ಕಿದ ಗೋಪಾಲಕರನ್ನು ಸೆರೆ ಹಿಡಿದರು. ಆ ಸೇನೆಗೆ ಎದುರಿಸಿ ಯುದ್ಧ ಮಾಡತಕ್ಕವರೇ ಇಲ್ಲ. ದನ ಕಾಯುವವರು ನಿಲ್ಲಬಲ್ಲರೆ? ಎದುರಿಸಿ ನಿಂತವರು ಸ್ವರ್ಗದ ಸುಖವನ್ನನುಭವಿಸುವದಕ್ಕೆ ಹೋದರು. ಅಂಜು ಪುರುಕಿಗಳೆಲ್ಲಾ ಪಲಾಯನ ಮಾಡಿದರು. ಕಳೆದುಳಿದವನು ಒಬ್ಬ ಗೋಪಾಲನು ಮಾತ್ರವೇ. ಅವರು ಅವನ ಮೂಗಿನಮೇಲೆ ಸುಣ್ಣದಿಂದ ಗುರುತು ಬರೆದು, ಶತ್ರುವಾದ ವಿರಾಟನ ಪಟ್ಟಣಕ್ಕೆ ಅಟ್ಟಿದರು. ‹‹ಎಲಾ! ನೀನು

ನಿಮ್ಮ ದೊರೆಯ ಬಳಿಗೆ ಹೋಗಿ ಹೀಗೆ ಹೇಳು ! ಕುರುರಾಜನ ಸೇನೆಯು ಬಂದು ದನಗಳ ಮಂದೆಯನ್ನು ಹಿಡಿದೊಯ್ಯುತ್ತಿದೆ; ಶೂರರು ಯಾರಾದರೂ ಇದ್ದರೆ ಬಿಡಿಸಿಕೊಂಡು ಹೋಗಲಿ.''

ಆ ಗೊಲ್ಲನು ಆಹಾ! ಪುಣ್ಯಶೇಷದಿಂದ ಇಂದಿಗೆ ಬದುಕಿದೆನು. ಮುಂದೆ ಆಗುವುದಾಗಲಿ, ಎಂದು ತಲೆಗೊಡಹುತ್ತ, ಕೈಯಲ್ಲಿದ್ದ ಬಿಲ್ಲನ್ನು ಒತ್ತಟ್ಟಿಗೆ ಬಿಸುಟು, ರಾಜಧಾನಿಯ ಕಡೆಗೆ ಓಡಿಬರುತ್ತಿದ್ದನು. ದಾರಿಯಲ್ಲಿ ಹೋಗುವ ಜನರು ಅವನನ್ನು ನೋಡಿ ‘‘ಎಲಾ ತಮ್ಮಾ ! ಏಕೆ ಹೀಗೆ ಓಡುತ್ತಿದ್ದೀಯೆ ? ಯುದ್ಧದ ಸುದ್ದಿ ಏನು?'' ಎಂದು ಕೇಳಿದರು. ಅವನು ‘‘ರಣವು ಕಿರಿದಾಗಿಲ್ಲ, ಮಾತನಾಡಲಿಕ್ಕೆ ಹೊತ್ತಿಲ್ಲ, ನಡೆಯಿರಿ'' ಎಂದು ಹೇಳುತ್ತ ಬೇಗ ಬೇಗ ಓಡಿ ಬಂದನು. ಅರಸನನ್ನು ವಿಚಾರಿಸಿದನು, ಅವನು ದಕ್ಷಿಣಗೋಗ್ರಹಣದ ಕಡೆ ಹೋಗಿದ್ದವನು ರಾಜಧಾನಿಗೆ ಬಂದಿಲ್ಲ. ಯುದ್ಧ ಭೂಮಿಯಲ್ಲಿಯೇ ಇದ್ದಾನೆ, ಏನುಮಾಡಬೇಕು ? ಯುವರಾಜನಾದ ಉತ್ತರ ಕುಮಾರನಿಗೆ ಹೇಳುವೆನು ! ಏನಾದರೂ ಏರ್ಪಾಡು ಮಾಡಲಿ, ಎಂದು ಯೋಚಿಸಿ ಅಂತಃಪುರದ ಕಡೆಗೆ ನುಗ್ಗಿದನು. ಒಳಹೊಕ್ಕು ನೋಡಲು ಆ ಉತ್ತರ ಕುಮಾರನು ಸ್ತ್ರೀಗಣದ ನಡುವೆ ಚಕ್ಕಂದದ ಮಾತುಗಳಾಡುತ್ತ ಕುಳಿತಿದ್ದನು. ಅಲ್ಲಿಗೆ ಬಂದ ಗೋಪಾಲನ ಸ್ಥಿತಿಯನ್ನು ನೋಡಿದರೆ ಮುಖದಲ್ಲಿ ಭಯದ ಚಿಹ್ನೆಗಳು, ಧಗೆಯು ಹೊಯ್ದು ಗಂಟಲು ಒಣಗಿಹೋಗಿದೆ, ನಾಲಿಗೆಯ ತುದಿಯಿಂದ ತೊದಲು ತೊದಲು ನುಡಿಗಳು ಹೊರಡುತ್ತಿವೆ, ಎದೆ ಬಡಿದುಕೊಳ್ಳುತ್ತಿದೆ. ಇಂತಹ ಅವಸ್ಥೆಯಲ್ಲಿ ಅವನು ಓಡಿಬಂದು ಯುವರಾಜನಿಗೆ ಕೈ ಮುಗಿದು ಇಂತೆಂದನು.

ಗೋಪಾಲ.—ರಾಜಕುಮಾರನೇ ! ಏಳು, ಯುದ್ಧದಲ್ಲಿ ವೀರನಾಗು. ಅವಸರದಕಾರ್ಯ ಒದಗಿದೆ, ಅಪ್ಪಾಜಿಯವರು ದಕ್ಷಿಣ

ಕಡೆಯು ಯುದ್ಧಕ್ಕೆ ಹೋಗಿದ್ದಾರೆ. ಕೌರವರು ಉತ್ತರ ಭಾಗದಿಂದ ಬಂದು ನಮ್ಮ ಗೋಗಣವನ್ನು ಸೆರೆ ಹಿಡಿದರು. ಶತ್ರುಗಳ ಸೈನ್ಯವು ಅಪಾರವಾಗಿದೆ. ಲೆಕ್ಕಿಸಲಿಕ್ಕೇ ಆಗದು. ಮೇಲೆ ಮೇಲೆ ಸೈನ್ಯವು ಬರುತ್ತಲೇಇದೆ. ಸುಮ್ಮನೆ ಕುಳಿತಿರುವಕಾಲವಲ್ಲ. ಬೇಗಏಳು. ಸೈನ್ಯವನ್ನು ಸಜ್ಜುಗೊಳಿಸು. ರಾಣಿವಾಸದ ವೈಭವವು ಈಗ್ಗೆ ಸಾಕು. ಸಾವಕಾಶ ಮಾಡಬೇಡ.

ಉತ್ತರ:—ಎಲಾ ಏನೋ ಅದು ? ನಿನ್ನ ಅವಸ್ಥೆ ಏನು ? ಮೂಗಿನಮೇಲೆ ಸುಣ್ಣವೇನು ? ತೊದಲುಮಾತೇನು ? ಎದೆ ಹೊಡೆದುಕೊಳ್ಳುವುದೇನು ? ನಿನ್ನೆಯ ರಣದಲ್ಲಿ ನಮ್ಮಪ್ಪಸೋತೆದ್ದನೆಂಬ ಸುದ್ದಿ ಬಂದಿದೆಯಲ್ಲಾ ? ಈದಿನ ಮತ್ತೇನುಬಂತು ? ಹೆದರಬೇಡ. ಯುದ್ಧದ ಸಮಾಚಾರವನ್ನು ವಿವರವಾಗಿ ಹೇಳು.

ಗೋಪಾಲ:—ಸ್ವಾಮಿ ! ಕೌರವನಸೇನೆಯು ಉತ್ತರ ದಿಕ್ಕಿನಿಂದ ಬಂದು ನಮ್ಮ ಗೋವುಗಳನ್ನೆಲ್ಲಾ ಹಿಡಿದುಕೊಂಡಿತು. ಕೌರವರಾಯನು ಬಂದಿರುವನು. ಆತನ ಸಂಗಡ ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ, ಕರ್ಣ, ವಿಕರ್ಣ, ಶಕುನಿ, ಸೈಂಧವ, ಮೊದಲಾದ ಮಹಾ ಶೂರರು ಬಂದಿರುವರು. ಸೈನ್ಯವು, ಸಮುದ್ರದ ತಾಯ್ಮಳಲು ಕಾಣುವಹಾಗೆ ಬಂದು ನಿಂತಿದೆ. ಇದನ್ನು ವಿವರಿಸುವುದಕ್ಕೆ ನನಗೆ ಶಕ್ತಿ ಸಾಲದು. ಕಣ್ಣುದೃಷ್ಟಿ ಹರಿಯುವತನಕ ಎತ್ತ ನೋಡಿದರೂ ಆನೆಗಳಗುಂಪೇ ಕಾಣುತ್ತಿದೆ. ಕುದುರೆಗಳೂ, ರಥಗಳೂ, ಕಾಲಾಳುಗಳೂ, ಸುತ್ತಲೂ ಬಳಸಿಕೊಂಡಿವೆ. ಎತ್ತನೋಡಿದರೂ ಸೇನೆಯೇ ಹೊರತು ಮತ್ತೇನೂ ಕಾಣಬರುವುದಿಲ್ಲ. ಈ ಭೂಮಿಗೆ ಪ್ರತಿಯಾದ ಭೂಮಿಯನ್ನು ಒಡ್ಡಿದರೊ, ಅಥವಾ ನೆಲದ ತಡಿಕೆಯೋ ಎಂಬಂತೆ ಝಲ್ಲರಿಗಳುತುಂಬಿವೆ. ಚಾಮರಗಳು, ಸೂರೇಪಾನಗಳು, ಧ್ವಜಗಳು,

ಇವುಗಳಿಂದ ಸೂರ್ಯಕಿರಣಗಳು ಬೀಳಲಿಕ್ಕೆ ಅವಕಾಶವೇ ಇಲ್ಲವು. ಗಾಳಿಯಸಂಚಾರವಂತು ನಿಂತೇಹೋಯಿತು. ನೀನು ಆ ದೊಡ್ಡ ಸೈನ್ಯ ದೊಂದಿಗೆ ಕಾದಿ ಜಯಿಸಬೇಕು. ಗೋಗಣವನ್ನು ಹಿಂದಿರುಗಿಸಿ ಕೊಂಡು ಬರಬೇಕು. ಕೋಟೆಯನ್ನು ಬಲಪಡಿಸಬೇಕು. ಯುದ್ಧಕ್ಕೆ ಹಿಂದೆಗೆಯದೆ ನಿಂತು ಎದುರಿಸುವಶಕ್ತಿ ನಿನಗಿದ್ದರೆ ಬೇಗನೆ ಎದ್ದು ಯುದ್ಧಕ್ಕೆ ಸನ್ನದ್ಧನಾಗು.

ಉತ್ತರ:—(ಕೆಲಬಲದವರನ್ನೂ, ರಾಣಿವಾಸದವರನ್ನೂ ನೋಡಿ, ಮೀಸೆಗಳನ್ನು ಹುರಿಗೊಳಿಸುತ್ತಾ) ಎಲಾ! ಅಲ್ಲಿಯಾರಿರುವಿರಿ? ಈ ಕುನ್ನಿಯನ್ನು ಹೊರಕ್ಕೆನೂಕಿರಿ. ಯುದ್ಧವೆಂದರೆ ಇಷ್ಟರ ಹೆದರಿ ಕೆಯೇ? ತನ್ನ ಹೆಂಡಿರನ್ನು ಸಾಕುವಚಾಂಚಲ್ಯದಿಂದ ಬಾಯಿಗೆ ಬಂದಹಾಗೆ ಬಗುಳುತಿದ್ದಾನೆ. ನಾನು ಕೋಪಿಸಿಕೊಂಡು ಯುದ್ಧಕ್ಕೆ ನಿಂತರೆ, ಶಿವನುಕೂಡ ನನ್ನೆದುರಿಗೆ ನಿಲ್ಲಲಾರನು. ಮಿಕ್ಕಕುರಿಗಳ ಪಾಡೇನು? ಸಾಕು? ತೆಗೆ.

ಗೋಪಾಲ:—ಜೀಯಾ! ಏಕೆ ಕೋಪಿಸುವಿರಿ! ಸೇನೆಯು ಎಷ್ಟುಬಲವಾಗಿದ್ದರೆತಾನೇಏನು? ನಿಮಗೆ ಅದೊಂದುಲಕ್ಷ್ಯವೆ? ಸೂರ್ಯನಎದುರಿಗೆ ಕತ್ತಲೆನಿಲ್ಲುವುದೆ? ಈ ಬಡಅರಸರಶೌರ್ಯವು ದನ ಕಾಯುವವರಲ್ಲಿ ಮೆರೆಯುವುದೇಹೊರತು ನಿಮ್ಮಎದುರಿಗೆ ನಡೆದೀತೆ? ಅದುಹಾಗಿರಲಿ, ಬೇಗಏಳು, ಕೌರವರ ಬಲದಮೇಲೆ ನಿನ್ನ ಕೈ ತೋರಿಸು.

ಉತ್ತರ:—(ಮುಗುಳು ನಗೆಯಿಂದ) ಆಹ! ನಾನು ಶೂರ ನೆಂದು ಈಗತಿಳಿಯಿತೆ? ಈ ಮೀಸೆಗಳನ್ನು ನೋಡು, ನನ್ನ ಪೌರುಷ ವನ್ನು ತೋರಿಸಲಿಕ್ಕೆ ಇದು ಸಕಾಲವಾಗಿದೆ, (ಮೀಸೆತಿರುಹುತ್ತಾ ಓಲ ಗದ ಸ್ತ್ರೀಯರ ಮುಖನೋಡಿ, ಜಂಭದಿಂದ) ಎಲೈ ಗೋಪನೇ! ನಿನ್ನ ಮಾತುನಿಜ. ತಪ್ಪೇನು? ಕೌರವನು ಜೂಜಿನನೆವದಿಂದ ಧರ್ಮಾತ್ಮರಾದ

ಪಾಂಡವರನ್ನು ಸೋಲಿಸಿ ರಾಜ್ಯವನ್ನು ಕಿತ್ತುಕೊಂಡೆನೆಂಬ ಗರ್ವದಿಂದ ನಮ್ಮನ್ನು ಕೆಣಕಲಿಕ್ಕೆ ಬಂದನೆ? ಆಗಬಹುದು, ನನ್ನ ಸಾಹಸದಿಂದ ಅವರನ್ನು ಹೊಡೆದು ಓಡಿಸಿ ದನಗಳನ್ನು ಹಿಂದಕ್ಕೆ ತರುವೆನು. ಅಷ್ಟರಿಂದ ಬಿಡುವೆನೆಂದಿರುವೆಯೋ? ಅವನ ಹಸ್ತಿನಾಪುರವನ್ನು ಸೂರೆಗೊಳ್ಳುವೆನು. ಆ ನೀಚನು ಪಾಂಡವರಿಂದ ರಾಜ್ಯವನ್ನು ಕಿತ್ತುಕೊಂಡು, ಹೆಂಗಸನ್ನು ಹಿಡಿದು, ಪಾಂಡವರನ್ನು ಹೊರಡಿಸಿ ಕೊಬ್ಬಿನಿಂದ ನನ್ನ ಮೇಲೆ ಭುಜಬಲವನ್ನು ತೋರಲಿಕ್ಕೆ ಬಂದನೆ? ನಾನು ಬಡಯುಧಿಷ್ಟಿರನೆಂದು ತಿಳಿದಿರುವನೇನೊ? ನಾನು ಕೋಪಿಸಿದರೆ ಕೌರವನ ಐಶ್ವರ್ಯವನ್ನೆಲ್ಲಾ ಕ್ಷಣಕಾಲದಲ್ಲಿ ಸುಲಿದುಕೊಳ್ಳುವೆನು, ಕೈಲಾಗದವರನ್ನು ಮೋಸದಿಂದ ಓಡಿಸಿದ ಅಹಂಕಾರದಿಂದ ನನ್ನ ಸಂಗಡ ವೈರವನು ಸಾಧಿಸಿ ಬದುಕಬಲ್ಲನೆ? ಅವನ ಆಯುಷ್ಯವು ಮುಗಿದು ಬಂದಿದೆ. ಇದರ ಫಲವನ್ನು ಶೀಘ್ರದಲ್ಲಿಯೇ ಅನುಭವಿಸಲಿ, (ಹೀಗೆ ಹೆಂಗಸರ ಎದುರಿಗೆ ತನ್ನ ಬಲವನ್ನು ಕೊಚ್ಚಿಕೊಳ್ಳುತ್ತಾ ಅಲ್ಲಿಗೂ ಸುಮ್ಮನಾಗದೆ, ರೋಷಪರವಶನಾಗಿ ಗರ್ವದಿಂದ ಮರಳಿ ಮಾತಿಗೆ ಪ್ರಾರಂಭಿಸಿದನು) ಎಲಾ! ಗೋಪಾ! ಕೌರವನಿಗೇನು ಬುದ್ಧಿಗಿದ್ದಿಯಿಲ್ಲವೊ? ಯಮನ ಮೀಸೆಯನ್ನು ಕತ್ತರಿಸಹೋದನೆ? ಕಾಲಭೈರವನ ದಾಡೆಯನ್ನು ಅಲುಗಿಸಿದನೇ? ಮೃತ್ಯುದೇವತೆಯ ಎದೆಯ ಮೇಲಣ ಸೆರಗನ್ನು ಸೆಳದನೇ? ಗವಿಯಲ್ಲಿ ಮಲಗಿದ್ದ ಸಿಂಹವನ್ನು ಕೆಣಕಿದನೆ? ಇವನು ಶುದ್ಧ ಹುಚ್ಚನಲ್ಲವೆ? (ಗಹಗಹಿಸಿ ನಕ್ಕು ಸ್ವಲ್ಪಹೊತ್ತು ಯೋಚಿಸಿದವನಂತೆ ನಟಿಸಿ,) ನಾನು ಯಾರೊಂದಿಗೆ ಕಾದಲಿ? ಆ ಸೇನೆಯಲ್ಲಿ ಕೆಲವರು ಹಾರುವರು, ಕೆಲವರು ಯಮುನ ನೆರೆಯೂರಿನವರು, ಕೆಲವರು ಹೀನಜಾತಿಯಲ್ಲಿ ಹುಟ್ಟಿದವರು, ಇವರಲ್ಲಿ ಹೆಸರು ಪಡೆದವರು ಯಾರಿರುವರು? ಇವರೆಲ್ಲಾ ವೀರರಂತೆ! ಇಂತವರ ಸಂಗಡ ಕಾದುವುದು ನನಗೆ ಅವಮಾನವಲ್ಲವೆ? ದೊರೆಗಳು ಬಂದು ದನಗಳನ್ನು

ಹಿಡಿಯಬಹುದೆ ? ಈ ನೀಚಮಾರ್ಗವನ್ನು ಆ ಕೌರವನಿಗೆ ಯಾರು ಹೇಳಿಕೊಟ್ಟರು ? ಇದರಿಂದ ಅವನಿಗೆ ಮೇಲಾಗುವದೆ ? ಅಪ ಕೀರ್ತಿಗೆ ಏಕೆ ಸೆರಗೊಡ್ಡಿದನು ? ನನ್ನ ಗೋಧನವನ್ನು ಎಂದಿಗೆ ಬಿಟ್ಟೇನು ? ನನ್ನನ್ನು ಕೆಣಕಿ ಬದುಕಬಲ್ಲವರುಂಟೆ ? (ಕೈಯಲ್ಲಿ ಕತ್ತಿಯನ್ನು ಹಿಡಿದು ನಟಿಸುತ್ತಾ) ಇಗೋ ಇದರಿಂದಲೇ ಕೌರವನ ತಲೆಯನ್ನು ಕಡಿದಿಡುವೆನು, ಹಸ್ತಿನಾಪುರದಲ್ಲಿ ನಮ್ಮ ರಾಜ್ಯವನ್ನಿಡು ವೆನು, ಕುರುಸೇನೆಯನ್ನು ಧೂಳೀಪಟಾಮಾಡಿ ಓಡಿಸುವೆನು, ಜಯ ಲಕ್ಷ್ಮಿಯು ನನ್ನ ಕೈಹಿಡಿದಿರುವಳು, ನೋಡು, ಹೀಗೆ ಬಾಯಿಗೆ ಬಂ ದಂತೆ ಅಲ್ಲಿ ನೆರೆದ ಹೆಣ್ಣುಮಕ್ಕಳ ಎದುರಿಗೆ ಪೌರುಷದ ನುಡಿಗಳನ್ನು ಕೊಚ್ಚಿಕೊಳ್ಳುತ್ತಾ ಬಂದನು. ಅಲ್ಲಿ ಇದುಬೇಕು ಇದುಬೇಡ ಎಂಬು ವರುಯಾರೂ ಇಲ್ಲ. ಅವನ ಪೌರುಷದ ಮಾತುಗಳು ಹೆಚ್ಚುತ್ತಲೇ ಬಂದುವು, ಎದುರಾಡುವವರೇ ಇರಲಿಲ್ಲ, ಅಲ್ಲಿಗೂ ಸಾಲದೆ ಹೆಂಗಸರ ನಡುವೆ ಮತ್ತಿಂತೆಂದನು. ನಾನು ಮುದಿಭೀಷ್ಮನನ್ನು ಅರಿಯೆನೆ ? ದ್ರೋಣನ ಬಲವು ನನಗೆ ಗೊತ್ತಿಲ್ಲವೆ ? ಹೀನಕುಲಜನಾದ ಕರ್ಣನು ನನಗೆ ಸಮಬಲನೆ ? ಬರಿಯ ಆಡಂಬರದಿಂದ ನಮ್ಮ ದನಗಳನ್ನು ಸೆರೆ ಹಿಡಿದರೆ ಅವರ ಹೆಂಡಿರನ್ನು ಸೆರೆಹಿಡಿಯದೆ ಬಿಡುವೆನೆ? ಸುಮ್ಮನೆ ಈಗ ನುಡಿದು ಫಲವಿಲ್ಲ. ನಿನ್ನೆ ನಡೆದ ಯುದ್ಧದಲ್ಲಿ ನನ್ನ ಸಾರಥಿ ಮಡಿದ ನು, ಇದರಿಂದ ನನಗೆ ಸ್ವಲ್ಪ ಅನುಕೂಲತಪ್ಪಿದೆ, ನನ್ನ ಕೈಮನಗಳಿಗೆ ತಕ್ಕ ಸಾರಥಿಯೊಬ್ಬನನ್ನು ತಂದುಕೊಟ್ಟರೆ ಸಾಕು. ಕೌರವನ ಸೇನೆಗೆ ಹುಟ್ಟಿದ ಹಬ್ಬಮಾಡಿ ನನ್ನ ಸಾಮರ್ಥ್ಯವನ್ನು ತೋರಿಸುವೆನು. ದೇವರೇ! ಈಗ ನನಗೆ ಒಬ್ಬ ಸಾರಥಿಯನ್ನು ಕರುಣಿಸು. ಮಾರಿಗೆ ಉಬ್ಬಸವಾಗು ವಂತೆಯೂ, ಯಮಪಟ್ಟಣವು ತುಂಬಿ ಹೋಗುವಹಾಗೆಯೂ, ರಣ ಪಿಶಾಚಗಳಿಗೆ ಹೊಟ್ಟೆ ಬಿರಿಯುವಂತೆಯೂ, ದಾನವಿಯರ ಹೊಟ್ಟೆ ಗಳು ದೊರೆಗರುಳುಗಳಿಂದ ಹುಣ್ಣಾಗುವಂತೆಯೂ, ಬೇತಾಳಗಳಿಗೆ

ಹಬ್ಬವಾಗುವಂತೆಯೂ ಮಾಡದೆ ಬಿಡೆನು. ಈ ರಣವು ಆಗ್ಗೆ ಸಾರ್ಥಕ ವೆನಿಸುವುದು.

ಆ ಹೆಂಗಸರ ನಡುವೆ ಶಿಖಂಡಿರೂಪದಲ್ಲಿದ್ದ ಅರ್ಜುನನು ಉತ್ತರನ ಬಾಲಭಾಷೆಗಳನ್ನೆಲ್ಲಾ ಕೇಳಿ ಒಳೊಳಗೆ ನಗುತ್ತಿದ್ದನು. ಉತ್ತರನ ಮಾತು ಮುಗಿದಮೇಲೆ ಸೈರಂಧ್ರಿಯಾದ ದ್ರೌಪದಿಯನ್ನು ಏಕಾಂತ ಸ್ಥಳಕ್ಕೆ ಕರೆದೊಯ್ದು, "ಎಲೌ ಕಾಂತಾಮಣಿಯೆ! ಉತ್ತರನ ಪೌರುಷದ ನುಡಿಗಳನ್ನೆಲ್ಲಾ ಕೇಳಿದೆಯಾ? ಈಗ ನಾವು ಸುಮ್ಮನೆ ಕುಳಿತುಕೊಳ್ಳುವುದು ಯುಕ್ತವಲ್ಲ. ನಮ್ಮ ಅಜ್ಞಾತವರ್ಷದ ಅವಧಿಯು ಮುಗಿದುಹೋಯಿತು. ಈಗ ಕೌರವನು ಸೇನೆಯೊಂದಿಗೆ ಏಕೆ ಬಂದಿರುವನು? ಬಲ್ಲೆಯಾ? ನಮ್ಮನ್ನು ಕಂಡುಹಿಡಿದು ಪುನಃ ಕಾಡಿಗೆ ಅಟ್ಟಬೇಕೆಂಬುದೇ ಇದಕ್ಕೆ ಕಾರಣ, ಈಗ ನಾವು ಮುಂದಕ್ಕೆ ನುಗ್ಗಬೇಕು. ಸಾರಥಿಯಿಲ್ಲವೆಂಬ ನೆವದಿಂದ ಉತ್ತರನು ಹಿಂಜರಿಯುತ್ತಿದ್ದಾನೆ. ನಾನೇ ಸಾರಥಿಯಾಗಿ ಕೌರವರಿಗೆ ನನ್ನ ಕೈ ತೋರಿಸಬೇಕೆಂದು ನಿಶ್ಚಯಿಸಿದ್ದೇನೆ. ಇದಕ್ಕಾಗಿ ಈ ವೇಳೆಯಲ್ಲಿ ನೀನು ಸಹಾಯಕಳಾಗು, 'ಅರ್ಜುನನಿಗೆ ನಾನು ಸಾರಥಿಯಾಗಿದ್ದೆನೆಂದು ಉತ್ತರೆ (ಸುಧೇಷ್ಣೆಯ ಮಗಳು) ಯ ಸಂಗಡ ಹೇಳು, ಅವಳು ಹೋಗಿ ತಮ್ಮಣ್ಣನಿಗೆ ತಿಳಿಸಲಿ, ಅವನು ನನ್ನನ್ನು ಕರೆಯಿಸುವನು; ಮುಂದಣ ಕಾರ್ಯವನ್ನು ನಾನು ನೋಡಿಕೊಳ್ಳುವೆನು," ಎಂಬದಾಗಿ ಹೇಳಿದನು. ದ್ರೌಪದಿಯು ತಮ್ಮ ಪ್ಪಣೆಯಂತೆ ನಡಿಸುವೆನು ಎಂದು ಹೇಳಿ ಉತ್ತರೆಯ ಬಳಿಗೆ ಬಂದು "ಎಲೌ ಕುಮಾರಿ! ಈ ನಮ್ಮ ಬೃಹನ್ನಳೆಯು ಪೂರ್ವದಲ್ಲಿ ಅರ್ಜುನನಿಗೆ ಸಾರಥಿಯಾಗಿ ಇದ್ದಳಂತೆ. ಆತನು ಈ ಸಾರಥಿಯ ಸಹಾಯದಿಂದ ಖಾಂಡವ ವನವನ್ನು ಸುಟ್ಟು ಜಯವನ್ನು ಪಡೆದನೆಂದು ಕೇಳಿದ್ದೇನೆ; ನಿಮ್ಮಣ್ಣನು ಬೃಹನ್ನಳೆಯನ್ನು ಸಾರಥಿಯಾಗಿ ಏಕೆ ಮಾಡಿಕೊಳ್ಳಬಾರದು?" ಎಂದಳು.

ಉತ್ತರೆಗೆ ಈ ಮಾತು ಕೇಳಿ ಬಲು ಸಂತೋಷವಾಯಿತು. ಸೈರಂಧ್ರೀ ! ಇದರಲ್ಲಿ ಅಭ್ಯಂತರವಿಲ್ಲ. ಆಗಬಹುದು. ಈಗಲೇ ಹೇಳಿಬಿಡುವೆನು. ಎಂದು ಓಲಗಸ್ಥಳಕ್ಕೆ ಬಂದು ಅಣ್ಣನಿಗೆ ಕೈ ಮುಗಿದು,

ಉತ್ತರೆ—ಅಣ್ಣಾ ! ಯೋಚನೆ ಏತಕ್ಕೆ ? ನಿನಗೆ ಒಳ್ಳೇ ಸಾರಥಿಯನ್ನು ಗೊತ್ತುಮಾಡಿ ಇಟ್ಟಿರುವೆನು. ಅವನನ್ನು ಕರೆದುಕೊಂಡು ಹೋಗಿ ಕುರುಸೇನೆಯೊಡನೆ ಕಾದಿ ಜಯಶೀಲನಾಗಿ ಬಾ.

ಉತ್ತರ—ತಂಗೀ! ಇದೇನು ಹೀಗೆ ಹೇಳುವೆ ? ಇಷ್ಟು ಬೇಗ ಸಾರಥಿಯು ಎಲ್ಲಿ ಸಿಕ್ಕಿದನು ? ನಿಜವಾಗಿ ಹೇಳು. ಆ ಸಾರಥಿಯು ಯಾರು ? ಅವನು ಬಲಶಾಲಿಯಾಗಿರುವನೆ ? ನಿನಗೆ ಹೇಳಿದವರು ಯಾರು ? ಶೂರನಾದ ಸಾರಥಿ ಸಿಕ್ಕಿದರೆ ಜಯವು ನಮ್ಮ ಕಡೆಗೇನೇ ಸಿದ್ಧ. ಯುದ್ಧದಲ್ಲಿ ಎಂದಿಗೂ ಸೋತುಬರುವೆನೆಂದು ತಿಳಿಯಬೇಡ. ನಿನ್ನ ಮೇಲೆ ಆಣೆ ಇಟ್ಟು ಹೇಳುತ್ತೇನೆ. ಇಂದಿಗೆ ನನ್ನ ವಿಕ್ರಮವನ್ನು ನೀನೇ ಉಳಿಸಿದೆ.

ಉತ್ತರೆ—ಅಣ್ಣಾ ! ಇದು ಸುಳ್ಳಲ್ಲ. ನಮ್ಮ ಸೈರಂಧ್ರಿಗೆ ಇದು ಚೆನ್ನಾಗಿ ಗೊತ್ತುಂಟು. ಆಕೆಯೇ ಇದನ್ನು ನನಗೆ ಹೇಳಿದವಳು. ಆ ಸಾರಥಿಯಾರಂದರೆ, ನಮಗೆ ನಾಟ್ಯವಿದ್ಯೆ ಕಲಿಸುತ್ತಿರುವ ಬೃಹನ್ನಳೆಯೇ. ಈತನು ಇಂದ್ರನ ಖಾಂಡವ ವನವನ್ನು ಸುಡುವಾಗ ಅರ್ಜುನನಿಗೆ ಸಾರಥಿಯಾಗಿ ಇದ್ದನಂತೆ. ಆತನನ್ನು ಕರೆಯಿಸಿ ಕೇಳಬಹುದು.

ಉತ್ತರ—(ಸೈರಂಧ್ರಿಯಕಡೆ ನೋಡಿ) ಎಲೌ ! ನೀನು ನನಗೆ ಸಾರಥಿಯನ್ನು ತೋರಿಸಿ ಬದುಕಿಸಿದೆ, ಒಳ್ಳೆಯ ಉಪಕಾರವಾಯಿತು. ಕೌರವನ ಕರುಳು ಬಗಿದು ರಣದೇವಿಗೆ ಬಲಿ ಕೊಡುವೆನು. ನೀನು ಅರ್ಜುನನ ಸಾರಥಿಯನ್ನು ಕರೆದುಕೊಂಡುಬಾ. ತಡೆಮಾಡದೆಹೋಗು.

ಸೈರಂಧ್ರಿ:—ಎಲೈ ವೀರಾಗ್ರಣಿಯೆ! ಆತನಿಗೆ ನನ್ನ ಮಾತೆಂದರೆ ಗಣನೆ ಇಲ್ಲ. ನಿನ್ನ ತಂಗಿಯನ್ನು ಕಳುಹಿಸು. ಶಿಷ್ಯೆಳ ಮಾತು ಮಿಾರದೆ ಹೊರಟು ಬರುವನು. ಕೋಪಿಸಬೇಡ.

ಉತ್ತರ:—(ಉತ್ತರೆಯ ಕಡೆ ತಿರುಗಿ) ತಂಗೀ—ನಿಮ್ಮ ಗುರುವನ್ನು ನೀನೇ ಕರೆದು ತರುವದು ಒಳ್ಳೆಯದು, ನಿನ್ನ ಮಾತು ಮಿಾರನು.

ಉತ್ತರೆ:—ಹಾಗೆಯೇ ಆಗಲಿ, ಕರೆಯುವೆನು.

ಎಂದು ಮದನನ ಮದದಾನೆಯಂತೆ ಮಂದಗಮನದಿಂದ ಅಡಿಯಿಡುತ್ತಾ ಬೃಹನ್ನಳೆಯ ಬಳಿಗೆ ಬಂದು ಮಂದಹಾಸದಿಂದ ಕೈಮುಗಿದು ನಿಂತಿದ್ದಳು.

ಬೃಹ:—ಮಗಳೇ! ಇದೇನು! ಬಲು ಸಡಗರದಿಂದ ಬಂದೆ? ಏನಾದರೂ ವಿಶೇಷವಾದ ಕಾರ್ಯವುಂಟೆ?

ಉತ್ತ:—ಪಂತರೇ—ಮತ್ತೇನೂ ವಿಶೇಷವಿಲ್ಲ. ನನ್ನ ಮಾತು ನಡಿಸಿ ಕೊಡುವುದಾಗಿ ಅಪ್ಪಣೆಕೊಟ್ಟರೆ—

ಬೃಹ:—ಮಗಳೇ! ಏಕೆ ಹೀಗೆ ಹೇಳುತ್ತಿ! ನನ್ನಲ್ಲಿ ನಿನಗೆ ಸಲುಗೆ ಇಲ್ಲವೆ? ನಿನ್ನ ಮಾತು ಮಿಾರುವೆನೆ? ಹೆದರದೆ ಹೇಳಬಹುದು.

ಉತ್ತ:—ಗುರುಗಳೇ! ಹಸ್ತಿನಾಪುರದ ಅರಸರು ನಮ್ಮ ಮೇಲೆ ದಂಡೆತ್ತಿ ಬಂದಿರುವರಂತೆ! ಹುಲ್ಲುಗಾವಲಿನಲ್ಲಿ ಮೇಯುತ್ತಿದ್ದ ಒಂದು ಲಕ್ಷ ಗೋವುಗಳನ್ನು ಸೆರೆಹಿಡಿದುಕೊಂಡರಂತೆ! ಗೋಪಾಲಕರನ್ನೆಲ್ಲಾ ಹೊಡೆದು ಹಾಕಿದರಂತೆ! ಆ ವೀರರ ಸಂಗಡ ಯುದ್ಧ ಮಾಡಲಿಕ್ಕೆ ಹೋಗಬೇಕೆಂದು ನಮ್ಮ ಅಣ್ಣಯ್ಯನು ಹೊರಟಿರುವನು. ಅವನಿಗೆ ಸಾರಥಿಯಿಲ್ಲದ್ದರಿಂದ ಆತಂಕವಾಗಿದೆ. ನೀವು ಅರ್ಜುನನಿಗೆ ಸಾರಥಿಯಾಗಿದ್ದಿರೆಂದು ಕೇಳಿದ್ದೇನೆ; ಮುಂದೆ ಏನು ಮಾಡಬೇಕೆಂಬುದನ್ನು ನೀವೇ ಬಲ್ಲಿರಿ.

ಬೃಹ:—(ನಗುತ್ತಾ) ಎಲಾ ಕುಮಾರಿ! ನಾನು ಮೊದಲು

ಅರ್ಜುನನಿಗೆ ಸಾರಥಿಯಾಗಿದ್ದುದು ಸುಳ್ಳಲ್ಲ. ಈಗ ನನಗೆ ವಯಸ್ಸಾ ಯಿತು, ಆದರೂ ನೋಡೋಣ. ನಡಿ.

ಎನ್ನುತ್ತಾ ಅವಳ ಸಂಗಡಲೇ ಹೊರಟು, ಓಲಗಶಾಲೆಗೆ ಬಂದನು. ಉತ್ತರ ಕುಮಾರನು ಅವನನ್ನು ಹತ್ತಿರಕ್ಕೆ ಕರೆದು ಮನ್ನಿಸಿ, ಮಾತನಾಡಿಸಿದನು.

ಉತ್ತ:—ಬೃಹನ್ನಳೆ! ಈಗ ಒಂದುಮಹತ್ಕಾರ್ಯ ಒದಗಿದೆ. ನಾನು ಶೂರರೊಂದಿಗೆ ಯುದ್ಧಕ್ಕೆ ಹೊರಡಬೇಕು. ನನ್ನ ಸಾರಥಿ ನಿನ್ನೆಯ ದಿನ ಮಡಿದನು; ನೀನು ನನಗೆ ಸಾರಥಿಯಾಗಿ ಸಹಾಯ ಮಾಡಬೇಕು. ನೀನು ಸಮರ್ಥನಂತೆ; ಅರ್ಜುನನಿಗೆ ಸಾರಥಿಯಾಗಿದ್ದೆ ಯಂತೆ! ನೀನು ಮೆಚ್ಚುವಂತೆ ಕಾದಿ ಶತ್ರುವೀರರಲ್ಲಿ ನನ್ನ ಪರಾಕ್ರಮ ವನ್ನು ತೋರುವೆನು.

ಬೃಹ:—ಕುಮಾರನೆ! ನನಗೆ ಭರತ ವಿದ್ಯೆಯಲ್ಲಿ ಪರಿಚಯ ವುಂಟು, ಸಾರಥ್ಯವನ್ನು ಮರೆತು ಬಿಟ್ಟೆನು; ಪೂರ್ವಕಾಲದಲ್ಲಿ ಸಾರಥಿಯಾಗಿದ್ದುದು ನಿಜ, ಆ ಅಭ್ಯಾಸವು ಬಿಟ್ಟು ಹೋದುದರಿಂದ ಧೈರ್ಯವಾಗಿ ಹೊರಡಲಿಕ್ಕೆ ಮನಸ್ಸಿಲ್ಲ. ಭೀಷ್ಮಾದಿ ಶತ್ರುಯೋಧರು ಸಾಮಾನ್ಯರೆಂದು ತಿಳಿಯಬೇಡ; ಸಾಮಾನ್ಯಬಲರಿಗೆ ಸಾರಥ್ಯವು ಸಲ್ಲದು; ಯುದ್ಧವು ಬಿಟ್ಟಿ ಬಿದ್ದಿಲ್ಲ.

ಉತ್ತ:—ಬೃಹನ್ನಳೆಯೇ! ಏಕೆ ಹೀಗೆ ಹೆದರುತ್ತೀ! ಯುದ್ಧದಲ್ಲಿ ನಾನು ನಿಂತಿರುವಾಗ ಭೀಷ್ಮಾದಿ ವೀರರು ನಿನ್ನನ್ನೇನು ಮಾಡುವರು? ನೀನು ಧೈರ್ಯದಿಂದ ನಿಲ್ಲು; ಒಂದು ನಿಮಿಷದಲ್ಲಿಯೇ ಅವರನ್ನೆಲ್ಲಾ ನಾನು ಗೆಲ್ಲುವೆನು. ನಾನು ಯಾರು? ಬಲ್ಲೆಯಾ? ದ್ರೋಣಾದಿ ವೀರರನ್ನು ನಾನು ಕಾಣದವನೇ! ಒಣಮಾತುಗಳು ಸಾಕು; ಗಾಬರಿ ಯಾಗಬೇಡ. ಏಳು. ನನಗೆ ಸಾರಥಿಯಾಗು.

ಬೃಹ:—ಸರಿಸರಿ! ನೀನು ವೀರನೇ ನಿಜ. ಶತ್ರುಗಳನ್ನು

ಕೊಲ್ಲಲಿಕ್ಕೆ ತಕ್ಕ ಪ್ರಾಯವೂ ನಿನಗೆ ಇದೆ. ನಿನ್ನ ಇಷ್ಟದಂತೆಯೇ ಆಗಲಿ. ಸಾರಥ್ಯವನ್ನು ಮಾಡಿ ನೋಡುವೆನು. ರಥವನ್ನು ತರಿಸು.

ಯುವರಾಜನ ಅಪ್ಪಣೆಯಾಯಿತು. ಕೂಡಲೇ ಲಾಯದಿಂದ ವೇಗವಾದ ಕುದುರೆಗಳನ್ನು ಆರಿಸಿ ತಂದರು. ಅರ್ಜುನನು ರಥವನ್ನು ಸಿದ್ಧಪಡಿಸಿ ಕುದುರೆಗಳನ್ನು ಹೂಡಿದನು. ಸ್ತ್ರೀಯರೆಲ್ಲರೂ ಉತ್ತರ ಕುಮಾರನಿಗೆ ಮಂಗಳಾರತಿ ಯನ್ನೆತ್ತಿದರು. ಅವನು ಸರ್ವಾಲಂಕಾರ ಭೂಷಿತನಾಗಿ ಬಂದು ರಥವನ್ನೇರಿ ಕುಳಿತನು. ಹೊಂಗೆಲಸದಿಂದ ಸುಂದರವಾಗಿ ಹೊಲಿಯಲ್ಪಟ್ಟಿದ್ದ ಕವಚವನ್ನು ಅರ್ಜುನನಿಗೆ ತೊಟ್ಟು ಕೊಳ್ಳಲಿಕ್ಕೆ ಕೊಟ್ಟನು. ಯುವರಾಜನು ರತ್ನಖಚಿತವಾದ ಕಿರೀಟವನ್ನು ಧರಿಸಿ ಉಕ್ಕಿನ ಜೋಡು ಕವಚವನ್ನು ತೊಟ್ಟು ಕೊಂಡನು.

ಅರ್ಜುನನು ಎಂದಾದರೂ ಕವಚವನ್ನು ತೊಟ್ಟವನೇ ಅಲ್ಲವೆಂದು ತೋರಿಸುವಂತೆ ಅದನ್ನು ತಲೆಕೆಳಗಾಗಿ ತೊಡುವುದಕ್ಕೆ ಹೋದನು. ಅಲ್ಲಿದ್ದ ಹೆಂಗಸರೆಲ್ಲರೂ ಇದನ್ನು ನೋಡಿ ಘೊಳ್ಳೆಂದು ನಕ್ಕು, ಕೈತಪ್ಪಾಳೆ ತಟ್ಟಿದರು. ಅರ್ಜುನನು ನಾಚಿಕೊಂಡವನಂತೆ ತಲೆಯನ್ನು ಬಗ್ಗಿಸಿಕೊಂಡು, ಅಂಗಿಯನ್ನು ಮೇಲು ಮುಖವಾಗಿ ತೊಟ್ಟುಕೊಂಡನು. ಆಗ ಉತ್ತರನು ಆ ಸ್ತ್ರೀಯರನ್ನು ನೋಡಿ, ನಮ್ಮ ಸಾರಥಿಯು ಎಂದೂ ಅಂಗಿ ತೊಟ್ಟವನೇ ಅಲ್ಲ, ಅಭ್ಯಾಸವಿಲ್ಲದ ಕೆಲಸದಲ್ಲಿ ತಪ್ಪು ಹಿಡಿಯಬಾರದು, ಎಂದು ಹೇಳಿ, ಅವನಿಗೆ ತಾನೇ ಅಂಗಿಯನ್ನು ತೊಡಿಸಿದನು. “ಕವಚವನ್ನೇ ತೊಡಲಾರದವನು ಸಾರಥ್ಯವನ್ನು ಹೇಗೆ ಮಾಡುವನು?” ಎಂದು ಹೆಂಗಸರು ಅಂದು ಕೊಳ್ಳುತ್ತಿದ್ದರು. ಆಗ ಉತ್ತರೆಯು ಬೃಹನ್ನಳೆಯನ್ನು ನೋಡಿ, “ಗುರುವರ್ಯಾ! ನಮ್ಮಣ್ಣನು ಯುದ್ಧದಲ್ಲಿ ಶತ್ರುಗಳನ್ನು ಗೆದ್ದು ಬರುವನು. ಆ ಶೂರರ ರತ್ನಾಭರಣಗಳನ್ನೂ ವಸ್ತ್ರಗಳನ್ನೂ ನೀವು ದಯಮಾಡಿ ನನಗೆ ತಂದು ಕೊಡುವಿರಾ?” ಎಂದು ಕೇಳಿದಳು. ಅದಕ್ಕೆ ಆತನು

ಮಗುವೇ ! ಹಾಗೆಯೇ ಆಗಲಿ; ಅಗತ್ಯವಾಗಿ ತಂದುಕೊಡುವೆನು. ಎಂದು ಹೇಳಿ ರಥವನ್ನು ನಡಿಸುತ್ತಾ ಹೊರಟನು. ರಥಾಶ್ವಗಳು ವಾಯುವೇಗದಿಂದ ಓಡುತ್ತಿದ್ದುವು; ಇವರ ಜತೆಯಲ್ಲಿ ಓಡುವುದು ನಮಗೆ ಅಸಾಧ್ಯವೆಂದು ಚತುರಂಗ ಬಲವು ಹೀಗೆಯೇ ಉಳಿಯಿತು. ರಥದ ಕುದುರೆಗಳು ಬಲುವೇಗದಿಂದ ಬಗೆ ಬಗೆಯ ನಡಿಗೆಗಳಿಂದ ಓಡುತ್ತಿದ್ದುವು; ಅವುಗಳ ಪಾದಘಾತದಿಂದ ಎದ್ದ ಧೂಳಿಯು ದಿಶಾ ಮುಖಗಳನ್ನು ಮುಟ್ಟಿತು. ಅರ್ಜುನನು ತನ್ನ ರಥವನ್ನು ಶತ್ರುಸೈನ್ಯದ ಕಡೆಗೆ ನಡಿಸಿದನು.

——;0:——

## ಏಳನೆಯ ಸಂಧಿ.

**ಪ್ರಳಯಕಾಲದ ರುದ್ರನಂತಹ ಬಲಶಾಲಿಯಾದ ಅರ್ಜುನನು ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಹೋಗಿ ಶತ್ರುಸೈನ್ಯದೊಳಕ್ಕೆ ನುಗ್ಗಿದನು.**

ಆ ಬಳಿಕ ಬೃಹನ್ನಳೆಯು ಸಾರಥಿಯಾಗಿ ಉತ್ತರಕುಮಾರನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೋಗುತ್ತಿದ್ದನು. ರಥದಲ್ಲಿ ಕುಳಿತಿದ್ದ ಉತ್ತರನು ಶತ್ರುಸೈನ್ಯದಲ್ಲಿದ್ದ ಕುಂತಗಳನ್ನೂ, ಹರಿತವಾದ ಕತ್ತಿಗಳನ್ನೂ, ಮೇಲಕ್ಕೆತ್ತಿರುವ ಛತ್ರಗಳನ್ನೂ, ಸೂರೇಪಾನಗಳನ್ನೂ ನೋಡಿ ಬೆರಗಾದನು. ಆನೆಗಳ ಗುಂಪೆಂಬ ಒಡ್ಡುಕಲ್ಲುಗಳಿಂದಲೂ, ಕುದುರೆಗಳೆಂಬ ಅಲೆಗಳಿಂದಲೂ, ರಥಗಳೆಂಬ ಸುಳಿಗಳಿಂದಲೂ, ಛತ್ರಗಳೆಂಬ ಬುದ್ಬುದಗಳಿಂದಲೂ, ಕಾಲಾಳುಗಳೆಂಬ ಮೀನುಗಳಿಂದಲೂ, ಬಗೆಬಗೆಯ ವಾದ್ಯಘೋಷವೆಂಬ ಆರ್ಭಟದಿಂದಲೂ ಆ ಕುರುಸೇನೆಯು ಸಮುದ್ರದಹಾಗೆ ಕಾಣುತ್ತಿದ್ದಿತು. ಬಿಚ್ಚುಕತ್ತಿಗಳೆಂಬ ಕಿಡಿಗಳಿಂದಲೂ, ಬಲದದರ್ಪವೆಂಬ ಕೆಂಪುರಿಯಿಂದಲೂ, ಭಟರಸಿಂಹನಾದಗಳೆಂಬ ಛಟಛಟ ಧ್ವನಿಯಿಂದಲೂ, ಬಲವಾಗಿ ಏಳುತ್ತಿರುವ ಧೂಳಿಯೆಂಬ ಹೊಗೆಯಿಂದಲೂ ಕೂಡಿದ ಸೇನೆಯು ಉತ್ತರನ ಕಣ್ಣಿಗೆ

ಕಾಡುಗಿಚ್ಚಿನಂತೆ ಕಾಣಿಸಿತು. ಇದು ಪ್ರಳಯಮೇಘದ ಮೂಲವೋ, ಆನೆಯ ಹಿಂಡೋ, ಸಿಡಿಲಿನ ಗರುಡಿಮನೆಯ ಕಲಕಲಶಬ್ದವೋ, ಪ್ರಳಯದ ಹೊಗೆಯೋ ಆಯುಧಗಳೋ, ಕುಲಪರ್ವತಗಳೆಂಬ ಅಡವಿಯೋ, ಎತ್ತಿರುವ ಧ್ವಜಗಳೋ, ಲೋಕವನ್ನು ನಾಶಮಾಡುವ ಕಡಲೋ, ಕುರುಸೇನೆಯೋ, ಗುರುತಿಸಲಿಕ್ಕಾಗದು. ಮತ್ತು ಇದು ವಿಷದತೊರೆಯೋ, ಮಾರಿಯ ಕುದುರೆಗಳೋ, ಮೃತ್ಯುವಿನ ಗಂಟಲನಾಲಿಗೆಯೋ, ಕಾಲಭೈರವನ ದಂಡೋ, ಯಮನಸೈನ್ಯವೋ, ಕಾಲರುದ್ರನ ಹಣೆಗಣ್ಣಿನ ಬೆಂಕಿಯ ಉರಿಯೋ, ಕೌರವಸೈನ್ಯವೋ, ಎಂದು ಉತ್ತರನು ಅದನ್ನು ನೋಡಿ ಬಹಳವಾಗಿ ಭಯಪಟ್ಟು ನಡುಗಿದನು. ದುಃಖವನ್ನು ಮನದಲ್ಲಿ ತಡೆಯಲಾರದೆ ಆಗ ಸಾರಥಿಯನ್ನು ನೋಡಿ, ಇಂತೆಂದನು.

ಉತ್ತರ:—ಬೃಹನ್ನಳೆಯೇ, ಹಸಿದಿರುವ ಮಾರಿಯ ಎದುರಿಗೆ ಕುರಿಮರಿಯು ನುಗ್ಗಿಬಂದಂತೆ ನನ್ನ ಸ್ಥಿತಿ ಆಯಿತು. ಅಯ್ಯಾ ! ಮುಂದಕ್ಕೆ ಬರಲಾರೆನು ಕುದುರೆಗಳನ್ನು ಓಡಿಸಬೇಡ. ಲಗಾಮನ್ನು ಬಿಗಿದು ಹಿಡಿ; ಚಾಟಿಯನ್ನು ಬಿಸುಡು; ಮಿಸುಕಲಿಕ್ಕೆ ಬಾರದು. ಪ್ರಳಯಕಾಲದ ಯಮನ ಮುಸುಕನ್ನು ತೆಗೆಯಬಹುದೆ ? ಕೌರವನ ಸೈನ್ಯಬಲು ದೊಡ್ಡದು. ಈ ಸೈನ್ಯದ ಎದುರಿಗೆ ನಿಂತು ಕಾದತಕ್ಕ ವೀರರು ಯಾರಿರುವರು ? ಈ ಸೈನ್ಯಕ್ಕೆ ಸಾವಿರ ನಮಸ್ಕಾರವಾದರೂ ಮಾಡುವೆನು, ರಥವನ್ನು ಹಿಂದಿರುಗಿಸು.

ಅರ್ಜು:—ಎಲೈ ಕುಮಾರನೇ ! "ಪ್ರಥಮ ಚುಂಬನದಲ್ಲಿಯೇ ಹಲ್ಲು ಮುರಿಯಿತು" ಎಂಬಹಾಗೆ ಯುದ್ಧಕ್ಕೆ ಪ್ರಾರಂಭಿಸುವುದಕ್ಕೆ ಮುಂಚೆಯೇ ರಣಭೀತಿತೋರಿತೆ ? ಏಕೆ ಹೆದರುತ್ತಿ ? ಧೈರ್ಯದಿಂದಿರು. ನಿಮ್ಮಪ್ಪನ ಕುಲಕ್ಕೆ ಕಳಂಕವನ್ನು ತರಬಹುದೆ ? ಮನಸ್ಸನ್ನು ಸ್ಥಿರಪಡಿಸಿಕೊಂಡು ಕಾದು. ಎಂದು ರಥವನ್ನು ಬೇಗಬೇಗ ಓಡಿಸುತ್ತಿದ್ದನು. ಶತ್ರುಸೇನೆಯ ಹತ್ತಿರಕ್ಕೆ ಬಂದ ಬಂದಹಾಗೆಲ್ಲಾ ಉತ್ತರನ ಮೈ

ಭಯಂಕರವಾಯಿತು. ಅಂಗಗಳೆಲ್ಲ ನಡುಗುತ್ತಿದ್ದುವು. ದುಃಖವು ಉಕ್ಕಿ ಬರುತ್ತಿತ್ತು. ಭಯತಾಪದಿಂದ ಗಂಟಲ ನೀರು ಇಂಗಿತು· ತುಟಿಯೊಣಗಿ ಹೋಯಿತು; ಕಣ್ಣುರೆಪ್ಪೆಗಳು ಸೀದುವು. ಆಗ ಅವನು ತನ್ನ ಕೈಗಳಿಂದ ಮುಖವನ್ನು ಮುಚ್ಚಿಕೊಂಡು, ಬೃಹನ್ನಳೆಯನ್ನು ನೋಡಿ,

ಉತ್ತ:—ಎಲೈ ಸಾರಥಿ ! ಏನಿದು ? ರಥವನ್ನು ಮುಂದಕ್ಕೆ ಬಿಡುತ್ತಿರುವೆ ? ನನ್ನ ಕೊರಳು ಕೊಯ್ಯುತ್ತೀಯಾ ? ಸುಡು ಸುಡು, ಕಣ್ಣುಗಳು ಒಡೆದು ಹೋದುವಲ್ಲಾ ! ಈ ಮಹತ್ಸೈನ್ಯವನ್ನು ನೋಡಿದೆಯಾ ? ದೇವತೆಗಳಿಗೆ ಸುದಾ ಅಸಾಧ್ಯವಾಗಿದೆ, ನಮ್ಮಿಂದ ತಡೆಯಲಾದೀತೆ ? ನಿನಗೆ ಬುದ್ಧಿ ಇಲ್ಲ. ಸಾಕು, ಲಗಾಮನ್ನು ಬಿಗಿ ಹಿಡಿ; ಕುದುರೆಗಳನ್ನು ಹಿಂದಿರುಗಿಸು.

ಅರ್ಜುನನು ಉತ್ತರಕೊಡದೆ, ಮುಂದಕ್ಕೆ ಹತ್ತೆಂಟು ಅಡಿಗಳ ದೂರ ರಥವನ್ನು ಓಡಿಸಿದನು. ಉತ್ತರನು ಕೈಯಲ್ಲಿ ಹಿಡಿದಿದ್ದ ಬಿಲ್ಲಂಬುಗಳು ಜಾರಿ ಕೆಳಕ್ಕೆ ಬಿದ್ದುವು. ಆಗ

ಉತ್ತ:—ಅಯ್ಯೋ ಸಾರಥಿ! ಕುದುರೆಗಳನ್ನು ಹಿಡಿದು ನಿಲ್ಲಿಸು· ನಿನಗೆ ಎಷ್ಟು ಹೇಳಬೇಕು? ನಾವು ನಿನಗೆ ಒಡೆಯರಲ್ಲವೆ! ಶತ್ರುಗಳೆಂದು ತಿಳಿದಿರುವೆಯಾ ? ಸ್ವಾಮಿದ್ರೋಹಿಯಾಗುವೆಯಾ? ಚೆನ್ನಾಯಿತು.

ಅರ್ಜುನನು ನಸುನಗುತ್ತಾ ರಥವನ್ನು ಇನ್ನೂ ಹತ್ತೆಂಟು ಅಡಿಗಳದೂರಕ್ಕೆ ಓಡಿಸಿದನು.

ಉತ್ತ:—ಅಯ್ಯೋ ! ಸಾರಥಿ ! ನನ್ನನ್ನು ಕೊಲ್ಲುತ್ತೀಯಾ ! ಸಾಕು.

ಎಂದು ಹೇಳಿ ದೋತ್ರದ ಸೆರಗನ್ನು ಬಿಗಿದು ಕಟ್ಟಿ, ಮೆಲ್ಲಗೆ ರಥದ ಹಿಂದುಗಡೆಗೆ ಬಂದು, ನಿಂತು ಕೆಳಕ್ಕೆ ಧುಮುಕಿ ''ಬದುಕಿದೆನು ಬಡಜೀವವೇ'' ಎಂದು ಬಿಟ್ಟ ಮಂಡೆಯಿಂದ ಕೂದಲು ಕೆದರಿಕೊಂಡು ನಿಟ್ಟೋಟದಲ್ಲಿ ಓಡಿದನು. ಈ ಹೇಡಿಯು ಹೀಗೆ ಓಡಿಹೋಗುತ್ತಿರು

ವುದನ್ನು ನೋಡಿ, ಅರ್ಜುನನು ‘‘ಛೀ ಪಾಪಿ! ಓಡಬೇಡ, ನಿಲ್ಲು’’ ಎಂದು ಅವನನ್ನು ಹಿಡಿದುಕೊಳ್ಳುವುದಕ್ಕೆ ತಾನೂ ಕೆಳಕ್ಕೆ ಧುಮುಕಿದನು. ಆ ಶಬ್ದಕ್ಕೆ ನೆಲವದುರಿತು ; ಆದಿಶೇಷನು ಹೆದರಿದನು.

ಇದನ್ನು ನೋಡಿ ಕೌರವರ ಸೈನ್ಯವು ನಗೆಯ ಕಡಲಲ್ಲಿ ಮುಳುಗಿ ‘‘ಎಲಎಲಾ ! ಇದೇನು ಆಶ್ಚರ್ಯ ! ಕಾದಲಿಕ್ಕೆ ಬಂದ ವೀರನು ಹೆದರಿ ಹಿಂದಕ್ಕೆ ಓಡಿ ಹೋಗುತ್ತಿರುವನು. ಅವನನ್ನು ಹಿಡಿಯಲಿಕ್ಕೆ ಬೆನ್ನು ಹತ್ತಿ ಓಡುವ ವೀರನು ಯಾರೋ ಸುಭಟನಾಗಿ ಕಾಣುತ್ತಿದ್ದಾನೆ. ಇವನು ಯಾರಾಗಿರಬಹುದು, ಆಕಾರದಲ್ಲಿ ನೋಡಿದರೆ ಅರ್ಜುನನನ್ನು ಹೋಲುವನು’’ ಎಂದು ಪಿಸು ಮಾತುಗಳಾಡಿಕೊಳ್ಳುತ್ತಿದ್ದರು. ಕರ್ಣನು ಇದನ್ನು ನೋಡಿ, ‘‘ಆಹಾ ! ಒಳ್ಳೇ ಸಂದರ್ಭ ! ಸಿಕ್ಕಿತು. ಈ ಸಾರಥಿಯೇ ಅರ್ಜುನನ, ರಥದಲ್ಲಿ ಕುಳಿತಿದ್ದವನು ಉತ್ತರನು, ಇದರಲ್ಲಿ ಸಂಶಯವಿಲ್ಲ. ಅರ್ಜುನನಿಗೆ ಈ ಸಾರಥ್ಯವೂ ಶಿಖಂಡಿಯ ರೂಪವೂ ಹೇಗೆ ಬಂದುವೋ ತಿಳಿಯದು. ಇವನು ಅರ್ಜುನನೇ ಆಗಲಿ. ಅವರಪ್ಪನಾದ ಇಂದ್ರನೇ ಆಗಲಿ, ಪರಶುರಾಮನೇ ಆಗಲಿ, ನನ್ನ ಮುಂದೆ ಬಂದರೆ ಕೈಬಲ ತೋರಿಸುವೆನು’’ ಎಂದು ಸಿಟ್ಟಿನಿಂದ ನುಡಿದನು.

ಅರ್ಜು:—(ಉತ್ತರನ ಹಿಂದೆ ಓಡಿಬಂದು) ಎಲೈ ಉತ್ತರನೇ ! ಹೋಗಬೇಡ, ನಿಲ್ಲು ಮುಂದಕ್ಕೆ ಅಡಿ ಇಟ್ಟರೆ ಈ ಕತ್ತಿಯಿಂದಲೇ ನಿನ್ನ ತಲೆಕಡಿದು ಬಿಡುವೆನು.

ಉತ್ತ:—(ಹಿಂದಿರುಗಿ ನೋಡಿ) ಅಯ್ಯಾ! ನೀನು ಮೃತ್ಯುವೋ ಸಾರಥಿಯೋ, ನನ್ನ ಪ್ರಾಣ ತೆಗೆಯುವುದಕ್ಕೆ ಬಂದೆಯಾ? (ತನ್ನಲ್ಲಿ)— ಈ ಪಾಪಿಯನ್ನು ಏತಕ್ಕೆ ತಂದೆನಪ್ಪಾ! (ಎಂದು, ಅಲ್ಲಿನಿಲ್ಲದೆ ಮೆಲ್ಲಗೆ ಓಡಿದನು.)

ಅರ್ಜು:—(ಓಡಿಬಂದು, ನೂರು ಹೆಜ್ಜೆಗಳಲ್ಲಿ ಉತ್ತರನನ್ನು

ಹಿಡಿದು) ಎಲಾ ಪಾಪಿ ! ಎಂತಹ ಕೆಲಸಮಾಡಿದೆ ? ನೀನು ಕ್ಷತ್ರಿಯ ಪುತ್ರನೋ ಅಥವಾ ಅನ್ಯಥಾ ಭಾವಿಸಬೇಕೋ? ಅಂತಃಪುರದಲ್ಲಿ ಹೆಂಗಸರಮುಂದೆ ಧೈರ್ಯದಿಂದ ಜಂಭವನ್ನು ಕೊಚ್ಚಿಕೊಂಡೆಯಲ್ಲಾ ! ಇಲ್ಲಿ ಶತ್ರುಗಳೆದುರಿಗೆ ಹೀಗೆ ಓಡಿಹೋಗುತ್ತಿರುವೆ ! ಛೀ ದುರಾತ್ಮನೇ! ವಿರಾಟರಾಯನ ವಂಶವನ್ನು ಕೆಡಿಸಿದೆಯಾ ?

ಉತ್ತ:—(ಹಲ್ಲು ಕಿರಿದು ಬಾಯಲ್ಲಿ ಬೆರಳಿಟ್ಟುಕೊಂಡು, ಹೆದರಿಕೆಯಿಂದ ತಲೆಬಗ್ಗಿಸಿ) ಅಯ್ಯಾ! ಸಾರಥಿಯೇ ! ನಿನ್ನ ಕಾಲಿಗೆಬೀಳುವೆನು. ನನ್ನನ್ನು ಕಳುಹಿಸಿಬಿಡು. ದಮ್ಮಯ್ಯಾ! ನಿನ್ನಹೊಟ್ಟೆಯಲ್ಲಿ ಮರಳಿ ಹುಟ್ಟಿಬರುವೆನು. ರಣರಂಗದಲ್ಲಿ ಈ ಶತ್ರುಗಳನ್ನು ಜಯಿಸುವ ವೀರರುಂಟೆ? ಪರರಿಂದ ನನ್ನನ್ನು ಏಕೆ ಕೊಲ್ಲಿಸುವೆ ? ಇಗೋ, ಈ ಕತ್ತಿಯನ್ನು ತೆಗೆದುಕೋ, ನೀನೇ ನನ್ನ ಕೊರಳನ್ನು ಕೊಯ್ದುಬಿಡು.

ಅರ್ಜು:—(ಹೊಟ್ಟೆ ಒಡೆಯುವಹಾಗೆ ನಕ್ಕು) ಎಲಾ ಕುನ್ನಿ! ಅಂತಃಪುರದಲ್ಲಿ ಹೆಂಗಸರ ಎದುರಿಗೆ ಬಾಯಿಗೆಬಂದಹಾಗೆ ಬಗುಳಿದೆಯಲ್ಲಾ ! ಈಯುದ್ಧದಲ್ಲಿ ನಿನಗೆ ಏನಾಯಿತು? ಶತ್ರು ಸೈನ್ಯವನ್ನು ಕೊಲ್ಲದೆ ನಾಡುನರಿಯಹಾಗೆ ನನ್ನಲ್ಲಿ ಹಲ್ಲು ಕಿರಿದರೆ ಬಿಟ್ಟುಬಿಡುವೆನೆಂದು ತಿಳಿದಿರುವೆಯಾ ? ಕಾದು ನಡಿ. ನಿನಗೆ ನಾಚಿಕೆಯಾದರೂಬೇಡವೆ ? ವೀರರು ಹೀಗೆ ಜೀವಗಳ್ಳರ ದಾರಿ ತುಳಿಯುವರೆ ? ಕ್ಷತ್ರಿಯರಲ್ಲಿ ಯಾರಾದರೂ ಹೀಗೆ ಬೆನ್ನುಕೊಟ್ಟು ಓಡುವರೆ ? ನನಗೇನೋ ಸಂದೇಹವಾಗಿದೆ. ನಪುಂಸಕನಾದ ನನ್ನನ್ನು ನೋಡು. ಸಾವಿಗೆ ಅಂಜಬಾರದು. ಬಾ. ಬಾ.

ಉತ್ತರ:—ಅಯ್ಯಾ ! ನೀವು ವೀರರು. ನಾವೇ ನಪುಂಸಕರು. ನಾವು ಸಾಯುವವರಲ್ಲ. ಜೀವಗಳ್ಳರಿಗೆ ನಾವು ಗುರುಗಳು, ನಮ್ಮನ್ನು ಬಿಟ್ಟುಬಿಡು. ನಿನ್ನನ್ನು ದೈನ್ಯದಿಂದ ಕೇಳಿಕೊಳ್ಳುವೆನು. ದಮ್ಮಯ್ಯಾ ! ದತ್ತಯ್ಯಾ!

ಅರ್ಜುನ:—ಎಲಾ ಏಕೆ ಹೀಗೆಹೇಳುವೆ ? ನೀನು ಹರುಕನೆ ? ನಿಮ್ಮಪ್ಪನು ರಾಜಾಧಿರಾಜನಲ್ಲವೆ ? ಅಂತವನ ಮಗನಾದ ನೀನು ಕಾದಿ ಗೆಲ್ಲುವುದಕ್ಕೆ ಇದಲ್ಲದೆ ಇನ್ನು ಯಾವುದು ಸಮಯ ? ತುಂಬಿದಪ್ರಾಯ, ಅಂದವಾದರೂಪು, ಕ್ಷತ್ರಿಯಕುಲ, ಯುವರಾಜನು, ನೀನು ಹೀಗೆ ಓಡಿಹೋದರೆ ಸೂರ್ಯಚಂದ್ರರಿರುವವರೆಗೂ ಈ ಲೋಕ ದಲ್ಲಿ ನಿನಗೆ ಅಪಕೀರ್ತಿ ತಪ್ಪುವುದೇ ? ಎಲಾ ನರಗುರಿಯೇ ! ನಡೆ, ಕಾಳಗಕ್ಕೆ ಹೋಗೋಣ. ( ಎಂದು ಉತ್ತರನನ್ನು ಹಿಡಿದೆಳೆದು ) ಎಲೈ ರಾಜಪುತ್ರನೇ ! ಕ್ಷತ್ರಿಯನು ಯುದ್ಧದಲ್ಲಿ ಹಿಮ್ಮೆಟ್ಟಿಹೋದರೆ ಹೆಜ್ಜೆ ಹೆಜ್ಜೆಗೂ ಮಹಾಪಾತಕತಪ್ಪದು. ಅಡಿಯನ್ನು ಮುಂದಿಟ್ಟು ಕಾದಿದರೆ ಅಶ್ವಮೇಧಯಾಗಮಾಡಿದ ಫಲಬರುವುದು. ರಣದಲ್ಲಿ ಮಡಿ ದರೆ ವೀರಸ್ವರ್ಗವು ದೊರಕುವುದು. ದೇವಲೋಕದಸ್ತ್ರೀಯರು ತೊತ್ತಿ ರುಗಳಾಗುವರು. ಅಂತಹ ವೀರನು ಇಂದ್ರಲೋಕವನ್ನಾಳುವನು.

ಉತ್ತರ:—ಸಾರಥಿ ! ಯುದ್ಧದಲ್ಲಿ ಓಡಿಹೋದ ಪಾಪವನ್ನು ನಾವು ಬ್ರಾಹ್ಮಣರಿಂದ ಪರಿಹಾರಮಾಡಿಕೊಳ್ಳಬಹುದು. ಈ ಭೂಮಿ ಯಲ್ಲಿಯೇ ನಾವು ಪ್ರತ್ಯಕ್ಷವಾಗಿ ಅಶ್ವಮೇಧ ಯಾಗವನ್ನು ಮಾಡಿ ವೀರರಿಗೆ ಸಿಕ್ಕುವ ಸ್ವರ್ಗದ ಫಲವನ್ನು ಪಡೆಯಬಹುದು. ನಮಗೆ ಸುರಲೋಕದ ಸತಿಯರು ಬೇಡ. ನಮ್ಮ ರಾಣಿವಾಸದಲ್ಲಿರುವ ಹೆಂಗ ಸರೇ ಅವರಿಗಿಂತಲೂ ಉತ್ತಮರೆಂದು ತಿಳಿದಿದ್ದೇನೆ ! ನಮ್ಮ ಅರಸು ತನವೇ ನಮಗೆ ಇಂದ್ರಪದವಿ. ನನ್ನನ್ನು ಬಿಟ್ಟುಕಳುಹಯ್ಯಾ ! ನಿನಗೆ ನಮಸ್ಕರಿಸುವೆನು.

ಅರ್ಜುನ:—ಎಲಾ ಭ್ರಷ್ಟಾ ! ನೀನು ಹೆಚ್ಚಾದ ಸೈನ್ಯವುಳ್ಳ ವನು ಬಾಹುಬಲವುಳ್ಳವನು. ಅಂತಃಪುರದಲ್ಲಿ ಹೆಂಗಸರಮುಂದೆ ಪರಟೆಯುಮಲ್ಲನಾಗಿ ಬಾಯಿಗೆಬಂದಹಾಗೆಲ್ಲಾ ಒದರಿದೆ. ಇಲ್ಲಿಗೆ ಬಂದಮೇಲೆ ಶತ್ರುಸೈನ್ಯದೊಳಗೆ ಇನ್ನೂ ಪ್ರವೇಶಿಸಲೇ ಇಲ್ಲ. ಬಾಣ

ಗಳನ್ನೂ ಪ್ರಯೋಗಿಸಲಿಲ್ಲ. ಗಾಯಗಳನ್ನೂ ಪಡೆಯಲಿಲ್ಲ. ಏನೂ ಮಾಡದೆ ಹೀಗೆ ಕಾಲಿಗೆ ಬುದ್ಧಿಹೇಳುತ್ತಿರುವೆ. ನೀನು ಓಲಗದಲ್ಲಿ ನಾಚಿಕೆಯಿಲ್ಲದೆ ಹೇಗೆ ಮುಖತೋರಿಸುವೆ?

ಉತ್ತರ:—ಎಲೈ ಸಾರಥಿಯೇ! ಕ್ಷುದ್ರಕಾರಣವಾದ ನಾಚಿಕೆಗೋಸ್ಕರ ಜೀವಾಶ್ರಯವಾದ ತಲೆಯನ್ನು ಕಡಿದುಕೊಳ್ಳಬೇಕು! ಎಂಬ ಗಾದೆಯನ್ನು ಇಲ್ಲಿ ಹೊದ್ದಿಸಬೇಡ. ನಾವು ಕಾಳಗವೆಂದರೆ ಅಂಜುವೆವು. ನೀನೇ ಶೂರನು. ನೀನು ಶತ್ರುವಿನಂತೆ ನನ್ನ ಪಾಲಿಗೆ ಮೃತ್ಯುವಾಗಬಹುದೆ? ನೀನು ಬೇಡಿದ್ದೆಲ್ಲಾ ಕೊಡುವೆನು. ಅಕ್ಕರೆಯಿಂದ ಸಲಹುವೆನು. ಈವೇಳೆಯಲ್ಲಿ ನನ್ನನ್ನು ಜೀವದೊಂದಿಗೆ ಬಿಟ್ಟುಬಿಡು.

ಅರ್ಜುನ:—(ಉತ್ತರನಮಾತು ಕೇಳದವನಹಾಗೆ ಇದ್ದನು)

ಉತ್ತರ:—ಎಲೈ ಬೃಹನ್ನಳೆಯೇ! ನನ್ನ ಮಾತಿನಲ್ಲಿ ನಿನಗೆ ತಾಳಿಕೆಇಲ್ಲವೆ! ನಿನಗೆ ಬೇಕಾದಷ್ಟು ಕುದುರೆಗಳನ್ನು ಕೊಡುವೆನು. ಆನೆಗಳನ್ನು ಕೊಡುವೆನು. ರತ್ನಾಭರಣಗಳನ್ನು ಕೊಡುವೆನು. ರಥಗಳು ಎಷ್ಟುಬೇಕು? ಸ್ತ್ರೀಜನರು ಎಷ್ಟುಬೇಕು? ಎಲ್ಲವನ್ನೂ ಅರಮನೆಯಲ್ಲಿಕೊಟ್ಟು ನಿನ್ನನ್ನು ತೃಪ್ತಿಗೊಳಿಸುವೆನು. ನಮ್ಮಯ್ಯನು ಇಷ್ಟು ದಿನಗಳತನಕ ನಿನ್ನನ್ನು ಸಲಹಲಿಲ್ಲವೆ? ಆ ಕೃತಜ್ಞತೆಯಾದರೂ ಬೇಡವೆ! ಕೈಮುಗಿದೊಡನೆ ಕೇಡನ್ನು ತೋರುವೆಯಾ! ನಿನ್ನ ಮನಸ್ಸು ಕಲ್ಲಾಗಿದೆಯಲ್ಲಾ! ದಮ್ಮಯ್ಯಾ! ನನ್ನನ್ನು ಕರುಣಿಸು.

ಅರ್ಜುನ:—ಛೀ ಹೇಡಿ! ಏಕೆ ಶೂರನಾದ ವಿರಾಟರಾಯನ ಕುಲದಲ್ಲಿ ಹುಟ್ಟಿದೆ? ನಿನ್ನಂತೆ ಈ ಶರೀರಕ್ಕೆ ಕಕ್ಕುಲತೆಪಟ್ಟು ಯುದ್ಧದಲ್ಲಿ ಮುಂದುವರಿಯದೆ, ಹೀಗೆ ಹೆದರಿ ಓಡಿದವರು ಹಿಂದೆ ಯಾರೂ ಇರಲಿಲ್ಲ. ಮುಂದೆ ಒಬ್ಬರಾದರೂ ಹುಟ್ಟಲಾರರು. ಇಂತಹ ಬಂಜೆಮಾತನ್ನು ವೀರರು ನುಡಿಯಬಹುದೆ? ಸುಡು ಸುಡು. ಎಲಾ ರಾಜಬಾಹಿರನೆ! ಧೈರ್ಯವನ್ನು ತಂದುಕೊ! ನೀನು ಕಾದ

ಬೇಡ. ಶತ್ರುಸೇನೆಗೆ ಎದುರಾಗಿ ನಿಂತು ನಾನೇ ಯುದ್ಧಮಾಡುವೆನು. ರಥದಬಳಿಗೆ ನಡೆ. ನೆಪಮಾತ್ರಕ್ಕೆ ನೀನು ನನ್ನ ರಥವನ್ನು ನಡಿಸಿ ಕೊಂಡುಬಾ. ನಿನ್ನ ಮನಸ್ಸಿನ ಚಿಂತೆಯನ್ನು ಬಿಟ್ಟು ನನಗೆ ಸಾರಥಿ ಯಾಗು ನಡೆ.

ಉತ್ತ:—(ನಕ್ಕು) ಎಲೆ ಬೃಹನ್ನಳೆಯೇ ! ಕೈಗೆ ಬಳೆ ತೊಟ್ಟಿ ರುವ ನಿನಗೆ ಪೌರುಷವೆಲ್ಲಿಂದ ಬಂತು ? ನೀನು ಮೊದಲು ಯಾವ ರಾಜ ನೊಂದಿಗೆ ಕಾದಿ ಗೆದ್ದೆ ? ನಾಟಕ ವಿದ್ಯೆಯಲ್ಲ, ಇದು ಘೋರವಾದ ಯುದ್ಧವಿದ್ಯೆ, ನನ್ನಂತಹ ರಾಜಕುಮಾರನಿಗೇನೇ ಅಸಾಧ್ಯವಾಗಿದೆ! ಶಿಖಂಡಿಯಾದ ನಿನಗೆ ಸಾಧ್ಯವೆ ? ನೀನು ನನ್ನನ್ನು ಸಾರಥಿಯಾಗಿ ಮಾಡಿಕೊಂಡು ಗೆಲ್ಲುವುದೆಂದರೆಏನು? ಇದು ಹಾಸ್ಯದಮಾತು! ಅನ್ಯರ ಮನಸ್ಸನ್ನು ನೋಡಬಹುದೇ ಹೊರತು ತನ್ನ ಮನಸ್ಸನ್ನು ತಾನು ಕಾಣುವುದಕ್ಕೆ ಆದೀತೆ ? ಈ ಕಪಟ ವಿದ್ಯೆಯೆಲ್ಲಾ ನಮಗೆ ಗೊತ್ತಿದೆ. ಸಾಕು. ನಮ್ಮನ್ನು ಬಿಟ್ಟು ಕಳುಹು.

ಅರ್ಜು:—ಎಲಾ ಜೀವಗಳ್ಳಾ ! ಹೆಚ್ಚು ಮಾತುಗಳಾಡಿದರೆ ನಿನ್ನ ಕಟವಾಯಿ ಕೊಯ್ಯುವೆನು. ನನಗೆ ಸಾರಥಿಯಾಗಿ ಕೆಲಸಮಾಡು. ನಡೆ, ಈ ಶತ್ರು ರಾಜರನ್ನು ಕೊಂದು ಕೆಡಹುವೆನು, ನಿನ್ನ ಆಣೆ, ಫಲಿ ತಾಂಶವನ್ನು ನೋಡಿ ನೀನೇ ಸಂತೋಷಪಡುವೆ, ಹೆದರಬೇಡ.

ಆಮೇಲೆ (ಉತ್ತರನ ಹೆಡತಲೆಯನ್ನು ಅಮುಕಿ ಹಿಡಿದುತಂದು ರಥ ದಮೇಲೆ ಹತ್ತಿಸಿ) ಎಲೈ ಉತ್ತರನೇ ! ಅಂಜಬೇಡ, ಯುದ್ಧದಲ್ಲಿ ಶತ್ರು ಗಳನ್ನು ಓಡಿಸುವೆನು. ಸೈನ್ಯವನ್ನೆಲ್ಲಾ ಕೊಂದುಹಾಕಿ ಯಮಪುರವ ನ್ನು ತುಂಬುವೆನು. ಧೈರ್ಯದಿಂದ ರಥವನ್ನು ನಡಿಸು. ಎಂದು ಹುರಿದುಂ ಬಿಸಿ, ಹತ್ತಿರ ಇದ್ದ ಬನ್ನಿಯಮರದ ಬಳಿಗೆ ಅವನನ್ನು ಕರೆದೊಯ್ದು) ಎಲೈ ಕುಮಾರನೇ ! ಈ ಮರವನ್ನು ಹತ್ತು. ಇದರಲ್ಲಿ ಪಾಂಡವರು ಇರಿಸಿಹೋದ ಅಸ್ತ್ರ ಶಸ್ತ್ರಗಳಿವೆ, ಭಯಂಕರವಾದ ಅವುಗಳ

ರೂಪಕ್ಕೆ ಹೆದರಬೇಡ. ಸೈರಿಸಿಕೊಂಡು ಅವುಗಳನ್ನು ತೆಗೆದು ನನ್ನ ಕೈಗೆ ಕೊಡು.

ಉತ್ತ:—(ಮರವನ್ನೇರಿನೋಡಿ ಹೆದರಿ) ಎಲೈ ವೀರನೇ, ಇಲ್ಲಿ ಹೆಣವು ಕಟ್ಟಿಡಲ್ಪಟ್ಟಿದೆ. ರಾಜಕುಮಾರರು ಇದನ್ನು ಮುಟ್ಟಕೂಡದು. ಇದರ ಹೊರತು ಬೇರೆ ಯಾವ ಕೆಲಸವನ್ನು ಮಾಡಹೇಳಿದರೂ ಮಾಡುವೆನು. ಇದುಮಾತ್ರ ನನ್ನಿಂದ ಆಗದು.

ಬೃಹ:—ಕುಮಾರನೇ ! ಅನ್ಯಥಾ ತಿಳಿಯಬೇಡ. ರಹಸ್ಯವನ್ನು ಹೇಳುವೆನು ಕೇಳು. ಪಾಂಡವರು ತಮ್ಮ ಆಯುಧಗಳನ್ನು ಇದರಲ್ಲಿ ಕಟ್ಟಿ, ಇತರರಿಗೆ ತಿಳಿಯಭಾರದೆಂದು ಮೇಲುಗಡೆ ಚರ್ಮವನ್ನು ಸುತ್ತಿ ಹೆಣದ ಆಕಾರವಾಗಿ ಮಾಡಿ ಇಲ್ಲಿ ಇಟ್ಟಿರುವರು. ಇದು ಹೆಣವಲ್ಲ. ತೆಗೆದು ಕೊಡು.

ಉತ್ತ:—(ತನ್ನ ಸೆರಗನ್ನೆತ್ತಿ ಕಟ್ಟಿಕೊಂಡು, ಭಯವನ್ನು ಬಿಟ್ಟು ಮರದ ತುದಿಗೆ ಹತ್ತಿ ಹಗ್ಗಗಳನ್ನು ಕೊಯ್ದನು. ಆಯುಧಗಳ ಕಾಂತಿರೂಪವಾದ ಜ್ವಾಲೆಯು ಮುಖಕ್ಕೆ ಬಡಿಯಲು ಚಹಳವಾಗಿ ಹೆದರಿ) ಅಯ್ಯಾ ಬೃಹನ್ನಳೇ ! ಇದೇನು ಹೀಗೆ ಕಾಣುತ್ತಿದೆ? ಇವು ಕಾಲಸರ್ಪನ ನಾಲಿಗೆಗಳೋ ! ಬಾಣಗಳೋ ! ಪ್ರಳಯಕಾಲದ ಅಗ್ನಿಜ್ವಾಲೆಯೋ! ಆಯುಧಗಳೋ! ವಿಲಯಕಾಲದ ಯಮನ ಕೋರೆದಾಡೆಗಳೋ ! ಅಸ್ತ್ರಗಳೋ! ಇವುಗಳನ್ನು ತೋಳುಗಳಲ್ಲಿ ಧರಿಸುವುದಕ್ಕೆ ಸಾಧ್ಯವೇ ? ಅಯ್ಯಾ ಮಹಾತ್ಮನೇ ! ನನ್ನ ಕಣ್ಣುಗಳು ಸೀದುಹೋದುವು. ನನ್ನನ್ನು ಕೆಡಿಸಿ ಕೊಲ್ಲುತ್ತೀಯಾ ?

ಹೀಗೆ ಎನ್ನುತ್ತಾ, ಹೊಳೆಯುತ್ತಿರುವ ಹರಿತವಾದ ಕತ್ತಿಗಳ ಬೆಳಕನ್ನೂ ಬಾಣಗಳ ಕಾಂತಿಯನ್ನೂ ನೋಡಲಾರದೆ ಕಣ್ಣು ಮುಚ್ಚಿಕೊಂಡು, ಉತ್ತರನು ಆತನಿಗೆ ಕೈಮುಗಿದು ಮತ್ತಿಂತೆಂದನು.

ಉತ್ತ:—ಎಲೈ ಸಾರಥಿಯೇ ! ಬಾಣಗಳಿಗೆ ಸಿಕ್ಕಿಹೋದೆನು.

ನನ್ನನ್ನು ಬಿಡಿಸಿಕೊಳ್ಳಯ್ಯಾ! ಎಲೈ ಮಹಾತ್ಮನೆ! ಅಶಕ್ತನಾದ ನಾನು ಹಾವು ತುಂಬದ ಕೊಡವನ್ನು ಹಿಡಿಯಬಹುದೆ? ಇವು ನಿನ್ನ ಆಯುಧಗಳೇ? ಬಂಸಿಡಿಲಿನಂತೆ ಸುಡುತ್ತಿವೆಯಲ್ಲಾ? ಕೈಯಿಕ್ಕ ಲಿಕ್ಕೆ ಭಯವಾಗುತ್ತಿದೆ. ನನ್ನಿಂದ ಆಗದು.

ಬೃಹ:—ಉತ್ತರನೇ! ಹೆದರಬೇಡ, ಅರ್ಜುನನನ್ನು ಮನಸ್ಸಿನಲ್ಲಿ ಧ್ಯಾನಿಸಿ ಅವುಗಳನ್ನು ತೆಗೆದುಕೋ, ನಿನಗೆ ವಶವಾಗುವುವು.

ಉತ್ತರ:—ಅರ್ಜುನನನ್ನು ಭಕ್ತಿಯಿಂದ ಸ್ಮರಿಸಿದನು ಅನಂತರ ಗಟ್ಟಿಯಾಗಿ ಕಿರಚಿಕೊಂಡು ತನ್ನ ಬಲವನ್ನೆಲ್ಲಾ ಉಪಯೋಗಿಸಿ, ಅಮುಕಿ ಮೈಯನ್ನು ಒಲಿದು, ಬೆವರುಹಿಡಿದು ಬಳಲಿ ಬೆಂಡಾಗಿ ಗಾಂಡೀವವನ್ನು ತೆಗೆದು ಅರ್ಜುನನಕೈಗೆ ಕೊಟ್ಟನು. ಬಳಿಕ ಸಾಮರ್ಥ್ಯದಿಂದ ಹಲ್ಲು ಕಚ್ಚಿಕೊಂಡು, ಉಳಿದ ಬಾಣಗಳನ್ನೂ ಒಂದೊಂದಾಗಿ ತೆಗೆದು ಅರ್ಜುನನಕೈಗೆ ಕೊಡುತ್ತಾ, ಅಲ್ಲಿಯೇ ಮಲಗಿ ದಗೆಯಿಂದ ಅಳ್ಳೆ ಹೊಯ್ದುಕೊಂಡು, ಆ ವೀರನನ್ನು ಕುರಿತು ಇಂತೆಂದನು.

ಎಲೈ ಬೃಹನ್ನಳೆಯೇ, ಬೆಟ್ಟವನ್ನಾದರೂ ಎತ್ತಬಹುದು. ಈ ಬಿಲ್ಲುಗಳನ್ನು ಕದಲಿಸಲಿಕ್ಕಾಗದು. ಇಂತವುಗಳನ್ನು ನೀನು ಧರಿಸಬಲ್ಲೆಯಾ? ನಿನಗೆ ಶರಣು. (ಎಂದು ಬಾಣಗಳನ್ನೂ, ಬತ್ತಳಿಕೆಯನ್ನೂ, ದೇವದತ್ತವೆಂಬ ಶಂಖವನ್ನೂ, ಪರಶು, ತೋಮರ, ಕುಂತ, ಕತ್ತಿ, ಮುದ್ಗರ, ಗದೆ, ದಂಡ ಮುಂತಾದ ಶಸ್ತ್ರಗಳನ್ನೂ ಅವನಕೈಗೆ ತೆಗೆದುಕೊಟ್ಟನು. ಆಬಳಿಕ ಆತನು ಅರ್ಜುನನನ್ನು ಕುರಿತು—ಎಲೈ ಸಾರಥಿಯೇ! ಈ ಬಿಲ್ಲು ಯಾವನ ತೋಳಿಗೆ ಸರಿಯಾಗುವುದು? ಈ ಮಹಾಸ್ತ್ರಗಳು ಯಾರಿಗೆ ವಶವಾಗಿರುವುವು? ಈ ಬಿಲ್ಲುಗಳು ಯಾರವು? ಯುದ್ಧಕಾಲಗಳಲ್ಲಿ ಇವುಗಳನ್ನು ಉಪಯೋಗಿಸತಕ್ಕವರು ಯಾರು? ಈ ಶ್ರೇಷ್ಠವಾದ ಆಯುಧಗಳು ಯಾರವು? ನನ್ನ ಮನಸ್ಸಿಗೆ ಸಂಶಯ ತೋರದಂತೆ ಹೇಳಬೇಕೆಂದು ಬೇಡುವೆನು.

ಬೃಹನ್ನಳೆ:—ಎಲೈ ಕುಮಾರನೇ! ಇದೇ ಗಾಂಡೀವವೆಂಬ ಮಹಾಧನುಸ್ಸು, ಇದು ಅರ್ಜುನನದು. (ಒಂದೊಂದಾಗಿ ತೆಗೆದು ತೋರಿಸಿ) ಇದು ಧರ್ಮರಾಯನ ಬಿಲ್ಲು. ಇದು ಭೀಮನ ಬಿಲ್ಲು. ಇವು ನಕುಲಸಹದೇವರ ಧನುಸ್ಸುಗಳು. ಈ ದೊಡ್ಡಗದೆಯು ಭೀಮಸೇನನದು. ಇವು ಅರ್ಜುನನ ಬಾಣಗಳು. (ಎಂದು ಬತ್ತಳಿಕೆಗಳನ್ನೂ, ಬಿಲ್ಲುಗಳನ್ನೂ, ಬಾಣಗಳನ್ನೂ, ಶಂಖಗಳನ್ನೂ, ಖಡ್ಗಗಳನ್ನೂ, ಕವಚ, ಶಿರಸ್ತ್ರಾಣ, ಬಿರುದು ಧ್ವಜಗಳನ್ನೂ ವಿವಿಧ ಶಸ್ತ್ರಾಸ್ತ್ರಗಳನ್ನೂ ವಿವರಿಸಿ ಹೇಳಿದನು.)

ಉತ್ತರ:—(ಆಶ್ಚರ್ಯದಿಂದ-ತನ್ನಲ್ಲಿ-ಈ ಸಾರಥಿಯು ಯಾರಿರಬಹುದೆಂದು ಯೋಚಿಸಿ, ಬಗೆ ಹರಿಯದೆ ಆತನನ್ನು ಕುರಿತು) ಬೃಹನ್ನಳೆಯೇ! ನೀನು ಯಾರು? ಅರ್ಜುನನೋ—ಭೀಮಸೋ—ಧರ್ಮರಾಯನೋ—ನಕುಲನೋ—ಸಹದೇವನೋ, ಅಥವಾ ಅವರ ನೆಂಟನೋ, ಹೇಳಯ್ಯಾ! ಧೀರನೇ, ನಿನ್ನನ್ನು ಪ್ರಾರ್ಥಿಸುವೆನು, ಪಾಂಡವರ ಆಯುಧಗಳನ್ನು ನೀನು ಹೇಗೆಬಲ್ಲೆ? ಹೇಳು.

ಬೃಹ:—ಕುಮಾರನೇ! ನಾನೇ ಅರ್ಜುನನೆಂದು ತಿಳಿ. ನಿಮ್ಮಲ್ಲಿ ಬಾಣಸಿಗನಾಗಿರುವ ವಲಲನೇ ಭೀಮಸೇನನು. ಕಂಕಯತಿಯೇ ಧರ್ಮರಾಯನು. ಗೋರಕ್ಷಕನಾದ ತಂತಿಪಾಲನೇ ಸಹದೇವನು. ಅಶ್ವಪಾಲಕನಾದ ದಾಮಗ್ರಂಥಿಯೇ ನಕುಲನು. ಸೈರಂಧ್ರಿಯೇ ನಮ್ಮೈವರಿಗೂ ಧರ್ಮಪತ್ನಿಯಾದ ದ್ರೌಪದೀದೇವಿಯೆಂದು ಗ್ರಹಿಸು.

ಉತ್ತರ:—(ಆಶ್ಚರ್ಯದಿಂದ ತಲೆದೂಗಿ) ಅಹುದು, ನಿನ್ನ ಮಾತು ನಿಜವೆಂದು ತೋರುತ್ತದೆ. ಉಳಿದವರಿಗೆ ಈ ಮಹಿಮೆ ಹೇಗೆ ಬರುವುದು? ಜೀವವನ್ನು ತಾಳಿ ಬದುಕಿದ್ದರೆ ಅತಿಶಯಗಳನ್ನು ಕಾಣಬಹುದೆಂಬ ಪ್ರಸಿದ್ಧವಾದ ಮಾತು ಸತ್ಯವಾಯಿತು. ನಾನು ನಿಮ್ಮಲ್ಲಿ ತಪ್ಪುಮಾಡಿದೆನು. ಇದನ್ನು ಮನಸ್ಸಿನಲ್ಲಿಡದೆ ನನ್ನನ್ನು ನೀಚನೆಂದು

ಭಾವಿಸದೆ ದಯಮಾಡಿ ರಕ್ಷಿಸಬೇಕು. ಇಗೋ ನಮಸ್ಕರಿಸುವೆನು. (ಎಂದು ಕಾಲಿಗೆ ಬಿದ್ದನು)

ಅರ್ಜುನ:—(ಅವನ ತಲೆಹಿಡಿದು ಮೇಲಕ್ಕೆತ್ತಿ ಪ್ರೇಮದಿಂದ ಸವರಿ) ಯುವರಾಜನೇ! ಏಳು, ನಿನ್ನಲ್ಲಿ ಯಾವ ತಪ್ಪೂ ಇಲ್ಲ. ಹೆದರಬೇಡ (ಎಂದು ಸಂತೈಸಿದನು.)

ಉತ್ತರ:—(ಕೈ ಮುಗಿದು ನಿಂತುಕೊಂಡು ಇವನೇ ನಿಜವಾದ ಅರ್ಜುನನೆಂದು ದೃಢಪಡಿಸಿಕೊಳ್ಳುವುದಕ್ಕೆ ಆತನನ್ನು ಪ್ರಶ್ನೆ ಮಾಡಿದನು.)

ಉತ್ತರ:—ಸ್ವಾಮೀ! ಬಾಲಕನಾದ ನನ್ನ ಪ್ರಾರ್ಥನೆ ಯೊಂದುಂಟು. ದಯಮಾಡಿ ನಿಮ್ಮ ಹತ್ತು ಹೆಸರುಗಳನ್ನೂ ಹೇಳ ಬೇಕು. ಆ ದಿವ್ಯನಾಮಗಳನ್ನು ಕೇಳಿ ಕೃತಾರ್ಥನಾಗುವೆನು.

ಅರ್ಜುನ:—(ನಗುತ್ತಾ) ಉತ್ತರನೇ ಕೇಳು. ನಿನ್ನ ಇಷ್ಟದಂತೆ ನನ್ನ ದಶ ನಾಮಗಳನ್ನು ಹೇಳುತ್ತೇನೆ. ಅರ್ಜುನ, ಫಲುಗುಣ, ಪಾರ್ಥ, ಕಿರೀಟಿ, ಶ್ವೇತವಾಹನ, ಜಿಷ್ಣು, ಬೀಭತ್ಸು, ವಿಜಯ, ಸವ್ಯಸಾಚಿ, ಧನಂಜಯ, ಇವೇ ನನ್ನ ದಶನಾಮಗಳು. (ಇವು ಬಂದ ಕಾರಣಗಳನ್ನು ಬೇಕಾದರೆ ವಿವರಿಸಿ ಹೇಳುವೆನು.

ಉತ್ತರ:—ಜೀಯಾ! ವಿವರಣೆಗೆ ಈಗವೇಳೆ ಇಲ್ಲ. ತಮ್ಮ ಮಾತೇ ನಿಜವೆಂದು ದೃಢವಾಗಿ ನಂಬಿದೆನು. ಮನಸ್ಸಿನ ಸಂಶಯವು ದೂರವಾಯಿತು. ಮತ್ತೊಂದೇ ಅನುಮಾನ ಉಳಿದಿದೆ. ಮಹಾತ್ಮ ನಾದ ನಿನಗೆ ಈ ನಪುಂಸಕವೇಷವು ಏತಕ್ಕೆ ಬಂತು? ನೀನು ಶ್ರೀಕೃಷ್ಣನ ಪ್ರತಿಬಿಂಬವಲ್ಲವೆ? ವಿಕಾರವಾದ ಈ ರೂಪವು ನಿನಗೆ ಬರಲು ಕಾರ ಣವನ್ನು ತಿಳಿಸಿ ನನ್ನ ಸಂದೇಹವನ್ನು ತೊಲಗಿಸು.

ಅರ್ಜು:—ರಾಜಕುಮಾರನೇ ಕೇಳು, ಇದು ಧರ್ಮರಾಯನ ಸತ್ಯಪರಿಪಾಲನೆಗಾಗಿ ನಾನೇ ಸಂಪಾದಿಸಿಕೊಂಡುದಯ್ಯಾ! ದೇವ ಲೋಕದಲ್ಲಿ ಊರ್ವಶಿಯು ದೆಸೆಯಿಂದ ಬಂದ ಶಾಪದ ಫಲವು. ಅಜ್ಞಾ

ತವಾಸದ ವೇಳೆಗೆ ಸರಿಯಾಗಿ ಇದನ್ನು ಧರಿಸಿ ಒಂದುವರುಷ ಕಾಲ ಅನುಭವಿಸಿದೆನು. ಅವಧಿಯ ಕಾಲವನ್ನು ನಿರ್ವಿಘ್ನವಾಗಿ ನಿಮ್ಮ ಪಟ್ಟಣದಲ್ಲಿ ಕಳೆದೆವು; ಇನ್ನು ಯಾರಿಗೂ ಹೆದರಬೇಕಾಗಿಲ್ಲ. ನನ್ನ ಶೌರ್ಯವನ್ನು ಮುಂದೆ ನೋಡಿ ತಿಳಿಯಬಹುದು.

ಈ ಪ್ರಕಾರವಾಗಿ ಹೇಳಿ ಕೌರವ ಸೇನೆಯ ಗಂಟಲ ಬಳೆಗಳನ್ನು ಮುರಿಯುವ ಹಾಗೆ ತನ್ನ ಕೈಗೆ ತೊಟ್ಟಿದ್ದ ಗಾಜಿನ ಬಳೆಗಳನ್ನು ಜಜ್ಜಿ ಒಡೆದು ಕುಟ್ಟಿದನು, ಮಲ್ಲಗಂಟಿನಲ್ಲಿ ವಸ್ತ್ರವನ್ನುಟ್ಟು ಕೊಂಡನು. ತಲೆಯ ಕೂದಲನ್ನು ಒಟ್ಟುಗೂಡಿಸಿ ಎತ್ತಿಕಟ್ಟಿದನು. ಹಣೆಯಲ್ಲಿ ಕಸ್ತೂರೀ ತಿಲಕವನ್ನಿಟ್ಟನು. ಕಿಗ್ಗಟ್ಟಿನ ಕಠಾರಿಯನ್ನು ಸೊಂಟದಲ್ಲಿ ಸಿಕ್ಕಿಸಿಕೊಳ್ಳಲು ಅದರ ಕುಚ್ಚು ಕುಣಿದಾಡುತಿದ್ದಿತು. ಬೃಹನ್ನಳೆಯ ರೂಪುಹೋಗಿ, ಅರ್ಜುನನು ವೀರಪುರುಷನಾಗಿ ಹೊಳೆದನು ವಿರಾಟನ ಪಟ್ಟಣದಿಂದ ತಂದಿದ್ದ ಉತ್ತರನ ಸಾಮಾನ್ಯ ರಥವನ್ನು ಅಲ್ಲಿಯೇ ಬಿಟ್ಟು ತನ್ನ ತೇರನ್ನು ನೆನೆಯಲು, ಆಗಲೇ ಅದು ಸಿದ್ಧವಾಗಿ ಬಂದುನಿಂತಿತು. ಅದಕ್ಕೆ ಕಟ್ಟತಕ್ಕ ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕಗಳೆಂಬ ಕುದುರೆಗಳನ್ನು ಸ್ಮರಿಸಲು ಕೂಡಲೇ ಬಂದು ನಿಂತವು. ಆ ಕುದುರೆಗಳನ್ನು ಕಟ್ಟಿ, ಅದರಲ್ಲಿ ಕುಳಿತುಕೊಂಡು ಹನುಮಂತನನ್ನು ಧ್ಯಾನಿಸಿದನು. ತತ್‌ಕ್ಷಣದಲ್ಲಿಯೇ ಆಂಜನೇಯನು ಬಂದು ರಥಾಗ್ರದಲ್ಲಿ ಮೆರೆಯುತಿದ್ದ ಧ್ವಜದಲ್ಲಿ ಮಂಡಿಸಿದನು. ಆ ಬಳಿಕ ಅರ್ಜುನನು ದಿವ್ಯವಾದ ಕಿರೀಟವನ್ನು ಧರಿಸಿ, ಜೋಡು ಕವಚಗಳನ್ನು ತೊಟ್ಟುಕೊಂಡು, ಸಿಂಹನಾದ ಮಾಡಿ, ಗಾಂಡೀವವನ್ನು ಕೈಗೆ ತೆಗೆದುಕೊಂಡು, ಆ ಬಿಲ್ಲಿಗೆ ಹೆದೆಯನ್ನು ಏರಿಸಿ "ಅಣ್ಣನಾದ ಧರ್ಮರಾಯನಿಗೆ ಜಯವಾಗಲಿ" ಎಂದು ಶ್ರೀಕೃಷ್ಣನನ್ನು ಪ್ರಾರ್ಥಿಸಿ, ಆ ಪರಮಾತ್ಮನನ್ನು ತನ್ನ ಮನಸ್ಸಿನಲ್ಲಿ ಧ್ಯಾನಿಸಿ ನಮಸ್ಕರಿಸಿದನು. ಆ ಬಳಿಕ ಅಸ್ತ್ರವಿದ್ಯಾಗುರುವಾದ ದ್ರೋಣಾಚಾರ್ಯನಿಗೆ ದೂರದಿಂದಲೇ

ಮುಗಿದನು. ಗಾಂಡೀವದ ಹುರಿಯನ್ನು ಬಿಗಿಗೊಳಿಸಿ, ಉತ್ತರನನ್ನು ಸಾರಥಿಯಾಗಿ ಕುಳ್ಳಿರಿಸಿ, ಶಸ್ತ್ರಾಸ್ತ್ರಗಳನ್ನೆಲ್ಲಾ ತೆಗೆದುಕೊಂಡು ಉಳಿದುವುಗಳನ್ನು ಕಟ್ಟಿ ಎಂದಿನಂತೆಯೇ ಮರದಮೇಲೆ ಬೈತಿಟ್ಟು, ಶತ್ರುಸೈನ್ಯದಮೇಲೆ ನ್ಮೈದೋರಿದನು. ಕುದುರೆಗಳ ಕಡಿವಾಣಗಳನ್ನು ಸಡಿಲಮಾಡಿಬಿಡಲು, ಬಹು ವೇಗದಿಂದ ಆ ಕುದುರೆಗಳು ಓಡಿದುವು. ರಥವೇಗದ ರಭಸಕ್ಕೆ ನೆಲವು ಒಡೆದುಹೋಗುವುದೋ ಎಂಬಂತೆ ಕಾಣಿಸಿತು. ಕುಡಿನೊರೆಯೂ, ಕಟವಾಯುಜೊಲ್ಲೂ, ಘುಡುಘುಡಿಸುವ ಮೂಗಿನಹೊಳ್ಳೆಯ ಶಬ್ದವೂ ಮೊಳಗುತ್ತಿರಲು ರಥಗಳು ವೇಗವಾಗಿ ಓಡುತ್ತಿದ್ದುವು.

ಉತ್ತರ:—(ಅರ್ಜುನನನ್ನು ನೋಡಿ) ಎಲೈ ಪಾರ್ಥನೇ! ಈ ಪರಬಲದಲ್ಲಿ ಒಬ್ಬರಾದರೂ ನನಗೆ ತಿಳಿದವರಿಲ್ಲ. ಆದುದರಿಂದ ನಿನ್ನನ್ನು ಪ್ರಾರ್ಥಿಸುತ್ತೇನೆ. ಈ ಸೇನೆಯಲ್ಲಿ ಕುರುಪತಿಯಾದ ದುರ್ಯೋಧನನು ಯಾರು ? ಭೀಷ್ಮನು ಯಾರು ? ದ್ರೋಣಾಚಾರ್ಯರು ಎಲ್ಲಿರುವರು? ಕೃಪಾಚಾರ್ಯನೆಂಬುವನು ಯಾರು ? ಅಶ್ವತ್ಥಾಮನು ಯಾರು? ಕರ್ಣನು ಯಾರು ? ನನಗೆ ಇವರನ್ನು ತೋರಿಸಬೇಕು.

ಅರ್ಜು:—ಕುಮಾರನೇ ! ಇತ್ತನೋಡು. ಉದಯಕಾಲದ ಅರುಣನನ್ನು ಎರಕಹೊಯ್ದಂತೆ ಕಾಣುವ ಕೆಂಪುಬಣ್ಣದ ಕುದುರೆಗಳಿಂದ ಮೆರೆಯುವ ರಥದಲ್ಲಿ ಕುಂಭಧ್ವಜವು ಪ್ರಕಾಶಿಸುತ್ತಲಿದೆಯಲ್ಲ ! ಈ ತೇರಿನಲ್ಲಿ ಧೀರನಾಗಿ ಕುಳಿತಿರುವವನು ಗರುಡಿಯ ಮನೆಯ ಪಂಡಿತನಾಗಿ, ನಮ್ಮಗಳಿಗೆಲ್ಲಾ ಯುದ್ಧ ಕಲೆಯನ್ನು ಕಲಿಸಿದ ಗುರುವಾದ ಮಹಾತ್ಮನು. ಈತನೇ ದ್ರೋಣಾಚಾರ್ಯನು. ಈತನು ಯುದ್ಧದಲ್ಲಿ ಪರಮೇಶ್ವರನು ಎದುರಾಗಿ ನಿಂತರೂ ಹೆದರತಕ್ಕವನಲ್ಲ. ಬ್ರಾಹ್ಮಣನಾಗಿ ಕ್ಷಾತ್ರ ಧರ್ಮವನ್ನವಲಂಬಿಸಿರುವುದರಿಂದ "ಶಾಪಾದಪಿಶರಾದಪಿ" ಎಂಬ ನ್ಯಾಯದಿಂದ ಶತ್ರುನಿಗ್ರಹ ಮಾಡಬಲ್ಲವನು, ಇಗೋ ನೋಡು.

ಈತನ ಪಕ್ಕದಲ್ಲಿಯೇ ಸಾಣೇಹಿಡಿದ ಮಣಿಗಳಿಂದ ಅಲಂಕೃತವಾದ ರಥದಲ್ಲಿ ಭಯಂಕರವಾದ ಆಯುಧಗಳನ್ನು ಧರಿಸಿ, ಯುದ್ಧದ ಕಾಲ ಭೈರವನಾಗಿ ಬಲಶಾಲಿಯಾಗಿ ಕುಳಿತಿರುವನು. ಈತನೇ ಪ್ರಸಿದ್ಧನಾದ ಅಶ್ವತ್ಥಾಮನು. ಇವನೇ ನಮ್ಮ ಗುರುಪುತ್ರನು. ಇವನ ಹಣೆಯು ಶಿವನ ಹಣೆಯಂತೆ ಒಪ್ಪುತ್ತಿದೆ ನೋಡು. ಇವನ ರಥಾಶ್ವಗಳು ಎಷ್ಟು ಚುರುಕಾಗಿವೆ ? ಸಿಂಹಧ್ವಜವನ್ನು ನೋಡಿದೆಯಾ ? ಮಹಾಶೂರನು.

ಇತ್ತನೋಡು. ಗೊರಸುಗಳಿಂದ ನೆಲವನ್ನು ಕೆರೆಯುತ್ತಾ ಸಿಟ್ಟಿನಿಂದ ಕ್ರೂರದೃಷ್ಟಿಯನ್ನು ಹರಡುತ್ತಿರುವ [ಕುದುರೆಗಳನ್ನು ಕಟ್ಟಿರುವ] ದಿವ್ಯವಾದ ರಥದಲ್ಲಿ ಕುಳಿತುಕೊಂಡು ಬಿಲ್ಲಿನಲ್ಲಿ ಬಾಣವನ್ನು ಹೂಡಿ, ಕಾದಲಿಕ್ಕೆ ಸಿದ್ಧನಾಗಿ ನಿಂತಿರುವವನು ಕೃಪಾಚಾರ್ಯನು.

ಇಗೋ ನೋಡು, ಅಸಮಾನ ಬಲನಾದ ಕರ್ಣನು ಈಕಡೆ ಇದ್ದಾನೆ. ಇವನ ರಥವು ರತ್ನಕಾಂತಿಯಿಂದ ಮೆರೆಯುತ್ತಿದೆ. ಇವನ ಹತ್ತಿರದಲ್ಲಿ ವಾದ್ಯರಭಸಗಳು ಮೊರೆಯುತ್ತಿವೆ. ಕುದುರೆಗಳು ಕೊಬ್ಬಿನಿಂದ ಮುಂದುವರಿಯುತ್ತಿವೆ. ದಿವ್ಯ ಧನುಸ್ಸನ್ನು ಕೈಯಲ್ಲಿ ಹಿಡಿದು, ರಥಿಕನಾಗಿ ಒಪ್ಪುತ್ತಿರುವನು ; ಇವನೇ ಆ ದುರ್ಯೋಧನನಿಗೆ ಬೆಂಬಲನಾಗಿರುವನು.

ಅತ್ತಲಾಗಿ ನೋಡು ; ನಮ್ಮ ಉಭಯಕುಲ ಪಿತಾಮಹನಾದ ಅಜ್ಜನು ಬಿಳಿಯ ಕುದುರೆಗಳು ಕಟ್ಟಿದ ರಥದಲ್ಲಿ ಕುಳಿತಿದ್ದಾನೆ. ತಾಳಧ್ವಜವನ್ನೂ, ಛತ್ರದ ಕೊಡೆಯನ್ನೂ ನೋಡಿದೆಯಾ ? ಇವನೇ ರಿಪುಕುಲಾಂತಕನಾದ ಭೀಷ್ಮಾಚಾರ್ಯನು ; ಅತಿ ವೃದ್ಧನಾದರೂ ಬ್ರಹ್ಮಚರ್ಯಾಶ್ರಮದಲ್ಲಿಯೇ ಇದ್ದಾನೆ.

ಅಗೋ ನೋಡು, ಆನೆಯ ಹಿಂಡಿನ ನಡುವೆ ಒಪ್ಪುವ ದಿವ್ಯ ರಥದಲ್ಲಿ ಸರ್ಪ ಧ್ವಜವು ಮೆರೆಯುತ್ತಿದೆ. ಅದರಲ್ಲಿ ಕುಳಿತಿರುವವನೇ ರಾಜಾಧಿರಾಜನಾದ ದುರ್ಯೋಧನನು ; ಕಪಟ ಜೂಜಿನ ಜಾಣನು ; ಮೂರ್ಖಶಿರೋಮಣಿ ; ಇವನು ಯಾರ ಮಾತನ್ನೂ ಕೇಳತಕ್ಕವನಲ್ಲ.

ಅವನ ಬಲಗಡೆ ನಿಂತಿರುವವನು ಭೂರಿಶ್ರವನು. ಎಡಗಡೆ ಇರುವವನು ಸೈಂಧವನು. ಇವನ ಸುತ್ತಲೂ ನೂರುಜನ ತಮ್ಮಂದಿರು ತಮ್ಮ ತಮ್ಮ ರಥಗಳಲ್ಲಿ ಕುಳಿತು ಯುದ್ಧಕ್ಕೆ ಸಿದ್ಧರಾಗಿದಾರೆ. ಈ ಸೈನ್ಯವು ಇಷ್ಟಿದೆ ಎಂದು ಎಣಿಸುವುದಕ್ಕೆ ಸಾಧ್ಯವಿಲ್ಲ. ಇದು ಅಂಧಕಾಸುರನ ಸೈನ್ಯದ ಎರಡರಷ್ಟೂ, ರಾವಣಾಸುರನ ಸೇನೆಯ ಮೂರರಷ್ಟೂ ಇರುವುದೆಂದು ಹೇಳುವರು. ಗುಣಕ್ಕೆ ಮತ್ಸರವಿಲ್ಲ, ಕೌರವನಂತೂ ಹೆಚ್ಚು ಸೈನ್ಯವುಳ್ಳವನು; ಮಹದೈಶ್ವರ್ಯ ಸಂಪನ್ನನು; ಎಂದು ಶತ್ರುವಿನ ವಿಭವವನ್ನು ಹೊಗಳಿದನು. ಉತ್ತರನು ಇದನ್ನೆಲ್ಲಾ ಕೇಳಿ ತಿಳಿದುಕೊಂಡು, ತಲೆದೂಗಿ, “ಆಹಾ! ಮಹಾಸೈನ್ಯವನ್ನು ನೋಡಿದೆನು. ನಿನ್ನ ಆಶ್ರಯದಲ್ಲಿರುವುದರಿಂದ ಧೈರ್ಯವುಳ್ಳವನಾಗಿದ್ದೇನೆ. ನೀನು ಹೇಳಿದ ಕೆಲಸಮಾಡುವೆನು. ಇಗೋ ರಥವನ್ನು ಓಡಿಸುವೆನು” ಎಂದನು.

ಆ ಬಳಿಕ ಅರ್ಜುನನು ಗಾಂಡೀವ ಧನುಸ್ಸಿನ ಹೆದೆಯನ್ನು ಬಿಗಿದೆಳೆದನು. ರಥಾಶ್ವಗಳು ತಮ್ಮ ಖುರಗಳಿಂದ ನೆಲವನ್ನು ಕೆರೆಯಲು ಅದರಿಂದ ಎದ್ದ ಧೂಳಿಯು ಆಕಾಶಪಟವನ್ನು ಒಡೆಯುವಂತೆಯೂ, ಸೂರ್ಯನ ರಥದ ಕುದುರೆಗಳನ್ನು ಜೂಜಿಗೆ ಕರೆಯುವಂತೆಯೂ ಕಾಣುತ್ತಿದ್ದುವು. ಶಾಬಾಸ್, ಭಲಾ! ಎಂದು ಚಪ್ಪರಿಸಲು ಅವು ಬಹು ವೇಗವಾಗಿ ಓಡಿದುವು. ಕೂಡಲೇ ಕೆಂಧೂಳಿ ಎದ್ದಿತು. ಕುದುರೆಗಳ ಹೇಷಿತವೂ, ರಥದ ಚೀತ್ಕಾರವೂ ಧನುಸ್ಸಿನ ಟಂಕಾರವೂ, ಧ್ವಜದಲ್ಲಿದ್ದ ಹನುಮಂತನ ಆರ್ಭಟವೂ, ಅರ್ಜುನನ ದೇವದತ್ತವೆಂಬ ಶಂಖದ ಧ್ವನಿಯೂ ಎಲ್ಲವು ಒಟ್ಟಾಗಿ ಸೇರಿ ಕುಲಪರ್ವತಗಳು ಬಿರಿಯುವಂತೆಯೂ, ಸಮುದ್ರವು ಜರಿಯುವಂತೆಯೂ, ದೇವತೆಗಳು ಹೆದರಿ ಓಡುವಂತೆಯೂ ಮಾಡಿದವು. ಶತ್ರುಬಲವು ಈ ಬೊಬ್ಬೆಯನ್ನು ಕೇಳಿ ಬೆಬ್ಬರಿಸಿ ಓಡತೊಡಗಿತು.

ಈ ಅಬ್ಬರವನ್ನು ಕೇಳಿ ರಾಜಪುತ್ರನಾದ ಉತ್ತರನಿಗೆ ತಲೆಯ ಮೇಲೆ ಸಿಡಿಲು ಹೊಡೆದಂತೆ ಆಗಲು ಅವನು ಮೂರ್ಛೆಬಿದ್ದನು. ಅವನ ಕಣ್ಣುಗಳಲ್ಲಿ ರಕ್ತದ ನೀರು ಹರಿಯಿತು. "ಅಯ್ಯೋ ಅಪ್ಪಾ! ಸೈರಿಸಲಾರೆನು. ಕೆಟ್ಟೆನು" ಎಂದು ಕಿರಿಚಿಕೊಂಡನು. ಇದನ್ನು ಕಂಡು ಅರ್ಜುನನು ತನ್ನ ವಸ್ತ್ರದ ಸೆರಗಿನಿಂದ ಬೀಸಿ, ಉಪಚರಿಸಿ, ಅವನನ್ನು ರಥದಮೇಲೆ ಕುಳ್ಳಿರಿಸಿಕೊಂಡು, "ಎಲೈ ಮತ್ಸ್ಯಕುಮಾರನೇ! ಏತಕ್ಕೆ ಇಷ್ಟು ಹೆದರುತ್ತೀ? ನಾನಿರುವಲ್ಲಿ ನಿನಗೇನು ಭಯ! ಸೈರಿಸಿಕೋ?" ಎಂದನು. ಅದಕ್ಕೆ ಉತ್ತರನು ಜೀಯಾ! ಪ್ರಳಯಕಾಲದ ಸಿಡಿಲುಬಡಿದು ನನ್ನ ಎದೆ ಒಡೆಯಿತು. ಈ ಆರ್ಭಟವನ್ನು ಕೇಳಿ ತಡೆಯಲಾರೆನು. ಸಾಕು. ನನ್ನನ್ನು ಹಿಂದಕ್ಕೆ ಕಳುಹು, ಎಂದು ಪ್ರಾರ್ಥಿಸಿದನು ಆಗ ಅರ್ಜುನನು "ಉತ್ತರನೇ! ಹೆದರಬೇಡ. ಇನ್ನು ಮೇಲೆ ಇಂತಹ ಅದ್ಭುತ ಶಬ್ದವನ್ನು ಮಾಡುವುದಿಲ್ಲ, ಧೈರ್ಯದಿಂದ ಇರು. ರಥವನ್ನು ನಡಿಸು," ಎಂದು ಸಮಾಧಾನ ಮಾಡಿದನು. ಬಳಿಕ ಅರ್ಜುನನು ಬತ್ತಳಿಕೆಯಿಂದ ಬಾಣವನ್ನು ತೆಗೆದು ಬಿಲ್ಲಿಗೆ ಹೂಡಿದನು. ಈ ಯುದ್ಧ ಕೌಶಲ್ಯವನ್ನು ನೋಡುವುದಕ್ಕೆ ದೇವತೆಗಳು ತಮ್ಮ ತಮ್ಮ ವಿಮಾನಗಳಲ್ಲಿ ಕುಳಿತು ಬಂದು, ಆಕಾಶದಲ್ಲಿ ನೆರೆದರು.

——:0:——

## ಎಂಟನೆಯ ಸಂಧಿ.

ಪರಬಲ ಕಾಲರುದ್ರನಾದ ಅರ್ಜುನನು ಕುರು ಸೇನೆಯನ್ನೋಡಿಸಿ ವಿರಾಟರಾಯನ ಗೋವುಗಳನ್ನೆಲ್ಲಾ ಹಿಂದಿರುಗಿಸಿದನು.

ಅರ್ಜುನನ ಆರ್ಭಟವನ್ನು ಕೇಳಿ ಕುರುಸೈನ್ಯವೆಲ್ಲಾ ಈಗ ಹೆದರಿತು. ಯುದ್ಧಕ್ಕೆ ಬಂದಿರುವವನು ಅರ್ಜುನನೇ ಎಂದು ಭೀಷ್ಮ

ದ್ರೋಣರು ತಿಳಿದುಕೊಂಡರು. ಆಗ ಆಚಾರ್ಯನು ಭೀಷ್ಮನನ್ನು ನೋಡಿ ಇಂತೆಂದನು.

ದ್ರೋಣ:—ಆರ್ಯನೇ, ಈಗ ತೋರುತ್ತಿರುವ ಉತ್ಪಾತಗಳನ್ನು ನೋಡಿದೆಯಾ? ಇಗೋ! ಆನೆ ಕುದುರೆಗಳ ಕಣ್ಣುಗಳಲ್ಲಿ ನೀರು ಸುರಿಯುತ್ತಿದೆ. ಸೂರ್ಯಮಂಡಲಕ್ಕೆ ಗುಡಿ ಕಟ್ಟಿದೆ. ಒರೆಯಿಂದ ಆಯುಧಗಳನ್ನು ತೆಗೆದರೆ ಅವು ಸರಿಯಾಗಿ ಬಾರದೆ ಮುರಿ ಮುರಿದು ಬೀಳುತ್ತಿವೆ. ಸೇನೆಯು ಬೆದರುವಂತೆ ಸುಟ್ಟುರುಗಾಳಿ ಬೀಸುತ್ತಿದೆ. ಆಕಾಶದಿಂದ ನಕ್ಷತ್ರಗಳು ಉದಿರುತ್ತವೆ. ಭೂಕಂಪವಾಗುತ್ತಿದೆ. ನೋಡಿದೆಯಾ? ಧೂಮಕೇತುಗಳನ್ನು ನೋಡು. ದಿಕ್ಕುದಿಕ್ಕುಗಳಲ್ಲಿಯೂ ಕಾಣಿಸಿಕೊಳ್ಳುತ್ತಿವೆ. ಧ್ವಜಗಳೆಲ್ಲವೂ ಮುರಿದು ಬೀಳುತ್ತಿವೆ. ಇವೆಲ್ಲಾ ಅಪಶಕುನಗಳು, ನಮ್ಮ ವಿನಾಶಕ್ಕೆ ಬೀಜಗಳು, ರಾಜನ ಏಳಿಗೆಗೆ ಇವು ತಕ್ಕುವುಗಳಲ್ಲ. ಎಲೈ ಭೀಷ್ಮಾಚಾರ್ಯನೇ! ಈಗ ಯುದ್ಧಕ್ಕೆ ಬಂದಿರುವವನು ಯಾರು? ನಮ್ಮ ಪ್ರಿಯ ಶಿಷ್ಯನಾದ ಅರ್ಜುನನೇ ಅಲ್ಲವೇ! ಬಹುದಿನಗಳಿಂದ ವನವಾಸದ ಕ್ಲೇಶವನ್ನು ಸಹಿಸಿದ ಈತನು ಯುದ್ಧದಲ್ಲಿ ನಮ್ಮುಗಳನ್ನು ಸೋಲಿಸದೆ ಇರನು. ಧ್ವಜಾಗ್ರದಲ್ಲಿ ಮುಂದಿರುವ ಆಂಜನೇಯನ ಆರ್ಭಟವೂ, ದೇವದತ್ತದ ಶಬ್ದವೂ, ಗಾಂಡೀವದ ಆರ್ಭಟವೂ, ಈ ಅರ್ಜುನನ ಸಿಂಹನಾದವೂ, ರಥಾಶ್ವಗಳ ಹೇಂಕಾರವೂ ಬ್ರಹ್ಮಾಂಡವನ್ನೇ ಒಡೆದು ಹಾಕುವಂತಿದೆ. ಇಗೋ, ಸಾಹಸಮಲ್ಲನಾದ ವಿಜಯನ ಗರ್ಜನೆಯನ್ನು ಕೇಳಿದೆಯಾ?

ಕರ್ಣ:—(ಕೋಪದಿಂದ ಗುರುವಾದ ದ್ರೋಣನನ್ನು ದುರದುರನೆ ನೋಡುತ್ತಾ) ಎಲೈ ಆಚಾರ್ಯನೇ! ನಮ್ಮ ಸೇನೆಯು ಹೆದರುವಂತೆ ಶತ್ರುವಿನ ಭುಜಬಲವನ್ನು ಹೊಗಳಿ, ನಮ್ಮೊಡೆಯನನ್ನು ತಿರಸ್ಕರಿಸುತ್ತಾ ಇದ್ದೀಯೆ! ಉಂಡಮನೆಗೆ ಎರಡು ಬಗೆಯುವುದು ತರವಲ್ಲ. ನಿಮ್ಮ ಮನೆ ತನಕ್ಕೆ ಈ ಖುಲ್ಲತನವು ಸಹಜವಾದುದು. ನಿನಗೆ ಭಯ

ವಾದರೆ ನನಗೂ ಭಯವೆಂದು ತಿಳಿದೆಯೊ ? ಇವನು ಅರ್ಜುನನೇ ಆಗಲಿ, ಇಂದ್ರನೇ ಆಗಲಿ, ಪರಶುರಾಮನೇ ಆಗಲಿ, ಒಂದು ನಿಮಿಷ ದಲ್ಲಿಯೇ ಇವನನ್ನು ಸೋಲಿಸಿಬಿಟ್ಟು, ನಮ್ಮರಸನಿಗೆ ಜಯಸಿರಿಯನ್ನು ವಶಗೊಳಿಸುವೆನು. ವೀರನಾದ ನಾನು ಈ ಸ್ಥಿತಿಯಲ್ಲಿರುವಾಗ ಅರ್ಜುನನು-ಅರ್ಜುನನು ಎಂದು ಅವನ ತಲೆ ಬಿರಿಯುವ ಹಾಗೆ ಹೊಗಳುತ್ತಿರುವೆ. ಇದು ಸರಿಯಲ್ಲ. ನಾನೇನು ಸಾಮಾನ್ಯನೆಂದು ಭಾವಿಸಿದೆಯೋ ? ಯುದ್ಧಕ್ಕೆ ನಿಂತರೆ ನಾನು ಅಷ್ಟದಿಕ್ಪಾಲಕರನ್ನಾದರೂ ಕಡಿದುಬಿಡಬಲ್ಲೆನು. ನೀವೇನೋ ಅರ್ಜುನನಿಗೆ ಗುಲಾಮರಾಗಿರುವಿರಿ. ಕೌರವನ ಕಡೆಯವರು ಹೇಡಿಗಳೆಂತಲೂ, ನೀಚರೆಂತಲೂ ತಿಳಿದಿರುವಿರಿ. ನಿಮ್ಮ ಮನಸ್ಸಿನಲ್ಲಿ ಒಡೆಯನಿಗೆ ಉಪಕಾರ ಮಾಡಬೇಕೆಂಬ ಸ್ವಲ್ಪವೂ ಚಿಂತೆಯೇ ಇಲ್ಲ. ಎರಡು ಬಗೆಯುವ ಸ್ವಭಾವವುಳ್ಳ ನೀವುಗಳು ಖೂಳರು. ನಿಮ್ಮಲ್ಲಿ ನನಗೆ ಏನು ಮಾತು ? ನಾನು ಯುದ್ಧಕ್ಕೆ ಹೊಕ್ಕರೆ ನಿನ್ನಂತೆ ಶತ್ರುವಿನ ಪಕ್ಷ ವಹಿಸುವ ನಿನ್ನಂತವನ ಗತಿಯು ಗರುಡನ ಬಾಯಿಗೆ ಸಿಕ್ಕಿದ ಹಾವನ್ನು ರಕ್ಷಿಸಲಿಕ್ಕೆ ಹೋಗುವವನ ಹಾಗೆ ಆಗದೆ ತಪ್ಪದು. ಹಗೆಯಾದ ಅರ್ಜುನನನ್ನು ಒಂದು ನಿಮಿಷದಲ್ಲಿ ಕೊಂದು ಹಾಕುವೆನು. ನೋಡುತ್ತಿರು. ([illegible] ಕಡೆ ತಿರುಗಿ) [illegible]ನೇ! ಈ ಅಲ್ಪರ ವಾಕ್ಯಗಳನ್ನು [illegible], [illegible] ನಿಲ್ಲಿಸುವೆನು ಧೈರ್ಯದಿಂದಿರು.

ಕೃಪಾಚಾರ್ಯ:—(ಇದನ್ನು ಕೇಳಿ ಮನ ಸಿಟ್ಟಾಗಿ) ಎಲೈ ಕುರುರಾಜನೇ ! ಈ [illegible]ಕುಲದವನಾದ ಕರ್ಣನು ಬಗುಳುವ ಮಾತುಗಳು ನಿಜವೆಂದು ನಂಬಬೇಡ. ಯುದ್ಧದಲ್ಲಿ ಅರ್ಜುನನನ್ನು ಕೊಲ್ಲಬೇಕಾದರೆ ನನಗೂ-ನಿನಗೂ ಈ ಬಗುಳುವ ಮಲ್ಲನಿಗೂ ಸಾಧ್ಯವಲ್ಲ. ಹಲವು ಮಾತುಗಳೇಕೆ ? ದೇವತೆಗಳು ಸದಾ ಮಹಾತ್ಮನಾದ ಈ ಅರ್ಜುನನೊಂದಿಗೆ ಕಾದಿ ಜಯಿಸಲರಿಯರು. ನೀನೂ ಅರ್ಜುನನ ಸಾಮ

ರ್ಥ್ಯವನ್ನು ತಿಳಿದೇ ಇರುವೆಯಲ್ಲವೆ? ಈ ಅರ್ಜುನನು ಪರಮೇಶ್ವರ ನೊಂದಿಗೆ ಖಾಡಾಖಾಡಿಯಿಂದ ಕಾಳಗಮಾಡಿ ಜಯಿಸಲಿಲ್ಲವೆ? ದೇವೇಂದ್ರನ ಖಾಂಡವವನವನ್ನು ತನಗೆ ಆಹಾರವಾಗಿ ಕೊಡಬೇಕೆಂದು ಯಜ್ಞೇಶ್ವರನು ಇವನನ್ನು ಪ್ರಾರ್ಥಿಸಲು, ಅವನ ಇಷ್ಟವನ್ನು ನೆರವೇರಿಸಿ ಕೊಡಲಿಲ್ಲವೇ? ರಾಜಸೂಯ ಯಾಗದಲ್ಲಿ ಉತ್ತರ ಕುರುಗಳನ್ನು ಗೆದ್ದು ಅವರ ದ್ರವ್ಯವನ್ನೆಲ್ಲಾ ಅರಮನೆಗೆ ತಂದು ತುಂಬಿದವನು ಯಾರು? ಹಿರಣ್ಯಾಪುರನಿವಾಸಿಗಳಾದ ರಾಕ್ಷಸರ ಗುಂಪನ್ನೆಲ್ಲಾ ನಿರ್ನಾಮಮಾಡಿದವನು ಯಾರು? ಪಾಂಚಾಲರಾಯನ ಸಭೆಯಲ್ಲಿ ಬಡಬ್ರಾಹ್ಮಣವೇಷದಲ್ಲಿದ್ದಾಗ್ಯೂ ಮತ್ಸ್ಯಯಂತ್ರವನ್ನು ಭೇದಿಸಿ, ಅಲ್ಲಿ ನೆರೆದಿದ್ದ ರಾಜರ ಮೂಗು ಕೊಯ್ದು (ಅವಮಾನ ಮಾಡಿ) ದ್ರೌಪದಿಯನ್ನು ಮದುವೆಯಾದವನು ಯಾರು? ಇವುಗಳನ್ನೆಲ್ಲಾ ನೀನು ಅರಿಯದವನಲ್ಲ. ಆಸ್ವಯಂವರಮಂಟಪದಲ್ಲಿ ಈ ಕರ್ಣನ ಪಾಡು ಏನಾಯಿತು? (ಕರ್ಣನ ಮುಖನೋಡಿ) ಏನೋ! ಈಗ ಮನಸ್ಸಿಗೆ ಬಂದಂತೆ ಬಗುಳುತ್ತೀ? ಕೌರವೇಂದ್ರನು ಗಂಧರ್ವರಾಜನ ಕೈಗೆ ಸಿಕ್ಕಿದ್ದಾಗ ಆತನನ್ನು ಬಿಡಿಸಿಕೊಂಡು ಬಂದವನು ನೀನೇ ಅಲ್ಲವೇ? ಶೂರನಾದ ಸೈಂಧವನ ತುರುಬನ್ನು ಕೊಯ್ದು ಹಾಕಿದವರು ಯಾರಪ್ಪಾ! ಅರ್ಜುನನ ಹಸ್ತಕೌಶಲವನ್ನು ನೀನು ಕಾಣೆಯಾ? ಬಾಯಿಮುಚ್ಚು.

ಕರ್ಣ:—ಅಯ್ಯಾ? ಬ್ರಾಹ್ಮಣಾ! ಹುಚ್ಚನ ಕಣ್ಣಿಗೆ ಸಾಸುವೆ ಕಾಳು ಜೊಡ್ಡ ಕೊಡದಷ್ಟು ಗಾತ್ರ ಕಾಣುವುದಂತೆ! ನಿಮ್ಮ ಕಣ್ಣುಗಳಿಗೆ ಅರ್ಜುನನು ಬಲುದೊಡ್ಡವನಾಗಿ ಕಾಣಬಂದರೂ ಉಳಿದವರ ಕಣ್ಣಿಗೆ ತೃಣಮಾತ್ರನೇ. ಎಲೈ ಮರುಳು ಹಾರುವಯ್ಯಾ! ನಿಮಗೆ ಗದ್ಯಪದ್ಯಗಳ ಸರಸವಿದ್ಯೆಗಳಲ್ಲದೆ ಈ ಯುದ್ಧವೆಂಬ ಕಠಿನವಿದ್ಯೆಯ ಗೊಡವೆ ಏಕೆ? ಹಣೆಗೆ ಪಟ್ಟೆ ಒಳಿದುಕೊಂಡು, ದರ್ಭೆಯನ್ನು ಹೆಣೆದು ಬೆರಳಿಗೆ ಸಿಕ್ಕಿಸಿಕೊಂಡು, ದೋತ್ರದ ಅಂಚನ್ನು ನಿರಿಹಿಡಿದು

ಉಟ್ಟುಕೊಂಡು, ಮದುವೇ ಮುಂತಾದ ವಿಶೇಷ ಸಂದರ್ಭಗಳಲ್ಲಿ ಚೌಕವಾದ ಮಣೆಯಮೇಲೆ ದಟ್ಟವಾಗಿ ಕುಳಿತು, ಆಕಂಠಪೂರ್ತಿಯಾಗಿ ಉಣ್ಣುವ ಜೀವನದ ವಿದ್ಯೆಯನ್ನು ನೀವು ಬಲು ಚೆನ್ನಾಗಿ ಬಲ್ಲಿರಿ. ರಣವಿಚಾರವಾದ ವಿದ್ಯೆಯು ನಿಮಗೇತಕ್ಕೆ ? ಈ ದಿನ ಅಪ್ಪನ ತಿಥಿ, ಇಂದು ಸಂಕ್ರಮಣ, ಈಗ ಸೂರ್ಯಗ್ರಹಣ. ಈ ದಿವಸ ಹರಿವಾಸರ, ಇದು ಯಜ್ಞಾರಂಭದ ದಿನ, ಈ ದಿನ ವರ್ಧಂತಿ, ಈಗ ಶುಭಲಗ್ನ, ಎಂದು ಹೇಳಿಕೊಂಡು ಬಂದು ಹಲವು ಬಗೆಯ ದಾನಗಳ ಹೆಸರುಗಳನ್ನು ಹೇಳಿ, ಒಡೆಯನ ಮನೆಯ ವಸ್ತುಗಳನ್ನು ಬಾಚಿ ಹಾಕಿಕೊಂಡು, ಚೆನ್ನಾಗಿ ತಿಂದು ಕೊಬ್ಬಿರುವ ನಿಮಗೆ ಶೌರ್ಯದ ಮಾತುಗಳೇಕೆ? ಕೌರವರಾಯನಿಂದ ಹಣವನ್ನು ಕಸಿದುಕೊಳ್ಳುವ ವಿದ್ಯೆಯನ್ನು ಚೆನ್ನಾಗಿ ಬಲ್ಲಿರಿ. ವ್ಯಾಖ್ಯಾನದಿಂದ ಹೊಟ್ಟೇ ಬೆಳಿಸಿಕೊಂಡ. ರಾಜಪುರೋಹಿತರೆಂತಲೂ, ಗುರುಗಳೆಂತಲೂ ಬೆರತಿರುವಿರಿ. ಈಗ ಬಂದಿರುವ ಪ್ರಸಂಗವು ಧನುರ್ವಿದ್ಯಾವಿಷಯ, ರಿಪುಭಟಮಲ್ಲರ ಕದನ; ನಿಮ್ಮಂತಹ ಜಡರಿಗೆ ಇದು ಸುಲಭವೇ ! ಇದು ಜಪಾನುಷ್ಠಾನವಲ್ಲವಣ್ಣಾ ! ರಣಾಂಗಣದಶೌರ್ಯ.

ಅಶ್ವತ್ಥಾಮ, (ಇದನ್ನು ಕೇಳಿ ಕಣ್ಣುಗಳಲ್ಲಿ ಕೆಂಡವನ್ನು ಕಾರುತ್ತಾ) ಎಲಾ ಖೂಳನಾದ ಸೂತಪುತ್ರಾ ! ನೀನು ಸುಭಟರ ಪಂಙ್ತಿಯಲ್ಲಿ ಬಹು ಕಿರಿಯವನಲ್ಲವೆ! ನಿನ್ನ ಬಾಯಿಂದ ಕೀಳು ಜಾತಿಗೆ ತಕ್ಕ ಮಾತುಗಳೇ ಹೊರಡುತ್ತಿವೆ, ‹‹ ಕುಲವನ್ನು ನಾಲಗೆ ಹೇಳಿತು'' ಎಂಬ ಗಾಥೆಯು ಸುಳ್ಳಲ್ಲ. ನೀನು ಬ್ರಾಹ್ಮಣರನ್ನು ಹಾಸ್ಯಮಾಡುತ್ತಿರುವೆಯಲ್ಲ ! ನೀನು ಯಾವರಾಜನ ಮಗನು! ಹೇಳು ನೋಡೋಣ. ಲೋಕದಲ್ಲಿ ಷಟ್ಕರ್ಮಾಧಿಕಾರವು ಬ್ರಾಹ್ಮಣರ ಹೊರತು ಮತ್ತಾರಿಗೆ ಉಂಟು? ದಾನಧರ್ಮಗಳನ್ನು ಪ್ರತಿಗ್ರಹ ಮಾಡಲಿಕ್ಕೆ ಬ್ರಾಹ್ಮಣರು ಮಾತ್ರವೇ ಅರ್ಹರೆನಿಸುವರು. ಜಗತ್ತನ್ನು ಸಂರಕ್ಷಿಸುವುದಕ್ಕಾಗಿ ನಾವೇ

ದಾನಗಳನ್ನು ಪರಿಗ್ರಹಿಸುವೆವು. ಆ ಬಳಿಕ ಕೇವಲ ನಿಸ್ಪೃಹ
ಯಿಂದ ಗಳಿಸಿದ ಧನವನ್ನು ಸದ್ವಿನಿಯೋಗ ಮಾಡಿ, ಪರಮಾತ್ಮನ ಭಕ್ತಿ
ಯಲ್ಲಿದ್ದುಕೊಂಡು ದೈನ್ಯವೃತ್ತಿಯನ್ನವಲಂಬಿಸುವವರು ಬ್ರಾಹ್ಮಣರೇ
ಅಲ್ಲವೇ! ಆದ್ದರಿಂದ ಧನವನ್ನು ಸಿಂದಕ್ಕೆ ಕೊಡತಕ್ಕವರೂ
ನಾವೇ. ಕ್ಷತ್ರಿಯ ವೈಶ್ಯರು ದಾನವನ್ನು ಕೊಡಬಹುದು. ಆದರೆ
ಅವರಿಗೆ ತೆಗೆದುಕೊಳ್ಳುವುದಕ್ಕೆ ಯೋಗ್ಯತೆ ಇಲ್ಲ. ಬ್ರಾಹ್ಮಣಾದಿ
ಮೂರು ವರ್ಣಗಳವರ ಅಪ್ಪಣೆಯನ್ನು ನಡೆಸಿದರೆ ಶೂದ್ರನು ಕೃತಾರ್ಥ
ನಾಗುವನು. ಈಗ ಹೇಳಿದ ಜನರಲ್ಲಿ ನೀನು ಯಾರು? ಕೊಡುವ
ವನೋ ತೆಗೆದುಕೊಳ್ಳುವವನೋ, ಕೌರವರಾಯನು ಕುಲಹೀನ
ನಾದ ನಿನ್ನನ್ನು ಪರಿಗ್ರಹಿಸಿ ಅಭಿಮಾನಿಸಿದನೆಂದು ನಿನ್ನ ನಾಲಿಗೆಯು
ಮನಸ್ಸು ಬಂದಹಾಗೆ ಬಗುಳಲಿಕ್ಕೆ ಹೊರಟಿತು. ಎಲಾ ಕರ್ಣ!
ನಿನ್ನ ಜನ್ಮವನ್ನು ನೆನೆದುಕೋ ಪರರು ತಮ್ಮನ್ನು ಹೊಗಳಿದರೆ ಯೋಗ್ಯ
ರಾದವರು ನಾಚಿಕೆಯಿಂದ ತಲೆಬಾಗುವರು. ದುರ್ಮನನಾದ ನೀನು
ದುರಹಂಕಾರದಿಂದ ನಿನ್ನನ್ನೇ ಹೊಗಳಿಕೊಂಡರೆ ಬಲ್ಲವರು ಮೆಚ್ಚು
ವರೆ? ಬಾಯಿ ಮುಚ್ಚು! ಮಹಾತ್ಮರು ನಿನ್ನ ಮಾತಿಗೆ ಉತ್ತರ
ಕೊಡುವರೆ? ಈ ಬರಿ ಹರಟೆಗಳು ನಮ್ಮಲ್ಲಿ ನಡೆಯಲಾರವು. ಜಂಬ
ಕೊಚ್ಚಿಕೊಳ್ಳಬೇಡ. ಬೇರಿನೊಂದಿಗೆ ನಿನ್ನ ನಾಲಗೆಯನ್ನು ಸೇದುವೆನು,
ಕೌರವನಿಗೆ ನಿನ್ನ ಮೇಲೆ ಪ್ರೀತಿ ಹೆಚ್ಚಾಗಿದೆ. ಇದರಿಂದ ಅವನು
ಕಂಡದ್ದನ್ನು ಖಂಡಿತವಾಗಿ ಮಾತಾಡುವ ನನ್ನ ಮೇಲೆ ಕೋಪಿಸಿ,
ತನ್ನ ಓಲಗದಿಂದ ನನ್ನನ್ನು ತೆಗೆದುಹಾಕಿದರೂ ಚಿಂತೆಯಿಲ್ಲ. ಗೌರ
ವ್ಯರಾದ ಹಿರಿಯರನ್ನು ನಿಂದಿಸಿ ಹಾಸ್ಯಮಾಡುತ್ತಿರುವೆ ನಿನ್ನನ್ನು
ಈಗಲೇ ಕೊಂದುಬಿಡುವೆನು (ಎಂದು ಕತ್ತಿಯನ್ನು ಹಿರಿದನು.)

ಇವರಿಬ್ಬರಿಗೂ ಮತ್ಸರವೂ, ರೋಷವೂ, ಬಿರುನುಡಿಗಳೂ
ಹೆಚ್ಚಾಗುತ್ತಾ ಬಂದುವು. ಕುರುಪತಿಯು ಅವರಿಬ್ಬರನ್ನೂ ಬೇರೆ

ಬೇರೆ ತಡೆದು ನಿಲ್ಲಿಸಿ, "ಯುದ್ಧದಲ್ಲಿ ಎದುರಿಗೆ ನಿಂತ ವೀರನಮೇಲೆ ನಿಮ್ಮ ಶೌರ್ಯವನ್ನು ತೋರಿಸಿರಿ. ಒಳಗೊಳಗೆ ನಿಮ್ಮ ನಿಮಗೆ ಪಂತವೂ, ಜಗಳವೂ ಏಕೆ? ನಿಲ್ಲಿಸಿರಿ" ಎಂದು ಸಮಾಧಾನ ಮಾಡಿದನು.

ಬಳಿಕ ದುರ್ಯೋಧನನು ಭೀಷ್ಮಾಚಾರ್ಯರ ಹತ್ತಿರ ಬಂದು ವಂದಿಸಿ ಇಂತೆಂದನು.

ದುರ್ಯೋ—ಆರ್ಯರೆ! ಈಗ ಬಂದಿರುವವನು ಅರ್ಜುನನೇ ಆಗಿದ್ದರೆ ಮತ್ತೆ ಹದಿಮೂರು ವರುಷ ಕಾಡಿಗೆ ಪಾಂಡವರು ಹೋಗಬೇಕಾಗುವುದು. ನನ್ನ ಲೆಕ್ಕದಪ್ರಕಾರ ಅಜ್ಞಾತ ವಾಸದ ವರುಷವು ಇನ್ನೂ ಮುಗಿದಿಲ್ಲ. ಕೆಲವು ದಿನಗಳು ಉಳಿದಿವೆ ನೋಡಿರಿ.

ಭೀಷ್ಮ—(ನಗುತ್ತಾ) ಮಗನೇ ಕೇಳು, ಸೌರಮಾನದಲ್ಲಿ ನಮ್ಮ ಹತ್ತು ವರುಷಗಳಿಗೆ ಎರಡು ತಿಂಗಳು ಹೆಚ್ಚುವುವು. ಮಾಸಾದಿಗಳನ್ನು ಸೇರಿಸಿಕೊಂಡು ಅವರು ವನವಾಸದ ಹದಿಮೂರುವರುಷಗಳನ್ನೂ, ಕಳೆದರು. ವಿದ್ವಾಂಸರು ಮೆಚ್ಚುವಹಾಗೆ ಪಾಂಡವರು ಅಜ್ಞಾತವಾಸದ ಅವಧಿಯನ್ನು ಮುಗಿಸಿರುವರು. ನಿನ್ನೆಯ ಹಗಲು ನಿನ್ನದು. ಪಾಂಡವರು ಕಾಣಿಸಿಕೊಳ್ಳಬೇಕಾದರೆ ಇಂದಿನ ದಿವಸ ಅವರದು. ಸಮುದ್ರವು ಮೇರೆಯನ್ನು ದಾಟಿ ಈಚೆಗೆ ಬಂದರೂ, ಬರಲಿ. ಅಷ್ಟದಿಗ್ಗಜಗಳು ಭೂಮಿಯನ್ನು ಹೊರಲಾರದೆ ಕೆಡಹಿಬಿಡಲಿ. ಸೂರ್ಯಮಂಡಲಕ್ಕೆ ಕಪ್ಪುಬಣ್ಣವು ಮುಚ್ಚಲಿ. ಕುಲಪರ್ವತಗಳು ನಡೆದು ಸಂಚರಿಸಲಿ. ಇವೆಲ್ಲವೂ ನಡೆದರೂ ಧರ್ಮರಾಯನು ಸತ್ಯಪ್ರತಿಜ್ಞೆಗೆ ತಪ್ಪುವನಲ್ಲ. ಅವನೇ ನಮ್ಮ ಉಭಯ ವಂಶಕ್ಕೆ ತಿಲಕಪ್ರಾಯನು. ಇನ್ನು ಈ ವಿಷಯವನ್ನು ಇಷ್ಟಕ್ಕೇನೇ ಸಾಕುಮಾಡಿರಿ. ಮುಂದೆ ಯುದ್ಧವು ನಡೆಯದು. ಅರ್ಜುನನು ಕೆಣಲ್ಲಲಿಕ್ಕೆ ನಿಂತರೆ ಬೇಕು, ಬೇಡ ಎಂಬುವರೇ ಇಲ್ಲ. ಹಲವು ಮಾತುಗಳೇತಕ್ಕೆ? ನೀನು ಪಾಂಡು ಕುಮಾರರನ್ನು ಕರೆಯಿಸಿ, ಶೂರರ ಎದುರಿಗೆ ಸಂಧಿಯನ್ನು ಮಾಡಿ, ಅವರ ಅರ್ಧರಾ

ಜ್ಯವನ್ನು ಕೊಟ್ಟರೆ ಈ ಲೋಕದಲ್ಲಿ ನಿನಗೆ ಸರಿಯಾದವನೇ ಇಲ್ಲ.

ದುರ್ಯೋ—ಆರ್ಯರೇ! ಯುದ್ಧವೇನೋ ಕೈಗೂಡಿದೆ, ಶತ್ರುವಿಗೂ ನಮಗೂ ಕೊಂಡದ್ದೇ ಬಲು ಕೈದು. ನನ್ನ ಮನಸ್ಸು ಕಾಳಗಕ್ಕೆ ಸಿದ್ಧವಾಗಿ ಮುಂದಾಗಿ ನಿಂತಿದೆ. ಪಾಂಡವರೊಡನೆ ಇನ್ನು ಮುಂದೆ ಯುದ್ಧವೇ ಹೊರತು ಉಂಡು-ಉಟ್ಟು-ಅವರ ಪ್ರೀತಿಯನ್ನು ಪಡೆದು ಬದುಕುವ ಭಂಡತನವು ನನಗೆ ಇಲ್ಲ. ವೈರವನ್ನು ಬಲಿದು ಯುದ್ಧವನ್ನು ಮಾಡಲೇಬೇಕು.

ಭೀಷ್ಮನು—(ನಿಟ್ಟುಸುರು ಬಿಟ್ಟು ಅಯ್ಯೋ ! ಇವನು ಕೆಟ್ಟು ಹೋದನು ಎಂದುಕೊಂಡು ಮಗುವೇ! ಮುಂದೆ ಮಾಡುವ ಕೆಲಸವನ್ನು ನೀನೇ ಬಲ್ಲೆ. ನಾವೇನೋ ಯುದ್ಧಕ್ಕೆ ಸಿದ್ಧರಾಗಿಯೇ ಇರುವೆವು. ನೀನು ಗೋಗಣದೊಂದಿಗೆ ಸ್ವಲ್ಪ ಸೈನ್ಯವನ್ನು ತೆಗೆದುಕೊಂಡು ಹಸ್ತಿನಾಪುರಕ್ಕೆ ಹೋಗು, ಇಲ್ಲಿ ನಾವು ಇದ್ದು ಯುದ್ಧಮಾಡುವೆವು.

ಈ ಪ್ರಕಾರ ಹೇಳಿ, ತಮ್ಮ ಸೈನ್ಯವನ್ನು ಎರಡು ಭಾಗವಾಗಿ ವಿಂಗಡಿಸಿ, ಒಂದು ಭಾಗವನ್ನು ಕೌರವನ ಸಂಗಡ ಕಳುಹಿಸಿ ಮತ್ತೊಂದು ಭಾಗವನ್ನು ಅರ್ಜುನನ ಮೇಲೆ ಯುದ್ಧಕ್ಕೆ ಹೊರಡಿಸಿ ತಾನೂ ಸಿದ್ಧನಾದನು. ಕರ್ಣ, ದ್ರೋಣ, ಕೃಪ, ಅಶ್ವತ್ಥಾಮ, ಶಕುನಿ ಮೊದಲಾದ ವೀರರು ಯುದ್ಧಕ್ಕೆ ಸಿದ್ಧರಾದರು.

ಆಗ ಅರ್ಜುನನು ಉತ್ತರ ಕುಮಾರನನ್ನು ಕುರಿತು-ರಾಜಪುತ್ರನೇ-ನೋಡಿದೆಯೋ ? ಮಹಾ ಪುರುಷರನ್ನೆಲ್ಲಾ ಯುದ್ಧಮಾಡಲಿಕ್ಕೆ ಇಲ್ಲಿಯೇ ನಿಲ್ಲಿಸಿಬಿಟ್ಟು, ದುರ್ಯೋಧನನು ಗೋವುಗಳೊಂದಿಗೆ ಹಸ್ತಿನಾಪುರದ ಕಡೆಗೆ ಹೋಗುತ್ತಿರುವನು. ಶಹಬಾಸು ! ನಮ್ಮ ಅಜ್ಜನು ಮಾಡಿದ ಈ ಏರ್ಪಾಡು ನಮಗೆ ಅನುಕೂಲವೇ ಆಯಿತು. ಕಡಿವಾಣವನ್ನು ಹಿಡಿದು ರಥವನ್ನು ಎಡಗಡೆಗೆ ಬೇಗ ತಿರುಗಿಸು. ಆಕಳುಗಳನ್ನು ಹಿಂದಿರುಗಿಸುವುದೇ ಈಗ ನಮ್ಮ ಕರ್ತವ್ಯವು. ನಾವು ಬಂದ ಕೆಲಸ

ಬನ್ನು ನೆರವೇರಿಸಿದ ಒಳಿಕ ಆ ವೀರರ ಬಲವನ್ನು ನೋಡಿ ಕೊಳ್ಳೋಣ.
ನೀನು ಭಯಪಡದೆ ಕೌರವನ ಕಡೆಗೆ ರಥವನ್ನು ಓಡಿಸು, ಎಂದನು.
ಆಗ ಉತ್ತರನು ಕುದುರೆಗಳನ್ನು ಚಪ್ಪರಿಸಿದನು. ಅವು ವಾಯುವೇಗ
ದಿಂದ ಓಡಿದುವು. ಅವರು ಯುದ್ಧಕ್ಕೆ ನಿಂತಿರುವ ವೀರರಕಡೆ ತಿರುಗಿ
ನೋಡದೆ, ಕೌರವೇಂದ್ರನ ಬೆನ್ನಟ್ಟಿ ಹೋದರು. ಆಗ ಉತ್ತರನು
ಕುರುಪತಿಯನ್ನು ಕುರಿತು-"ಎಲೈ ರಾಜನೇ ? ಎಲ್ಲಿಗೆ ಹೊರಟೆ ?
ಪಸುಗಳನ್ನು ಬಿಟ್ಟು ಬಿಡು. ಇಗೋ ನೋಡು. ಈಗ ಬಂದಿರುವವನು
ಯಾರು ? ಶೂರಾಗ್ರಣಿಯಾದ ಅರ್ಜುನನಲ್ಲವೆ? ಕುರುಕುಲವೆಂಬ
ಕಾಡಿಗೆ ಇವನು ದಾವಾನಲನೆಂದು ತಿಳಿ" ಎಂದು ಅರ್ಭಟಿಸುತ್ತಿ
ದ್ದನು.

ಆಗ ದ್ರೋಣಾಚಾರ್ಯನೂ, ಕೃಪಾಚಾರ್ಯನೂ, ಅರ್ಜುನ
ನನ್ನು ನೋಡಿ" ಎಲ ಎಲಾ ! ಮೋಸಬಂತು. ಅರ್ಜುನನು ಕುರು
ಪತಿಯ ಕಡೆಗೇ ಹೊರಟನು. ಅವನನ್ನು ಅಡ್ಡಹಾಕಿ ನಮ್ಮ ಕಡೆಗೆ
ತಿರುಗಿಸಿಕೊಳ್ಳಿರಿ." ಎಂದು ಕೂಗಿಕೊಂಡರು, ವೀರರು ತಮ್ಮ ತಮ್ಮ
ಧನುರ್ಬಾಣಗಳನ್ನು ತೆಗೆದುಕೊಂಡು "ಎಲೈ ಅರ್ಜುನನೇ ನಿಲ್ಲು
ನಿಲ್ಲು ನಮ್ಮೊಂದಿಗೆ ಕಾದಿ ಮುಂದಕ್ಕೆ ಹೊರಡು, ಎಂದು ಅಡಿಗಟ್ಟಿ
ದರು. ಆಗ ಅರ್ಜುನನು ನಸುನಗುತ್ತಾ, ಯುದ್ಧಾರಂಭಕ್ಕೆ ಮೊದಲು
ತನ್ನ ಗುರುಭಕ್ತಿಯನ್ನು ತೋರಿಸುವ ಉದ್ದೇಶದಿಂದ ಆ ಆಚಾರ್ಯರ
ಪಾದಗಳ ಮೇಲೆ ಎರಡೆರಡು ಬಾಣಗಳನ್ನು ಪ್ರಯೋಗಿಸಿದನು.
ಅನಂತರ ಕೌರವನ ಸೇನೆಯ ಮೇಲೆ ನುಗ್ಗಿದನು. ಮೊನೆಯಾದ
ಹೊಸಬಾಣಗಳೆಂಬ ತಡಿಕೆಗಳನ್ನು ಅವರ ಎಡಬಲಗಳಲ್ಲಿಯೂ ಎದು
ರಿನಲ್ಲಿಯೂ ಕಟ್ಟಿಬಿಟ್ಟನು, ಕೌರವ ಸೇನೆಯು ಒಂದು ನಿಮಿಷದಲ್ಲಿ
ಬೇಸಗೆಯ ಪಸಿಯಂತೆ ಬಾಡಿಹೋಯಿತು, ಅರ್ಜುನನು ಬಿಲ್ಲಿನಲ್ಲಿ
ಹೆದೆಯನ್ನೇರಿಸಿದನು. ಆ ಅಬ್ಬರಕ್ಕೆ ಸೇನೆಯಲ್ಲಿರುವ ಆನೆಗಳ ಎದೆಗಳು

ಬಿರಿದುವು, ಹನುಮಂತನ ಆರ್ಭಟಕ್ಕೆ ಅತಿರಥರ ಬಾಯಲ್ಲಿ ಜೊಲ್ಲು ಸುರಿಯುತ್ತಾ ಬಂದಿತು. ಅರ್ಜುನನ ಶಂಖಘೋಷಕ್ಕೆ ಕುರುಸೈನ್ಯದ ತಲೆ ಹಿಡಿದು ಒಡೆಯಿತು ಸೈನ್ಯವೆಲ್ಲಾ ಹೆದರಿ ಹಮ್ಮೈಸಿ ಹಾರಿಬಿತ್ತು. ಆಗ ಕುರುಸೇನೆಯು "ಎಲಎಲಾ! ಇವನು ಅರ್ಜುನನೇ! ಸುಭಟರ ಜೀವಕ್ಕೆ ಮೃತ್ಯುವೇ? ಧೀರರಾಯರೆಂಬ ಕಾಡಿಗೆ ದಾವಾನಲನೆ? ಪ್ರಳಯಕಾಲದ ಭೈರವನಂತೆ ಇದ್ದಾನೆ, ಇವನ ಎದುರಿಗೆ ನಿಂತು ಕಾದ ಬಲ್ಲವರಿಲ್ಲ. ಕರ್ಣನು, ಕೃಪನು, ಸೌಬಲನು, ಜಯದ್ರಥನು ಮೊದಲಾದವರ ಹೆಡತಲೆಗೆ ನಾಲಿಗೆ ಹೋಯಿತು," ಎಂದು ಅಬ್ಬರಿಸಿಕೊಂಡಿತು. ಮತ್ತೆ ಕೆಲವರು "ಅಯ್ಯೋ! ಆಕಳ ಹಿಂಡನ್ನು ಹಿಂದಕ್ಕೆ ಅಟ್ಟಿಬಿಡಿರಿ. ಸೆರೆಹಿಡಿದಿರುವ ಗೋಪಾಲಕರನ್ನು ಬಿಟ್ಟುಬಿಡಿರಿ. ನಮ್ಮರಸನು ನ್ಯಾಯ ತಪ್ಪಿನಡೆದನು. ರಾಜ್ಯವನ್ನಾಳುವ ಅರಸರು ಎಲ್ಲಿಯಾದರೂ ಪರರಾಯರ ಗೋವುಗಳನ್ನು ಸೆರೆ ಹಿಡಿಯಬಹುದೆ? ಶತ್ರುವಿನ ಬಾಣಕ್ಕೆ ಗುರಿಯಾಗಿ ಕೊರಳು ಕೊಯ್ಯಕೊಳ್ಳಬೇಕಾಯಿತಲ್ಲಾ!" ಎಂದು ಬಾಯಿ ಬಿಡುತ್ತಿದ್ದರು.

ಆಗ ಅರ್ಜುನನು ಬಲವಾಗಿ ಸಿಂಹನಾದ ಮಾಡಿ ಬಾಣಗಳನ್ನು ಬಿಡುತ್ತಾ ಬಂದನು, ಅವು ಒಂದಕ್ಕೊಂದು ಕೂಡಿ ಹುರಿಹುರಿಯಾಗಿ ಹಬ್ಬಿಕೊಂಡುವು. ಜಲಗಾರರೆಲ್ಲಾ ಕಾಲಿಗೆ ಬುದ್ಧಿ ಹೇಳಿದರು, ಅರ್ಜುನನ ಬಾಣಗಳು ಹಾರಿಹೋಗಿ, ಆನೆಗಳ ಗುಂಪನ್ನು ಕಡಿದು ರಾಸಿ ಹಾಕಿದುವು. ಗರಿನೊರೆದು ಅಬ್ಬರಿಸಿ ಕಬ್ಬಕ್ಕಿಗಳು ಗಗನವನ್ನು ಹಬ್ಬಿದಂತೆ ತುಂಬಿಕೊಂಡುವು. ಹಕ್ಕಿಯ ಮರಿಗಳನ್ನು ಹಿಡಿದು ಕಚ್ಚಿಕೊಂಡು ಹಾರಿಹೋಗುವ ಗಿಡಗನಂತೆ ನರನ ಬಾಣಗಳು ಭಟರ ಗಂಟಲನ್ನು ಕಡಿದು ಮೇಲಕ್ಕೆ ತರುತ್ತಿದ್ದವು. ಬಟರ ತಲೆಗಳು ಹರಿದು ಬೀಳುತ್ತಿದ್ದುವು. ಅವರ ಎಲುಬುಗಳು ಸಿರಿಸಿಟಿಲುಸಿಟಿಲೆಂದು ಒಡೆದು ಬೀಳುತ್ತಿದ್ದುವು ಮತ್ತು ಬಾಣಗಳು ಆನೆಗಳ ಹಿಂಡನ್ನು ಉರುಳಿಸಿ

ದುವು. ಕುದುರೆಗಳ ಹೊಟ್ಟೆಯಲ್ಲಿ ನುಗ್ಗಿ ಕೊಂದವು. ಕಾಲಾಳು
ಗಳ ಬಾಯಲ್ಲಿ ಹೊಕ್ಕು ಕರುಳನ್ನು ಕಾರಿಸಿ ಕೆಡಹಿದುವು. ಅರ್ಧ
ಚಂದ್ರಾಕೃತಿಯ ಬಾಣಗಳು ಉರಿಯುತ್ತಾ ಹೋಗಿ ಸಿಕ್ಕಿದ ತಲೆಗ
ಳನ್ನು ಚೆಂಡಾಡುತ್ತಿದ್ದುವು. ಕೊರಳು ಹರಿದು ಸುರಿಯುತ್ತಿದ್ದ ರಕ್ತ
ಪ್ರವಾಹದಲ್ಲಿ ಕುದುರೆಗಳು ಮುಳುಗುತ್ತಿದ್ದುವು. ರಥಗಳ ಗುಂಪು
ಕುಲಾಲ ಚಕ್ರದಂತೆ ಗಿರಗಿರನೆ ಸುತ್ತುತ್ತಿದ್ದುವು.

ಧನುರ್ವಿದ್ಯಾ ಪಾರಂಗತನಾದ ಅರ್ಜುನನ ಕೈ ಚಳಕವನ್ನು
ಬಲ್ಲವರಾರು? ಆತನ ಬಾಣಗಳು ಶತ್ರುಸೇನೆಯಲ್ಲಿ ಹೊಕ್ಕು ಕತ್ತಿಗ
ಳನ್ನು ಕತ್ತರಿಸಿ ಹಾಕಿದವು. ಜೋಡು ಸೀಪಕಗಳನ್ನು ಹರಿದುವು.
ತೋಳುಗಳನ್ನು ಕಡಿದುವು. ಸಿಟ್ಟೆಲುಬುಗಳನ್ನು ಮುರಿದುವು, ಛತ್ರಿಗ
ಳಗನ್ನು ತುಂಡು ಮಾಡಿದುವು. ತಲೆಗಳನ್ನು ಒಡೆದುವು, ನರಗಳನ್ನು
ಹರಿದುವು, ಕರುಳುಗಳನ್ನು ಹೊರಕ್ಕೆ ಸೆಳೆದುವು. ಉಬ್ಬರಿಸಿ ಹೊರ
ಬೀಳಿಸಿದುವು, ಪಿತ್ಥಕೋಶಕ್ಕೆ ನುಗ್ಗಿ ಕೊಬ್ಬನ್ನು ರಕ್ತವನ್ನು ಸುರಿದು,
ಹರಿವ ಚರ್ಮದಲ್ಲಿ ಹೊರಳುತ್ತಿದ್ದುವು.

ಇನ್ನೂ ಕೆಲವು ಬಾಣಗಳು ಸುಭಟರನ್ನು ಕೊಂದು ಹತ್ತಿರಕ್ಕೆ
ತಂದುವು. ರಣರಂಗವು ಭಯಂಕರವಾಗಿತ್ತು. ಪ್ರಸಿದ್ಧಿ ಪಡೆದ ಮಂ
ತ್ರಾಸ್ತ್ರಗಳು ಅರ್ಜುನನನ್ನು ಕುರಿತು, ಸ್ವಾಮೀ! ಒಂದು ಗುರಿಗೆ
ಎರಡು ಬಾಣಗಳನ್ನು ತೊಡಬೇಡ, ಒಂದೇ ಸಾಕೆಂದು ಬೇಡುತ್ತಿ
ದ್ದುವು. ರಣಧೀರನಾದ ಅರ್ಜುನನ ಬಾಣಗಳು ಕುದುರೆಯ ರಾವು
ತರನ್ನು ಕೆಡಹಿದುವು, ಆನೆಗಳನ್ನು ಒಕ್ಕಿದುವು. ಸಾಲಿಕ್ಕೆ ಮೈಗಳಲ್ಲಿ
ಹೊಕ್ಕುವು. ರಕ್ತದ ಕೆಸರಿನಲ್ಲಿ ಕೈ ತೊಳೆದುವು, ಎದುರಿಸಿದವನನ್ನು
ಕೊಂದು ಅವರ ಮಾಂಸವನ್ನು ಹದ್ದು ಮೊದಲಾದ ಹಕ್ಕಿಗಳಿಗೆ ಇಕ್ಕಿ
ದುವು, ಛತ್ರಿಗಳನ್ನು ದಿಕ್ಕುದಿಕ್ಕಿಗೂ ಚೆಲ್ಲುತ್ತಿದ್ದುವು. ಗುಂಪು ಒಡೆ
ಯದೆ ಒತ್ತಾಗಿ ನಿಂತಿದ್ದ ರಾಜರೆಲ್ಲರೂ ಬಾಣದ ಭಯದಿಂದ ಚದರಿ

ಓಡಿದರು, ಬಲವಾದ ಸೈನ್ಯದೊಂದಿಗೆ ಮುಂದೆ ನಿಂತಿದ್ದ ಬಿರುದಿನ ವೀರರು ಪ್ರಾಣಗಳನ್ನು ಬಿಡುತ್ತಾ ಬಂದರು. ಅತಿರಥರು ನುಗ್ಗು ನುರಿಯಾದರು. ಆನೆಗಳ ಮೈಯಿಂದ ರಕ್ತಧಾರೆಗಳು ಸಗ್ಗಳೆ (ಪಕಾಲೆ) ಯನ್ನೂ ಸೆಳೆದಂತೆ ಸುರಿಯುತ್ತಿದ್ದುವು. ಪ್ರಳಯ ಕಾಲಾಗ್ನಿಯು ಚರಾಚರ ಜೀವಿಗಳನ್ನು ಕವಿದು ಸುಡುವಂತೆ ಮೇಲೆಮೇಲೆ ಬಿಡುತ್ತಿರುವ ಬಾಣಜ್ವಾಲೆಯು ಕುರುಸೇನೆಯೆಂಬವನವನ್ನು ಸುಟ್ಟು ಹಾಕುತ್ತಿತ್ತು.

ರಥಾಗ್ರದಲ್ಲಿ ಕುಳಿತಿದ್ದ ಆಂಜನೇಯನು ಅರ್ಜುನನನ್ನು ಕುರಿತು "ಎಲೈಯಾ! ನೀನೇ ಶೂರನು, ಎಂತಹ ಶರಸಂಧಾನ? ಎಂತಹ ಕೌಶಲ್ಯ? ಯಾವ ಲಾಘವ? ಯಾವ ರೀತಿ? ರಾವಣಾಸುರನಲ್ಲಿಯೂ— ರಾಮನಲ್ಲಿಯೂ—ಇಂದ್ರಜಿತುವಿನಲ್ಲಿಯೂ—ಲಕ್ಷ್ಮಣನಲ್ಲಿಯೂ—ಈ ಶರಕೌಶಲ್ಯವು ಕಾಣೆನು. ಇದು ಎಂತಹ ಧನುರ್ವಿದ್ಯಾನೈಪುಣ್ಯವೋ? ಬಾಪು" ಎಂದು ಹೊಗಳುತ್ತಿದ್ದನು, ಬಾಣವನ್ನು ಹೂಡುವುದು, ಬಿಡುವುದು, ಇವುಗಳ ವೇಗವೇ ಕಾಣಬಾರದು, ಪರಮಾಣುವನ್ನು ಕಣ್ಣಿನಿಂದ ನೋಡಲಾಗುವುದೆ? ಮನುಷ್ಯರ ಕಣ್ಣುಗಳು ಅಷ್ಟು ಸೂಕ್ಷ್ಮವಾಗಿವೆಯೆ? ಈ ಕೌಶಲ್ಯವು ಶಿವನಿಗೂ ವಿಷ್ಣುವಿಗೂ ಮಾತ್ರ ಇರುವುದು, ಉಳಿದವರಲ್ಲಿಲ್ಲ. ನಮ್ಮ ಇಂದ್ರನ ಪಾದದಾಣೆ ಇದು ಸುಳ್ಳಲ್ಲವೆಂದು ದೇವತೆಗಳು ಹೊಗಳುತ್ತಿದ್ದರು.

ಆ ಮಹಾಯುದ್ಧದಲ್ಲಿ ಹಲವರು ಗಾಯ ಪಡೆದರು, ಹಲವರು ಪ್ರಾಣಗಳನ್ನು ಕಳೆದುಕೊಂಡರು. ಕೆಲವರ ಎದೆ ಬಿರಿದು ಪೊಳ್ಳಾಯಿತು, ಕೆಲವರು ಕುಸಿರಾಡದೆ ಸಿಕ್ಕಿಕೊಂಡರು, ಕೆಲವರು ರಕ್ತವನ್ನು ಕಾರಿದರು, ಕೆಲವರು ತಮ್ಮ ಗೂಡನ್ನು ಸ್ವರ್ಗಕ್ಕೆ ಬದಲಾಯಿಸಿದರು. ಕೆಲವರು ತಮ್ಮ ಪ್ರಾಣಗಳನ್ನು ಯಮಸದನಕ್ಕೆ ಕಳುಹಿ

ದರು. ಕೆಲವರು ಚದರಿ ಹೋದರು, ಕೆಲವರು ಬಿಲ್ಲನ್ನು ಬಿಸುಟರು, ಕೆಲವರು ಬಾಣಗಳನ್ನು ಚೆಲ್ಲಿದರು, ಕೆಲವರು ಅರ್ಜುನನ ಬಾಣಗಳೆಂಬ ಬಲೆಯಲ್ಲಿ ಸಿಲುಕಿ ಒದೆದಾಡುತ್ತಿದ್ದರು.

ಆಗ ಕೌರವನು ಮೆಲ್ಲ ಮೆಲ್ಲನೆ ಸರಿದೋಡುತ್ತಿದ್ದನು, ಅರ್ಜುನನು ಅವನನ್ನು ನೋಡಿ "ಎಲಾ! ಆಕಳ ಕಳ್ಳನೇ! ಹೋಗಬೇಡ ನಿಲ್ಲು ನಿಲ್ಲು," ಎಂದು ಮೂದಲಿಸಿದನು. "ಓಹೋ ರಾಯನು ಸಿಕ್ಕಿಬಿಟ್ಟನು ಕರ್ಣಾದಿವೀರರನ್ನು ಕರೆಯಿರಿ. ಭೀಷ್ಮ ದ್ರೋಣ ಕೃಪಾಚಾರ್ಯರು ಎಲ್ಲಿರುವರು? ಬೇಗ ಕೂಗಿರಿ" ಎಂದು ಕುರುಸೇನೆಯು ಬಾಯಿ ಬಿಡುತ್ತಿತ್ತು. ಆಗ ಭೀಷ್ಮ, ಶಕುನಿ, ಕರ್ಣ, ವಿಕರ್ಣ, ಕೃಪ, ಸೈಂಧವ. ಅಶ್ವತ್ಥಾಮ, ದ್ರೋಣ, ಚಿತ್ರಸೇನ ಮೊದಲಾದ ವೀರರು ಬಂದು ಸೇರಿದರು.

ಇತ್ತ ರಾಯನ ಭಟರು ತತ್ತರಿಸಿ ಹಸುಗಳನ್ನು ಬಿಟ್ಟುಬಿಟ್ಟು ತಲ್ಲಣಿಸಿ ಓಡಿಹೋದರು, ಜಯಶಾಲಿಗಳೆಂದು ಗರ್ವದಿಂದ ಮೆರೆಯುತ್ತಿದ್ದ ವೀರರ ಮೋರೆಗಳು ಬತ್ತಿದುವು, ಪಶುಗಣವು ಗೋಪಾಲಕರ ಕೈಸನ್ನೆಯಿಂದ ಪಟ್ಟಣದ ಕಡೆಗೆ ಓಡಿ ಬರುತ್ತಿದ್ದಿತು. ಉತ್ತರ ಕುಮಾರನು ಇದನ್ನು ನೋಡಿ ಆನಂದ ಸಾಗರದಲ್ಲಿ ಮುಳುಗಿದನು, ಕೆಲವು ಹಸುಗಳು ಬಿಗಿದ ಕೆಚ್ಚಲನ್ನು ತೋರಿದು ಸ್ವಾಭಾವಿಕವಾದ ಆನಂದದಿಂದ ಹಾಲು ಸುರಿಸುತ್ತಿದ್ದುವು, ಕೆಲವು ಹಸುಗಳು ಬಾಲಗಳನ್ನು, ಮೇಲಕ್ಕೆತ್ತಿಕೊಂಡು ದಿಕ್ಕು ದಿಕ್ಕನ್ನು ನೋಡುತ್ತಾ ಓಡುತ್ತಿದ್ದುವು. ಕೆಲವು ಹಸುಗಳು ಬೆಚ್ಚಿ ಬೆದರಿ ಅಲ್ಲಲ್ಲಿಯೇ ನಿಲ್ಲುತ್ತಿದ್ದುವು, ಕೆಲವು ಹೊಸ ಜನರ ಸೊಗಡನ್ನು ಮೂಸಿ ನೋಡುತ್ತಿದ್ದುವು. ಹೀಗೆ ದನಗಳ ಹಿಂಡು ಗೋಪಾಲಕರ ಹಿಂದೆ ಸಾಲು ಸಾಲಾಗಿ ಓಡಿಬರುತ್ತಿದ್ದವು. ಕೆಲವು ಕಡೆ ಗಂದಿಗಳು ಬಾಲದ ಬಳಿಗೆ ಮೂಗಿಟ್ಟುಕೊಂಡು ಮುಖವನ್ನು ಮೇಲಕ್ಕೆತ್ತಿ ಮೂಸಿನೋಡಿ, ಸಂತೋಷದಿಂದ ಕಾಲಲ್ಲಿ ನೆಲ

ವನ್ನು ಕೆರೆಯುತ್ತಾ, ಇದಿರಾಗಿ ಬರುವ ಹಸುಗಳೊಂದಿಗೆ ಹೋರಾಡುತ್ತಿದ್ದುವು. ಪಶುಗಣದ ಪಾದಗಳಿಂದ ಎದ್ದ ಧೂಳಿಯು ಆಕಾಶವನ್ನು ತುಂಬಿತು. ದನಗಳೆಲ್ಲಾ ವಿರಾಟರಾಯನ ಪಟ್ಟಣಕ್ಕೆ ಹೋಗಿ ಸೇರಿದುವು.

ಉತ್ತರನೂ ಅರ್ಜುನನೂ ಪುನಃ ಯುದ್ಧಕ್ಕೆ ಸಿದ್ಧರಾಗಿ ನಿಂತರು. ಅರ್ಜುನನು ಶತ್ರುಗಳನ್ನು ನೋಡಿ “ನಿಮ್ಮ ಸೈನ್ಯವು ತಗ್ಗುತ್ತಾ ಬಂತು. ಯುದ್ಧಮಾಡಿ ಕಾರ್ಯವನ್ನು ನಿರ್ವಹಿಸುವ ಶೂರರಿದ್ದರೆ ಬೇಗ ಬರಹೇಳಿರಿ” ಎಂದು ಕೂಗಿ ಬಾಣವನ್ನು ತೂಗಿದನು.

—:0:—

## ಒಂಭತ್ತನೆಯ ಸಂಧಿ.

ಶತ್ರುಸಂಹಾರಕನಾದ ಅರ್ಜುನನು ಸಮ್ಮೋಹನಾಸ್ತ್ರದಿಂದ ಕುರುಸೇನೆಯನ್ನೆಲ್ಲಾ ಮಲಗಿಸಿದನು.

ವಿರಾಟರಾಯನ ಗೋವುಗಳೆಲ್ಲಾ ತಮ್ಮ ಪಟ್ಟಣದ ಕಡೆಗೆ ತಿರುಗಿದುವು. ಮಾರಿಗೆ ಮತ್ತೊಂದು ದೊಡ್ಡ ಔತಣವು ಸಿಕ್ಕಿತು, “ಹಸಿದ ಹೆಬ್ಬುಲಿಯು ಗರ್ಜಿಸುತ್ತಿದ್ದರೆ ಹುಲುಮೃಗಗಳು ಅರಚಿಕೊಳ್ಳುವುವು.” ಎಂಬ ಗಾಥೆಯಂತೆ ಶತ್ರುಭಯಂಕರನಾದ ಅರ್ಜುನನಮೇಲೆ ಸೌಬಲನೂ, ದುಶ್ಶಾಸನನೂ, ಸೈಂಧವನೂ ಯುದ್ಧಕ್ಕೆ ನಿಂತರು. ಹತ್ತುಸಾವಿರ ರಥಗಳೊಂದಿಗೆ ಭಟರು ನುಗ್ಗಿದರು. ಎತ್ತನೋಡಿದರೂ ವಾದ್ಯಗಳ ಅಬ್ಬರವೇ ಕೇಳಬರುತ್ತಿದ್ದಿತು. ಛತ್ರಪಙ್ಕ್ತಿಯು ಆಕಾಶವನ್ನು ಮುಚ್ಚಿತು. ನಿಸ್ಸಾಳವಾದ್ಯಗಳು ಬೆಟ್ಟಗಳ ನೆತ್ತಿಗಳು ಬಿರಿಯುವಂತೆ ಅಬ್ಬರಿಸುತ್ತಿದ್ದುವು. ಢಕ್ಕೆ, ಡಮರುಗ, ಗೋಮುಖ, ಡೆಂಕಣೆ, ಕೊಂಬು, ಕಹಳೆ, ಗಿಡಿಮಿಡಿ, ಮದ್ದಳೆ, ವೀರಮದ್ದಳೆ, ತಂಬಟೆ, ಕನಕ ತಂಬಟೆ, ಮುಂತಾದ ವಾದ್ಯಗಳ ಶಬ್ದವು ಗಗನವನ್ನು ಭೇದಿಸುತ್ತಿತ್ತು. ನೆಲವು ಕುಸಿಯುವಂತೆ ಸೇನೆಗಳು ಗುಂಪುಗೂ

ಇದ್ದುವು, ಅರ್ಜುನನನ್ನು ಮುತ್ತಿರೆಂದು ಅರಸನು ಕೈಸನ್ನೆ ಮಾಡಿದನು. ಅತಿರಥರು ಗುಂಪುಕೂಡಿ ಅರ್ಜುನನ ಮೇಲೆ ನುಗ್ಗಿದರು ಅವರು ಅರ್ಜುನನನ್ನು ಕುರಿತು, "ಎಲೈ ಪಾರ್ಥನೇ! ದನಗಳು ಹಿಂದಿರುಗಿ ವಿರಾಟರಾಯನ ಪಟ್ಟಣಕ್ಕೆ ಹೋದುವೆಂಬ ಅಹಂಕಾರವೊ? ಇಗೋ ಆ ಗರ್ವದಗಿರಿಗೆ ವಜ್ರಾಯುಧವು. ನೀನು ನಮ್ಮ ಸೈನ್ಯವನ್ನು ಕೊಂದೆನೆಂಬ ಕೊಬ್ಬಿನ ಕಾಡಿಗೆ ಇದುಗೋದವಾಗ್ನಿ. ನಮ್ಮ ದೊರೆ ಹೆದರಿದನೆಂದು ತಿಳಿದಿರುವ ನಿನ್ನ ವಿಜಯವೆಂಬ ಬೆಳೆಗೆ ಇಗೋ ಗ್ರೀಷ್ಮಕಾಲದ ಬಿಸಿಲು. ನಮ್ಮ ಶೌರ್ಯವನ್ನು ನೋಡು," ಎಂದು ಎದುರಿಸಿ ಮೊನೆಯಾದ ಬಾಣಗಳನ್ನು ಅರ್ಜುನನಮೇಲೆ ಬಿಟ್ಟರು. ಕಾಲಾಳುಗಳು ತಮ್ಮ ಮುಖಕ್ಕೆ ಗುರಾಣಿಯನ್ನು ಅಡ್ಡವಿಟ್ಟುಕೊಂಡು ತಿವಿದರು. ಕೊಬ್ಬಿದ ಉಬ್ಬಿನ ಬಿಲ್ಲಾಳುಗಳು ಶರವರ್ಷವನ್ನು ಸುರಿಸಿದರು. ಕೆಲವು ವೀರರು ಈಟಿಗಳನ್ನು ಹಿಡಿದು ಸಿಟ್ಟಿನಿಂದ ನುಗ್ಗಿ ಬರುತ್ತಿದ್ದರು. ರಾವುತರು ತಮ್ಮ ಶೌರ್ಯಗಳನ್ನು ಹೇಳಿಕೊಂಡು ಆಯುಧಪಾಣಿಗಳಾಗಿ ನಿಂತರು. ಯೋಧರು ಕೆಂಗರಿಯ ಬಾಣಗಳನ್ನು ತೆಗೆದುಕೊಂಡು ಅರ್ಜುನನಮೇಲೆ ಪ್ರಯೋಗಿಸಿದರು. ರಣರಂಗದಲ್ಲಿ ಎಲ್ಲಿನೋಡಿದರೂ ಅರರೇ-ಭಾಪುರೇ-ಮುಝುರೇ-ಪೂತುರೆ-ಧೀರುರೆ-ಮುಂತಾದ ಮೆಚ್ಚುಗೆಯ ಶಬ್ದಗಳೇ ಕೇಳಬರುತ್ತಿದ್ದುವು. ಮತ್ತೊಂದು ದಿಕ್ಕಿನಿಂದ ಆನೆಗಳ ಗುಂಪು ಬಂದು ಅರ್ಜುನನನ್ನು ಮುತ್ತಿತು. ಅತಿರಥರು ಆ ವೀರನನ್ನು ಕುರಿತು "ಎಲೈ ಪಾರ್ಥನೇ! ನೀನು ಮಹಾಶೂರನೆಂದು ತಿಳಿದಿರುವೆಯೋ? ನೀನು ಇಂದ್ರನ ವನವನ್ನು ಸುಟ್ಟರೆ ಏನಾಯಿತು? ದೇವಲೋಕದ ಗಾಯಕರನ್ನು ಗೆದ್ದಮಾತ್ರದಿಂದ ವೀರನಾದೆಯೊ? ಜಲಯಂತ್ರದಲ್ಲಿದ್ದ ಮೀನನ್ನು ಹೊಡೆದ ಮಾತ್ರದಿಂದ ಶೂರನೆಂದು ತಿಳಿದಿರುವೆಯೊ? ಗೊರವನ ಸಂಗಡ ಕಾದಿ ಅವನಿಂದ ಬಿಲ್ಲು ಪಡೆದು ನಿನ್ನ ಸಮಾನರಿಲ್ಲವೆಂದು ಬೆರೆಯುವೆಯಾ?

ರಾತ್ರಿಕಾಲದಲ್ಲಿ ನೆಂಟರಿಗೆ ತಿಳಿಯದ ಹಾಗೆ ಯತಿವೇಷದಿಂದ ಒಬ್ಬ ಹೆಂಗಸನ್ನು ಕದ್ದುತಂದ ನೀನು ಕಳ್ಳನಲ್ಲದೆ ರಣಧೀರನೆನಿಸುವೆಯಾ? ಬಿಡುಬಿಡು. ತೊಲಗು'' ಎಂದು ಅರ್ಜುನನ ಪರಾಕ್ರಮಯುಕ್ತವಾದ ಹಿಂದಿನ ಮಹತ್ಕಾರ್ಯಗಳನ್ನು ಕೂಡ ತೀಯಾಳಿಸಿ ಆಡುತಿದ್ದರು.

ಅದಕ್ಕೆ ಅರ್ಜುನನು, ''ಎಲಎಲಾ! ಬಾಯಿಮುಚ್ಚಿರೋ, ಸಾಕುಸಾಕು, ಭಂಡರು ಒಗುಳಿದರೆ ಬಲ್ಲವರಿಗೆ ಅದರಿಂದ ಏನು ಕೊರತೆ ? ನಿಮ್ಮ ಪೌರುಷವೆಲ್ಲಾ ಬಲ್ಲೆನು. ಗಂಡುಗೆಡದೆ ಸೈರಿಸಿ ಕೊಂಡಿರಿ, ನಿಮಿಷಕಾಲದಲ್ಲಿ ನಿಮ್ಮ ಬಣ್ಣ ಬಿಚ್ಚುವೆನು,'' ಎಂದು ಅತಿರಥವನ್ನು ಕೊಲ್ಲುತ್ತಾಬಂದನು. ಆಬಳಿಕ ಅಶ್ವತ್ಥಾಮನು ತನ್ನ ಕಡೆಯ ಐದುಸಾವಿರ ರಥಿಕರನ್ನು ಕರೆದುಕೊಂಡುಬಂದು ಅರ್ಜುನನಮೇಲೆ ನುಗ್ಗಿಸಿದನು. ಅವರನ್ನೆಲ್ಲಾ ಅರ್ಜುನನು ಒಂದೇ ಗಳಿಗೆಯಲ್ಲಿ ಮಡುಹಿದನು. ಕರ್ಣನ ಸಂಗಡ ಬಂದ ಎಂಟು ಸಾವಿರ ಮಹಾರಥವನ್ನು ಕೊಂದುಬಿಟ್ಟನು. ಭೀಷ್ಮದ್ರೋಣರ ಬಳಿಯಲ್ಲಿದ್ದ ಒಂಭತ್ತುಸಾವಿರ ರಥಿಕರುಬಂದು ಮೇಲೆ ಬೀಳಲು ಅವರನ್ನು ಕಡಿದಿಟ್ಟನು. ಸೈಂಧವನ ಮತ್ತು ಸುಯೋಧನನ ಕಡೆಯವರಾದ ಹತ್ತು ಸಾವಿರ ರಥಿಕರನ್ನು ಯಮನಗರಿಗೆ ಅಟ್ಟಿದನು. ಇವರಲ್ಲದೆ ಎಂಭತ್ತುಸಾವಿರ ಕುದುರೆಯ ದಳವನ್ನೂ ಐವತ್ತುಸಾವಿರ ಆನೆಗಳನ್ನೂ, ಹನ್ನೆರಡುಸಾವಿರ ರಥಗಳನ್ನೂ, ಮೂರುಕೋಟಿ ರಥಿಕರ ತಲೆಗಳನ್ನೂ ಕೆಡಹಿದನು. ಕಾಲಾಳುಗಳೆಷ್ಟುಮಂದಿ ಮಡಿದರೋ ಆ ಲೆಕ್ಕವೇ ಸಿಕ್ಕದು. ಕೃಪಾಚಾರ್ಯನ ಕವಚವು ಸೀಳಿತು. ಭೀಷ್ಮನು ಧರಿಸಿದ್ದ ಕವಚವು ಹರಿದುಹೋಯಿತು. ದ್ರೋಣನು ನೊಂದನು. ಕರ್ಣನಿಗೆ ಗಾಯವಾಯಿತು ಅಶ್ವತ್ಥಾಮನು ಮೈಮರೆತನು, ದುರ್ಯೋಧನನಿಗೆ ಪೆಟ್ಟಾಯಿತು. ಸೈಂಧವ ಶಕುನಿ ದುಶ್ಶಾಸನರ ಅವಯವಗಳಲ್ಲಿ ಬಾಣಗಳು. ನೆಟ್ಟುವು. ರಕ್ತಪ್ರವಾಹದಲ್ಲಿ ಹಲವರು ಉರುಳಿದರು.

ಮುಂಭಾಗದಲ್ಲಿದ್ದ ಬಲವೆಲ್ಲಾ ಮುರಿದುಹೋಯಿತು. ಮುಖ್ಯರಾದ ನಾಯಕರು ಬೆನ್ನು ಕೊಟ್ಟು ಓಡದೆ ಧೈರ್ಯದಿಂದ ನಿಂತರು. ಇನ್ನು ತಮಗೆ ಪ್ರಾಣದ ಆಸೆಯೇ ಇಲ್ಲವೆಂದು ತಿಳಿದುಕೊಂಡು ಅರ್ಜುನನನ್ನು ಎದುರಿಸಿದರು. ಸೆಡೆದು ಸೊಪ್ಪಾದ ಭಟರಗುಂಪನ್ನು ನೋಡಿ ಭೀಷ್ಮ ದ್ರೋಣರು "ಹೆದರಬೇಡಿರಯ್ಯಾ! ಮುಂದೆಬಂದುನಿಂದು ಕಾದಿರಿ" ಎಂದು ಹೇಳುತ್ತಿರಲು ಅವರೆಲ್ಲಾ ಪುನಃ ಬಂದು ಸಿದ್ಧರಾಗಿನಿಂತರು.

ಆಗ ಅಶ್ವತ್ಥಾಮನು ಕರ್ಣನನ್ನು ನೋಡಿ ಇಂತೆಂದನು.

ಅಶ್ವ—ಏನಯ್ಯಾ! ವೀರನೇ! ನಿನಗೆ ಗಾಯವಾಯಿತೆ? ನಿನ್ನ ಶೌರ್ಯಕ್ಕಿಂತ ಶತ್ರುವಿನ ಶೌರ್ಯವೇ ಹೆಚ್ಚಾಗಿರ ಬಹುದಲ್ಲವೆ? ಶತ್ರು ಸೈನ್ಯವೆಂಬ ಕಾಡಿಗೆ ದಾವಾಗ್ನಿಯಂತೆ ಇರುವ ವೀರನಾಗಿ ನೀನಿದ್ದರೂ ಕೂಡ ಕೌರವಸೈನ್ಯವೆಲ್ಲಾ ಹಾಳಾಯಿತಲ್ಲಾ! ನೀನು ಎಂತಹ ಕಠಿನ ಹೃದಯನು? (ಹಾಸ್ಯಮಾಡುತ್ತಾ) ಅಯ್ಯಾ, ಕರ್ಣನೇ! ಉಭಯರಾಯರ ಸೈನ್ಯದಲ್ಲಿ ನನ್ನಂತಹ ಸುಭಟನೇ ಇಲ್ಲವೆಂದು ಉಬ್ಬಟೆಯ ಮಾತುಗಳನ್ನಾಡಿ ಕೌರವೇಂದ್ರನ ಹಣವನ್ನೆಲ್ಲಾ ಬಾಚಿ ಹಾಕಿ ಕೊಂಡೆ, ಎಲೈ ಅಪಜಯವಧೂನಾಯಕನೇ! ಈಗ ನೋಡಿದರೆ ಅರ್ಜುನನೇ ಪಟುಭಟನಾಗಿರುವನಲ್ಲವೇ! ಎಲ್ಲಿ ನೋಡೋಣ? ನಿನ್ನ ಶೌರ್ಯವನ್ನು ತೋರಿಸು. ಮುಂಚೆ ಒಗಟಾದ ಕೆಚ್ಚುನುಡಿಗಳು ಏನಾದುವು? ಗೌರವಸ್ಥರು ಪರರ ಶೂರತನವರಿಯದೆ ಪೊಳ್ಳುಮಾತುಗಳನ್ನಾಡುವರೆ? ನಾವೇನೋ ಹಾರುವರು, ನಿಜ. ನೀನು ಕ್ಷತ್ರಕುಲೋದ್ಭವನಾಗಿದ್ದೀಯೆ, ನೀನು ಜಯಶೀಲನಾಗಿ ಅರ್ಜುನನು ಹಿಂದಿರುಗಿಸಿಕೊಂಡು ಹೋದ ಹಸುಗಳನ್ನು ಮರಳಿ ಸೆರೆಹಿಡಿ. ಆಗಂದೆ [illegible]ಲಾರೆಯೆಂದು ನಂಬುತ್ತೇನೆ.

ಕರ್ಣ—(ಸಿಟ್ಟಿನಿಂದ) ಎಲೈ ಗರುಡಿಯ ಗರುವನೇ! ಮಕ್ಕಳಿಗೆ ಬಾಣಗಳ ಸಾಧನೆ ಕಲಿಸಿ, ಅದರಿಂದ ಬದುಕುವ [illegible]

ತ್ರಿಯುಳ್ಳವನ ಮಗನಲ್ಲವೇ ? ನೀನು ನಮಗೆ ಸಮಾನನನೇ ? ನಿಮ್ಮ ಸಂಗದ ನಮಗೆ ಕೆಲಸವೇತಕ್ಕೆ ? ನಮ್ಮ ಶೌರ್ಯವನ್ನು ಮುಂದೆ ಯುದ್ಧದಲ್ಲಿ ಕಾಣಬಹುದು. ಬರಿಯ ಮಾತೇಕೆ ?

ಈ ಪ್ರಕಾರ ಕರ್ಣನು ಅಶ್ವತ್ಥಾಮನನ್ನು ತಿರಸ್ಕರಿಸಿ ನುಡಿದು ಕೂಡಲೇ ಹೊರಟು ಅರ್ಜುನನ ಬಳಿಗೆಬಂದು ಅವನನ್ನು ನೋಡಿ ಕೋಪದಿಂದ ಇಂತೆಂದನು.

ಕರ್ಣ—ಎಲಾ ವಿಜಯಾ ! ನಿಲ್ಲು ನಿಲ್ಲು, ಮುದುಕನಾದ ಭೀಷ್ಮನನ್ನೂ ಒಡ ಹಾರುವನಾದ ದ್ರೋಣನನ್ನೂ ಬೆದರಿಸಿ ಹೊತ್ತು ಕಳೆದರೆ ಫಲವೇನು ! ಶೂರನಿದ್ದರೆ ಬರಬೇಕು, ನಿನ್ನ ಬೇರನ್ನು ಕಿತ್ತು ಕಡಲಿನಲ್ಲಿ ತೊಳೆದು ಬಿಡುವೆನು, ನನ್ನನ್ನು ರಿಪುಭಟಮೃತ್ಯುವಾದ ಕರ್ಣನೆಂದು ಅರಿಯೆಯಾ ?

ಅರ್ಜು—ನಿಜ ನಿಜ ! ಯುದ್ಧದಲ್ಲಿ ನೀನು ಎಂಟೆದೆಯವನಲ್ಲವೆ ? ಕೌರವಸೇನೆಯಲ್ಲಿ ನಿನ್ನನ್ನು ಹೋಲುವ ವೀರರುಂಟೆ ? ಹಿಂಜರಿಯಬೇಡ, ನನಗೆ ಎದುರಾಗು. ನಿನ್ನ ಬಿಸಿ ಮಾಂಸವನ್ನು ಭೂತಗಣಗಳಿಗೆ ಉಣಿಸಿ ಅರ್ಜುನನು ಸಕಲ ಭೂತಬಾಂಧವನು ಎನಿಸಿಕೊಳ್ಳುವೆನು.

ಎಂದು ಬಲವಾಗಿ ಬಾಣದಿಂದ ಹೊಡೆದನು. ಕರ್ಣಾರ್ಜುನರಿಬ್ಬರೂ ಹುಬ್ಬುಗಂಟು ಹಾಕಿಕೊಂಡು ರೋಷಾವೇಶದಿಂದ ಬಿರುನುಡಿಗಳನ್ನು ನುಡಿಯುತ್ತಾ, ಸಿಂಹನಾದ ಮಾಡಿಕೊಂಡು ಬಿಲ್ಲನ್ನು ಟೇಂಕಾರಮಾಡಿ ಕಾದುತ್ತಿದ್ದರು, ಆಗ ಅರ್ಜುನನು "ಎಲವೋ ಕರ್ಣಾ ! ಈ ಧನುರ್ವಿದ್ಯೆಯು ಭಾರ್ಗವ ಸಂಪ್ರದಾಯದ್ದಲ್ಲವೆ ? [illegible]ಕೇಳು, ನನ್ನ ಬಲುಮೆಯು ಎಷ್ಟರದು ?" ಎಂದು ಹೇಳಿ ಆಕಾಶದಲ್ಲಿ ಬಾಣದ ಸೇತುವೆಯನ್ನು ಕಟ್ಟಿದನು. ಅದಕ್ಕೆ ಬದಲಾಗಿ ಕರ್ಣನು "ಅರ್ಜುನಾ! ಬಿರುದುಪಡೆದವರಲ್ಲಿ ನೀನು ಮೇಲುಗೈಯಾಗಿರುವೆ. ನೀನೇ ಬಿಲ್ಲಾಳು, ಧನುರ್ವಿದ್ಯಾ ವಿಶಾರದನೆನಿಸಿ ದ್ರೋಣನ ಗರುಡಿ

ಯಲ್ಲಿ ನೀನು ಕಲಿತವನಲ್ಲವೆ? ನಮ್ಮ ಬಾಣಗಳು ಬಹು ಸ್ವಲ್ಪ. ನಾವು ನಿಮಗೆ ಸಮಾನರಾಗುವೆವೆ?'' ಎನ್ನುತ್ತಾ ನೋಟಕರ ಕಣ್ಣುಗಳು ಝೂಮ್ಮೆನ್ನುವಂತೆ ಬಾಣದ ಮಳೆಗರೆದನು. ಆಗ ಸಾರಥಿಯಾದ ಉತ್ತರನು ಅರ್ಜುನನನ್ನು ಕುರಿತು ‟ಜೀಯಾ! ನೋಡಲಾರೆನು, ಬಾಣವೇ ಅದ್ವೈತಮಯವಾಗಿದೆ'' ಎಂದು ಕಣ್ಣುಮುಚ್ಚಿಕೊಂಡನು. ಆಗ ಅರ್ಜುನನು ‟ಎಲೈ ಕುಮಾರನೇ! ಏತಕ್ಕೆ ಹೆದರುವೆ? ನಾನಿರುವಾಗ ನಿನಗೇನು ಭಯ? ಧೈರ್ಯದಿಂದ ನೋಡುತ್ತಿರು,'' ಎಂದು ಹೇಳಿ ಕರ್ಣನ ಶರಪಂಜರವನ್ನು ಕಡಿದಿಟ್ಟನು. ಆಗ ಕರ್ಣನು ವಿಜಯನನ್ನು ಕುರಿತು ‟ಎಲೈ ಕಾಡಿನವೀರನೇ! ನೀನು ರಾಜಪುತ್ರನೋ! ಕೌರವರಾಯನು ಕಸಿ ಮಾಡಿದ ಹೋರಿಯಾದ ನಿನಗೆ ಶೌರ್ಯವೆತ್ತಣದು? ಏಕಚಕ್ರ ಪುರದಲ್ಲಿ ಭಿಕ್ಷವೆತ್ತಿ ತಿರುದುಂಡುದು ನೆನಪಿನಲ್ಲಿದೆಯೆ! ಸ್ತ್ರೀಯರಿಗೆ ನಾಟ್ಯವಿದ್ಯೆ ಕಲಿಸುವ ನಪುಂಸಕ ವೇಷವನ್ನು ಹೇಗೆ ಪಡೆದೆ! ವೀರಸಿರಿಯು ನಿನಗೆ ಹೇಗೆ ಬರುವುದು?'' ಎಂದು ಬಾಣಗಳಿಂದ ಅರ್ಜುನನನ್ನು ಹೊಡೆದು ನೋಯಿಸಿದನು.

ಅರ್ಜು:—ಎಲಾ ನೀನು ಬಲುಗಟ್ಟಿಗನು. ಬೇಟೆಗಾರರ ಬಳಗವುಳ್ಳವನು. ಶತ್ರುಸೈನ್ಯಕ್ಕೆ ಜಗ್ಗದ ಬಂಟನು. ಸ್ವಾಮಿ ಕಾರ್ಯಕ್ಕೆ ತಲೆ ಕೊಡುವವನು ನೀನೇ. ಮಾತು ಮಾತಿಗೂ ನಿನ್ನಹಾಗೆ ನಾನು ಕೋಪಗೊಳ್ಳತಕ್ಕವನಲ್ಲ. ಸ್ವಲ್ಪಹೊತ್ತು ಸೈರಿಸು.

ಎಂದು ಬಾಣದ ಮಳೆಯನ್ನು ಸುರಿಸಿದನು. ಕರ್ಣನು ಬಾಣದ ಸಮುದ್ರದಲ್ಲಿ ಮುಳುಗಿಹೋದನೋ, ಪಾತಾಳ ಲೋಕಕ್ಕೆ ಇಳಿದುಹೋದನೋ ಅಥವಾ ವಿಧಿಯೇ ಕದ್ದೊಯ್ದನೋ ಆ ರಣರಂಗದಲ್ಲಿ ಕರ್ಣನು ಕಾಣಿಸಲೇ ಇಲ್ಲ. ಇನ್ನು ಅವನನ್ನು ಹೊಗಳುವುದೇತಕ್ಕೆ? ಅವನಪಾಡು ತೀರಿತು. ಭೀಷ್ಮನಿದ್ದರೆ ಅವನ ಮರೆ ಸೇರಿಕೊ, ಎಂದು ಕುರುಪತಿಗೆ ಹೇಳಿರಿ, ಎಂಬದಾಗಿ ಸೈನ್ಯವು ಬೊಬ್ಬೆ

ಯಿಟ್ಟಿತು. ಅಷ್ಟರಲ್ಲಿ ಮೇಘಮಾಲೆಯನ್ನು ಭೇದಿಸಿಕೊಂಡು ಮೂಡುವ ಸೂರ್ಯನಂತೆ ಕರ್ಣನು ಕಾಣಿಸಿಕೊಂಡನು. ಅವನು ಅರ್ಜು ನನ ಶರಪಂಜರವನ್ನು ಕಡಿದು ಒಳಕ್ಕೆ ನುಗ್ಗಿ ಅವನ ರಥವನ್ನು ಮುಟ್ಟಿದನು. ಆಗ ಉತ್ತರನು ನಡುಗಿದನು. ಅವನ ರಥಾಶ್ವಗಳು ನೊಂದುವು ಆಕಾಶವು ಒಡೆದುಹೋಗುವಂತೆ ಧ್ವಜಾಗ್ರದಲ್ಲಿ ಕುಳಿ ತಿದ್ದ ಆಂಜನೇಯನು ಅಬ್ಬರಿಸಿದನು. ಒಂದು ನಿಮಿಷದಲ್ಲಿಯೇ ರಣವು ಅದ್ಭುತವಾಗಿ ತೋರಿತು. ಆಗ ಕುರುಸೈನ್ಯವು "ಎಲಎಲಾ! ಕರ್ಣನ ಕೈಚಳಕವನ್ನು ನೋಡಿದಿರಾ? ಇವನಿಗೆ ಸೋಲಾಯಿತೆಂಬು ವರ ನಾಲಗೆಯನ್ನು ಸೀಳಿರಿ. ಇವನೇ ಬಿಲ್ಲಾಳು. ಇವನೇ ರಾಯನ ಪಟ್ಟದ ಆನೆ. ಈಗ ಶತ್ರುವಿನ ಹಣೆಯಬರಹವು ತೊಡೆದು ಹೋಯಿತು." ಎಂದು ಬೊಬ್ಬೆಯಿಟ್ಟಿತು. ಆಗ ಕರ್ಣನು ಉತ್ಸಾ ಹಾತಿಶಯದಿಂದ ಬಿಲ್ಲಿನ ಬಲುಮೆಯನ್ನು ತೋರಿಸಿ ಮೆರೆದನು. ಆಗ ಅರ್ಜುನನು ಕರ್ಣನ ಬಾಣಗಳನ್ನೆಲ್ಲಾ ಕತ್ತರಿಸಿಬಿಟ್ಟನು. ಮತ್ತೆರಡು ಬಾಣಗಳಿಂದ ಅವನ ಸಾರಥಿಯನ್ನೂ, ಐದುಬಾಣದಿಂದ ರಥದ ಕುದು ರೆಗಳನ್ನೂ, ನಾಲ್ಕುಬಾಣಗಳಿಂದ ಅವನ ಕೈಯಲ್ಲಿದ್ದ ಬಿಲ್ಲನ್ನೂ, ಕತ್ತ ರಿಸಿಹಾಕಿದನು. ಆಗ ಕರ್ಣನು ಅವಮಾನಹೊಂದಿ ಮೌನವಾಗಿ ರಣರಂಗದಿಂದ ಓಡಿಹೋದನು.

ಅದನ್ನು ನೋಡಿ ದ್ರೋಣಾಚಾರ್ಯನು "ಇದೇನು ಹೀಗೆ ಓಡು ತ್ತೀಯೇ! ಅಪಜಯವೆಂಬ ಕೀಳುಹೆಂಗಸನ್ನು ಸಂಪಾದಿಸಿದೆಯೋ? ವಾ ಗ್ವಾದಕ್ಕೆ ನೀನೇ ಒತ್ತಾಳು, ಆಗ ಬೊಗುಳಿದ ನಾಲಿಗೆ ಏನಾಯಿತು? ಕಾಡು ಹರಟೆಯೆಂಬ ಕೀರ್ತಿಯು ತಲೆ ಹಿಡುಕರು ಕೂಡಿದಂತೆ ಆಯಿ ತು. ಭಲಾ!" ಎಂದು ಹಾಸ್ಯಮಾಡಿ ಅರ್ಜುನನಮೇಲೆ ಕಾಣಿಸಿ ಕೊಂಡು ಇಂತೆಂದನು.

ದ್ರೋಣ—ಎಲೈ ವೀರನೇ! ನನಗೆ ಇದಿರಾಗು. ಹಾರುತ

ರಿಗೆ ಸಾಹಸವೆತ್ತಣದು ? ಕರ್ಣನನ್ನು ಹೊಡೆದು ಓಡಿಸಿದ ಬಲಶಾಲಿ
ಯೆಂದು ಗರ್ವಿಸಬೇಡ. ಯುದ್ಧದಲ್ಲಿ ನಮ್ಮ ಕೈಗುಣವನ್ನು ನೋಡು
ಪರಮೇಶ್ವರನು ಅನುಗ್ರಹಿಸಿದ ದಿವ್ಯಾಸ್ತ್ರಗಳೆಲ್ಲಾ ನಿನ್ನ ಕೈಸೇರಿವೆಯ
ಲ್ಲವೆ ? ಎಲ್ಲಿ ! ಅವುಗಳನ್ನು ತೋರಿಸು. ಇಗೋ ಈ ಬಾಣಗಳನ್ನು
ಸೈರಿಸಿಕೋ.

ಅರ್ಜು—ಗುರುಗಳೇ ! ಮರ್ಯಾದೆಯಿಂದ ಎದುರುಗೊಳ್ಳುವೆ
ನು. ತಮಗೆ ಸ್ವಾಗತವೆ ? ಇಗೋ ನಿಮಗೆ ನಮಸ್ಕಾರ, ನಮ್ಮ
ಅಭಿವೃದ್ಧಿಯು ನಿಮ್ಮದೇ ಅಲ್ಲವೇ ! ನನಗೆ ಈ ವಿದ್ಯೆ ಬಂದುದು
ಯಾರಿಂದ ? ನಿಮ್ಮ ಅನುಗ್ರಹದಿಂದಲೇ ಅಲ್ಲವೆ ? ನನಗೆ ಪರಮೇ
ಶ್ವರನೂ ನೀವೇ, ವಿಷ್ಣುವೂ ನೀವೇ, ನಮ್ಮ ಹೃದಯವೇ ನಿಮ್ಮದು,
ನಿಮ್ಮ ಎದುರಿಗೆ ನಿಂತು ಕಾದುವುದಕ್ಕೆ ಈ ದೀನನು ಎಷ್ಟರವನು ?
ನಿಮ್ಮ ಆಶೀರ್ವಾದಕ್ಕೆ ಪಾತ್ರನೆಂದು ನನ್ನನ್ನು ನೋಡಿರಿ (ಎಂದು
ಬಾಣಗಳನ್ನು ಪ್ರಯೋಗಿಸಿದನು.)

ದ್ರೋಣ—ಮಗುವೇ ! ಯುದ್ಧಕ್ಕೆ ಎದುರಾಗಿ ನಿಂತಾಗ ವಿನ
ಯವು ಸಲ್ಲದು ಎದುರಿಸಿದವರನ್ನು ಕೊಲ್ಲುವುದು ರಾಜಧರ್ಮವು,
ಸಾಕು. ವಿನಯವು ಒತ್ತಟ್ಟಿಗಿರಲಿ. ಸೈರಿಸಿಕೊಂಡು ಈ ಬಾಣಗಳ
ಶಕ್ತಿನೋಡು.

ಅರ್ಜು—(ವಿನಯದಿಂದ) ಆಚಾರ್ಯರೇ ! ಪ್ರತಿಬಿಂಬದಲ್ಲಿ
ಮುಖಕ್ಕಿಂತ ಅತಿಶಯವಿರುವುದೆ ? ನೀವು ಹೇಗೆ ಕಲಿಸಿದಿರೋ ಹಾಗೆ
ಯೇ ನಿಮಗೊಪ್ಪಿಸುತ್ತೇನೆ. ಅವುಗಳನ್ನು ನೀವೇ ಪರೀಕ್ಷಿಸಬಹುದು.
ಭೂಮ್ಯಾಕಾಶಗಳನ್ನು ಮುಚ್ಚುವಂತೆ ಬರುತ್ತಿರುವ ಈ ಶರಪರಂಪರೆ
ಯನ್ನು ನೋಡಿರಿ.

ದ್ರೋಣ—ಮಗುವೇ ! ಇಂದ್ರಿಯ ಚಾಪಲ್ಯದಿಂದ ಯಾವ
ಸದಲ್ಲಿ ಅಶ್ವತ್ಥಾಮನು ನನಗೆ ಪುತ್ರನಾದನು. ಆದರೆ ಆ ಅಶ್ವತ್ಥಾ

ಮನಿಗಿಂತ ನಮ್ಮ ಮೋಹದ ಪುತ್ರನೆಂದರೆ ನೀನೇ ಎಂದು ಹೇಳಬೇಕು. ನಿನ್ನ ಬಾಣಪ್ರಯೋಗವು ಅನ್ಯಾದೃಶವಾದುದು. ನೀನೇ ಅಸಮಾನ ಬಲನು. ಆದಾಗ್ಯೂ ನಮ್ಮ ಬಲವನ್ನೂ ಸ್ವಲ್ಪಮಟ್ಟಿಗೆ ನೋಡು.

ಎಂದು ಬಾಣಗಳನ್ನು ಸುರಿಸಿದನು. ಆ ಬಾಣಗಳು ಬಹುವೇಗವಾಗಿ ಹೊರಟುಬರುತ್ತಿದ್ದುವು. ''ಇವು ಅಗ್ನಿಗರ್ಭದ ಜ್ವಾಲೆಗಳೋ, ವಾಯುಗರ್ಭದ ಬಾಣಗಳೋ, ಅಥವಾ ವಜ್ರಾಯುಧದ ಮರಿಗಳೋ'' ಎಂಬಂತೆ ಮೊನೆಯಾದ ಕಿಡಿಗಳು, ಹೊಗೆ,ಧ್ವನಿ ಇವುಗಳನ್ನು ಕಾರುತ್ತಾ ನುಗ್ಗಿಬರುತ್ತಿದ್ದುವು. ಆಗ ಅರ್ಜುನನು ''ಗುರುಗಳೇ! ನೀವೇ ಧನುರ್ವಿದ್ಯಾ ವಿಶಾರದರು. ಶಸ್ತ್ರನಿರ್ಮಾಣದಲ್ಲಿ ಬ್ರಹ್ಮನನ್ನೂ ಮೀರಿಸಿರುವಿರಿ'' ಎಂದು ಹೊಗಳಿ, ಗುರುವಿನ ಬಾಣಗಳಿಂದ ಉಂಟಾಗಿದ್ದ ಕತ್ತಲೆಯನ್ನು ತನ್ನ ಪ್ರತ್ಯಸ್ತ್ರಗಳೆಂಬ ಸೂರ್ಯಕಿರಣಗಳಿಂದ ಅಪಹರಿಸಿದನು. ಇದನ್ನು ನೋಡಿ ದೇವೇಂದ್ರನು ತನ್ನ ಮಗನಾದ ಅರ್ಜುನನ ಶರವಿದ್ಯಾಕೌಶಲ್ಯಕ್ಕೆ ಮೆಚ್ಚಿ ತಲೆದೂಗುತ್ತಿದ್ದನು. ದೇವತಾ ಸಮೂಹವು ''ಇದೇನಿದು! ಆಕಾಶವೇ ಬಾಣಗಳನ್ನು ಈನುತ್ತಿದೆಯೋ? ಬಾಣ ಸಮುದ್ರವು ಉಕ್ಕಿಬರುತ್ತಿದೆಯೋ! ಅಥವಾ ಇದು ಅರ್ಜುನ ಬ್ರಹ್ಮನ ಬಾಣಸೃಷ್ಟಿಯೋ'' ಎಂದು ಹೊಗಳುತ್ತಿದ್ದಿತು. ಆ ಬಳಿಕ ಅರ್ಜುನನ ಬಾಣದಪೆಟ್ಟಿನಿಂದ ದ್ರೋಣಾಚಾರ್ಯನ ಸಾರಥಿಯು ಮೈಮರೆತನು. ಗುರುವು ತನ್ನ ರಥವನ್ನು ಹೊರಕ್ಕೆ ತೊಲಗಿಸಿದನು. ಇದನ್ನು ನೋಡಿ ಕರ್ಣನು ''ಓಹೋ!ದ್ರೋಣಾಚಾರ್ಯರು ಗೆದ್ದೇಬಿಟ್ಟರು! ಮತ್ತೇನು! ಕೌರವನ ಹಗೆ ಹರಿದುಹೋಯಿತು. ನಮ್ಮ ಮಹಾರಾಜರಿಗೆ ಅಭ್ಯುದಯವಾಯಿತು.'' ಎಂದು ಕೈತಪ್ಪಾಳೆ ಹೊಡೆದು ಹಾಸ್ಯ ಮಾಡಿದನು. ಇದನ್ನು ನೋಡಿ ಗುರುಪುತ್ರನಾದ ಅಶ್ವತ್ಥಾಮನಿಗೆ ಬಲುಸಿಟ್ಟುಬಂತು. ಆಗ ಆತನು ಕರ್ಣನನ್ನು ನೋಡಿ ಇಂತೆಂದನು.

ಅಶ್ವ—ಕರ್ಣನೇ! ನಮ್ಮ ಅಯ್ಯನ ಸಾರಥಿಯು ಸತ್ತದ್ದ

ರಿಂದ ಸೋಲಾಯಿತೆಂದು ತಿಳಿದೆಯೊ? ಸುಮ್ಮನೆ ಏಕೆ ಬಗುಳುತ್ತೀ? ನಮ್ಮಯ್ಯನ ಯುದ್ಧವಿದ್ಯೆಯನ್ನು ವಿಮರ್ಶಿಸಿ ನೋಡು. ಈ ಖುಲ್ಲ ಮಾತುಗಳಿಂದ ಏನುಫಲ?

ಕರ್ಣ—ಅಯ್ಯಾ ಆಚಾರ್ಯರೇ! ನೀವು ಕಲಿತ ಬಿಲ್ಲುವಿದ್ಯೆಯೂ, ಧನುರ್ವೇದದ ಅರ್ಥವೂ, ಯುಕ್ತಿಯ ಉಪನ್ಯಾಸಗಳೂ ಎಲ್ಲಿಹೋದುವು? ನೀವು ವಿದ್ವಾಂಸರು,ಜ್ಞಾನಧನರು, ನಿಮ್ಮ ವಿದ್ಯಾಮಹಿಮೆಗಳನ್ನು ನಿಲ್ಲಿಸಿರಿ, ಕೇಳಲಾರೆನು. ಸಾಕುಸಾಕು.

ಅಶ್ವ—(ಬಹಳ ಕೋಪಿಸಿಕೊಂಡು) ನೀನು ತ್ರಿಭುವನ ವಿದ್ಯಾ ಚಕ್ರವರ್ತಿಎಂದು ಪರಾಕ್ರಮವನ್ನು ಕೊಚ್ಚಿಕೊಂಡರೆ ಏನಾಯಿತು? ಇಂದ್ರನನ್ನು ಕೂಡ ಅಂಜಿಸುವ ಭುಜಬಲವು ಈ ಅರ್ಜುನನಿಗಲ್ಲದೆ ಮತ್ತಾರಿಗೆ ಉಂಟು? ಇದು ಸರಿಯಲ್ಲ. ಮುಚ್ಚು ಬಾಯಿ.

ಹೀಗೆ ತಮ್ಮತಮ್ಮಲ್ಲಿಯೇ ಕರ್ಣಾಶ್ವತ್ಥಾಮರು ವಾಗ್ವಾದ ಮಾಡುತ್ತಿದ್ದರು.ಅರ್ಜುನನ ಶಸ್ತ್ರಾಸ್ತ್ರ ಪ್ರಯೋಗದ ಕೌಶಲ್ಯವನ್ನು ವಿವರಿಸುವುದಕ್ಕೆ ಯಾರಿಂದ ಆದೀತು! ಎಂದು ದೇವತೆಗಳು ಸೈಯೆನ್ನುವಹಾಗೆ ಆತನು ತಿರುವನ್ನೆಳೆದು ಬಾಣಗಳನ್ನು ಪ್ರಯೋಗಿಸಿದನು. ಅವು ಆಕಾಶವನ್ನೆಲ್ಲಾ ತುಂಬಿ ಬಿಟ್ಟುವು. ಆಗ ಅರ್ಜುನನು ಉತ್ತರನನ್ನು ನೋಡಿ, "ಎಲೈ ಕುಮಾರನೇ! ಇತ್ತಕಡೆ ನೋಡಿದೆಯಾ? ಇವರು ನಮ್ಮಗುರುಪುತ್ರರಾದ ಅಶ್ವತ್ಥಾಮಾಚಾರ್ಯರು; ಇವರನ್ನು ಬಾಣಗಳಿಂದ ನೋಯಿಸಿ ಅವಮಾನ ಪಡಿಸುವುದು ಸರಿಯಲ್ಲ. ಕೌರವನ ಸೈನ್ಯದಲ್ಲಿ ಈತನಿಗೆ ಸಮಾನರಾದ ವೀರರೇ ಇಲ್ಲ. ಈಶ್ವರನ ಬಲಕ್ಕೆ ಸಮವಾದ ಬಲವುಳ್ಳವನು. ಅಸ್ತ್ರವಿದ್ಯಾ ಪಾರಂಗತನು.'' ಎಂದು ಹೊಗಳಿ ಆತನಮೇಲೆ ಬಾಣಗಳನ್ನು ಪ್ರಯೋಗಿಸಿದನು. ಅಶ್ವತ್ಥಾಮನು ಅವುಗಳನ್ನೆಲ್ಲಾ ತುಂಡುತುಂಡಾಗಿ ಕತ್ತರಿಸಿ, ಸೂರ್ಯಮಂಡಲವು ಮುಚ್ಚಿಹೋಗುವಂತೆ ಬಾಣಗಳನ್ನು ಸುರಿಸಿದನು. ಇವರಿಬ್ಬರೂ ಸಮಾನ

ಬಲರೆಂದು ಆಕಾಶದಲ್ಲಿ ದೇವತೆಗಳು ಹೊಗಳುವ ಹಾಗೆ ರಣಕೇಳಿಯು ವಿನೋದಕರವಾಗಿದ್ದಿತು. ಗುರುಪುತ್ರನ ಬಾಣಗಳೆಲ್ಲವೂ ಮುಗಿದು ಹೋದರೂ ಅರ್ಜುನನ ಬಾಣಗಳು ಮುಗಿಯಲಿಲ್ಲ. ಅಶ್ವತ್ಥಾಮನು ಕೈಸೋತು ಸುಮ್ಮನೆ ನಿಂತನು. ಮೇರುವು ಮುಖತಿರುಗಿಸಿದಂತೆ ಅವನ ಸ್ಥಿತಿ ಇತ್ತು. ಆಗ ಕೃಪಾಚಾರ್ಯನು ಅಶ್ವತ್ಥಾಮನು ಸೋತುಹೋದ ನಲ್ಲಾ ಎಂದು ತಿಳಿದು ಆತುರದಿಂದ ಬಂದು, ಅರ್ಜುನನನ್ನೆದುರಿಸಿ ಅವನನ್ನು ಅಡ್ಡಹಾಕಿ ಇಂತೆಂದನು.

ಕೃಪ—ಎಲೈ ಪಾರ್ಥನೇ ! ತಂದೆಮಕ್ಕಳನ್ನು ಸೋಲಿಸಿದೆ ನೆಂದು ಅಹಂಕಾರ ಪಡಬೇಡ. ವೀರನಾದ ನನ್ನೆದುರಿಗೆ ನಿಂತು ಕಾದು.

ಅರ್ಜುನನು—ಆಚಾರ್ಯರೇ ! ನೀವು ದಯಮಾಡಿಸಿದುದು ಒಳ್ಳೆಯದೇ ಆಯಿತು. ಈಗ ಶಿಷ್ಯನ ವಿದ್ಯೆಯನ್ನು ಪರೀಕ್ಷಿಸಬಹುದು.

ಈ ಪ್ರಕಾರ ಹೇಳಿ ಗುರುಗಳನ್ನು ವಂದಿಸಲಿಕ್ಕೆ ಒಂದು ಜತೆ ಬಾಣವನ್ನು ಪ್ರಯೋಗಿಸಿದನು. ಅದು ಆತನ ರಥವನ್ನು ಕಳಚಿತು. ಆಗ ಆಚಾರ್ಯನು ಕೋಪಿಸಿ, ಅರ್ಜುನನ ಮೇಲೆ ಐದು ಬಾಣಗಳನ್ನು ಪ್ರಯೋಗಿಸಿದನು. ಅವು ಅರ್ಜುನನ ರಥದ ಕುದುರೆಗಳಿಗೆ ತಗಲಿ ಅವು ಗಳನ್ನು ನೋಯಿಸಿದುವು. ಇದನ್ನು ನೋಡಿ ಅರ್ಜುನನು ಸಿಟ್ಟುಗೊಂಡು ಅರ್ಧಚಂದ್ರಾಕೃತಿಯ ಬಾಣದಿಂದ ಸಾರಥಿಯನ್ನೂ, ಕುದುರೆಗಳನ್ನೂ, ಗುರುವಿನ ಕೈಯಲ್ಲಿದ್ದ ಬಿಲ್ಲನ್ನೂ ಕತ್ತರಿಸಿದನು. ಕೃಪಾಚಾರ್ಯನು ಭಂಗಿ ತನಾಗಿ ರಣರಂಗದಿಂದ ಓಡಿಹೋದನು. ಆಗ ಕುರುಸೈನ್ಯವು "ಎಲ ಎಲಾ ! ಕರ್ಣ, ದ್ರೋಣ, ಅಶ್ವತ್ಥಾಮ, ಕೃಪಾಚಾರ್ಯ ಇವರೆಲ್ಲರೂ ಕಾದಿ ಸೋತುಹೋದರು. ಅರ್ಜುನನ ಶೌರ್ಯವು ಹೆಚ್ಚುತ್ತಾ ಬಂ ದಿದೆ. ನಮ್ಮ ಬಲದಲ್ಲಿ ಇಷ್ಟುಮಂದಿ ಸುಭಟರಿದ್ದರೂ ಅರ್ಜುನನನ್ನು ಗೆಲ್ಲತಕ್ಕವರೇ ಇಲ್ಲವಲ್ಲ! ಇನ್ನು ನಮಗೆ ಜಯ ಸಿಕ್ಕುವುದು ಕಷ್ಟ" ಎಂದು ಅರಚುತ್ತಾ ಬಾಯಿಬಿಡುತ್ತಿತ್ತು.

ಆಗ ಭೀಷ್ಮಾಚಾರ್ಯನು ‘‘ಕುರುಸೇನೆಯು ಅನಾಯಕವಾಯಿತು. ಇದನ್ನು ರಕ್ಷಿಸುವುದಕ್ಕೆ ಇದೇ ಸಮಯವು. ತಡೆಮಾಡಬಾರದು.’’ ಎಂದು ಕೈಯಲ್ಲಿ ಬಿಲ್ಲನ್ನು ತೆಗೆದುಕೊಂಡು, ಬೆರಳಲ್ಲಿ ಮಿಡಿದು, ಬಾಣವನ್ನು ತೂಗುತ್ತಾ, ಸಂಧಾನಮಾಡಿ ಪ್ರಯೋಗಿಸಿ, ಅರ್ಜುನನ ಉರವಣೆಯನ್ನು ತಡೆದನು. ಇದನ್ನು ನೋಡಿ, ಓಡಿಹೋಗುತ್ತಿದ್ದ ಸೈನ್ಯವು ಮರಳಿ ಧೈರ್ಯವನ್ನು ತಂದುಕೊಂಡು ಒಟ್ಟಾಗಿ ಬಂದು ಸೇರಿತು. ಕೂಡಲೇ ಗಂಭೀರ ಭೇರೀರವವು ಭೋರ್ಗರೆಯಿತು. ‘‘ಭೀಷ್ಮಾಚಾರ್ಯರ ಕೋಪವು ಅಸಾಧಾರಣವಾದುದು, ಇವರನ್ನು ಎದುರಿಸಲು ಹರಿಹರಾದ್ಯರಿಗೆ ಕೂಡಅಸಾಧ್ಯವು.ತೊಲಗಿರಿ ತೊಲಗಿರಿ’’ ಎಂಬಂತೆ ಕಹಳೆಗಳು ಉಲಿಯುತ್ತಿದ್ದುವು. ಆಗ ಭೀಷ್ಮನು ಅರ್ಜುನನನ್ನು ನೋಡಿ,—‘‘ಕಂದಾ! ಅರ್ಜುನಾ! ದ್ರೋಣ ಕೃಪಾಶ್ವತ್ಥಾಮ ಕರ್ಣಾದಿಗಳನ್ನು ಗೆದ್ದುದರಿಂದ ನೀನು ಮಹಾವೀರನೆಂದು ಭುವನಖ್ಯಾತನಾದೆ. ಬಹುಸಂತೋಷವಾಯಿತು. ನಿಮ್ಮ ಅಜ್ಞಾತವಾಸದ ಅವಧಿಯು ಮುಗಿಯಿತೆ ? ಇನ್ನು ನೀವು ಕೌರವಕುಲವನ್ನು ಗೆದ್ದು ನಿರಾತಂಕವಾಗಿ ಭೂಮಿಯನ್ನಾಳಬಹುದು.’’ಎಂದು, ಹರಸಿದನು ; ಕ್ಷಾತ್ರಧರ್ಮದ ಪ್ರಕಾರ ಕಾದದೆ ಇರಬಾರದೆಂದು ಆತನ ಮೇಲೆ ಬಾಣಗಳನ್ನು ಪ್ರಯೋಗಿಸಿದನು. ಆಗ ಅರ್ಜುನನು ವಿನಯದಿಂದ ಅಜ್ಜನಿಗೆ ಕೈಮುಗಿದು,‘‘ಆರ್ಯನೇ! ನಿಮ್ಮ ಕೃಪಾದೃಷ್ಟಿಯೇ ನಮ್ಮ ಪರಮೈಶ್ವರ್ಯವು. ನಮ್ಮ ಪರಾಕ್ರಮವು ತಮ್ಮಲ್ಲಿ ಫಲಿಸುವುದೇ? ಗರ್ವಕ್ಕೆ ಕೊನೆಯೇ ಇಲ್ಲವೆಂದು ಬಲ್ಲವರು ಹೇಳುವರು, ನಿಮ್ಮ ಸ್ವತ್ತಾಗಿರುವ ನಮಗೆ ಇನ್ನು ಬೇರೆ ರಾಜ್ಯದ ಹೆಮ್ಮೆ ಏತಕ್ಕೆ ? ವ್ಯವಹಾರ ದೃಷ್ಟಿಯಿಂದ ಯುದ್ಧಕ್ಕೆ ನಿಂತಿರುವುದರಿಂದ ಸುಮ್ಮನಿರದೆ ಕೈಯಲ್ಲಾದಮಟ್ಟಿಗೆ ನೋಡುತ್ತೇನೆ. ಕಟಾಕ್ಷಿಸಬೇಕು.’’ ಎಂದು ಭೀಷ್ಮಾಚಾರ್ಯನ ಬಾಣಗಳಿಗೆ ಪ್ರತಿಯಾಗಿ ಬಾಣಗಳನ್ನು ಪ್ರಯೋಗಿಸಿದನು. ಭೀಷ್ಮನು ಅರ್ಜುನನ

ಬಾಣಗಳನ್ನು ಕತ್ತರಿಸಿ, ಎರಡು ಬಾಣಗಳಿಂದ ನರನ ಸಾರಥಿಯನ್ನು ನೋಯಿಸಿ, ಐದುಬಾಣಗಳಿಂದ ಹನುಮಂತನ ಹಣೆಗೆ ಬಡಿದನು; ಎಂಟುಬಾಣಗಳಿಂದ ಅರ್ಜುನನ ಕವಚವನ್ನು ಹರಿದು, ಮೂರಂಬಿನಿಂದ ಅವನ ಎದೆಯುಬೆಸುಗೆ ಬಿಡುವಂತೆ ಹೊಡೆದು ಬೊಬ್ಬಿರಿದನು.

ಭೀಷ್ಮಾಚಾರ್ಯನ ಬಾಣದ ಪೆಟ್ಟಿಗೆ ಉತ್ತರನ ಮೈಬಿರಿಯಿತು. ಧ್ವಜದಲ್ಲಿದ್ದ ಆಂಜನೇಯನು ಆಯಾಸಗೊಂಡು, ರಾವಣನ ಗಾಯದ ಪೆಟ್ಟನ್ನು ನೆನೆದು ಒರಲಿದನು. ಆಗ ಅರ್ಜುನನು ಮೈಮರೆತಿದ್ದ ಉತ್ತರನನ್ನು ಎಬ್ಬಿಸಿ ವಸ್ತ್ರದಿಂದ ಬೀಸಿ, ಮೂಗಿನ ಗಾಳಿಯನ್ನು ನೋಡಿ ಶೈತ್ಯೋಪಚಾರವಮಾಡಿದನು. ಸ್ವಲ್ಪಹೊತ್ತಿನಮೇಲೆ ಉತ್ತರನು ಚೇತರಿಸಿಕೊಂಡು, ಅರ್ಜುನನನ್ನು ನೋಡಿ, "ವಿಜಯನೇ! ಬಹಳವಾಗಿ ನೊಂದೆನು. ನಿಮ್ಮ ಪಿತಾಮಹನ ಶೌರ್ಯವು ಹಿರಿದು" ಎಂದನು. ಅದಕ್ಕೆ ಅರ್ಜುನನು "ಎಲೈ ಕುಮಾರನೇ! ಭೀಷ್ಮಾಚಾರ್ಯರು ಎಂದರೆ ಸಾಮಾನ್ಯರಲ್ಲ. ಅದ್ವಿತೀಯಧನುರ್ವಿದ್ಯಾ ನಿಪುಣರು. ಆದರೂ ನನ್ನ ಬಳಿ ಇರುವ ನಿನಗೆ ಭಯವೆತ್ತಣದು! ಇಗೋ ಶಸ್ತ್ರಾಸ್ತ್ರಗಳ ಪೆಟ್ಟನ್ನು ತಡೆಯುವ ಕವಚವಿದೆ. ತೆಗೆದುಕೊ, ಇದನ್ನು ಧರಿಸಿ ಹೆದರದೆ ಸ್ಥಿರವಾಗಿ ನಿಲ್ಲು" ಎಂದು ಕವಚವನ್ನು ಕೊಟ್ಟನು. ಅವನು ಆ ಕವಚವನ್ನು ಧರಿಸಿಕೊಂಡು, ಅರ್ಜುನನನ್ನು ನೋಡಿ, "ಮಿತ್ರನೇ! ಯುದ್ಧದಮುಖವನ್ನೇ ಅರಿಯದ ನನ್ನನ್ನು ನೋಯಿಸಿದವನು ನೀನೋ ಭೀಷ್ಮನೊ! ನೋಡು" ಎಂದನು. ಅರ್ಜುನನು ನಸುನಗುತ್ತಾ "ಉತ್ತರನೇ! ಈ ತಪ್ಪು ನಮ್ಮದೇ ಸರಿ. ಸ್ವಲ್ಪ ಸುದಾರಿಸಿಕೋ. ಇನ್ನು ಹೆದರಬೇಡ. ಈ ಕವಚವು ಬಾಣಗಳನ್ನು ತಡೆಯುವುದು. ನಿನ್ನ ಹಾಗೆಯೇ ನಾನೂ ನೊಂದಿರುವೆನು. ನನ್ನ ಗಾಯಗಳನ್ನು ನೋಡು. ಧ್ವಜಾಗ್ರದಲ್ಲಿರುವ ವಾಯುಪುತ್ರನೂ ಒರಲುತ್ತಿರುವನು. ವಜ್ರಮಯವಾದ ನನ್ನ ದೇಹದಲ್ಲಿ ಬಾಣಗಳು ನೆಟ್ಟಿವೆ. ನೋಡು. ಈ ಭೀಷ್ಮನು ಮುನಿದರೆ ಕಾಲರುದ್ರನೆಂದು ತಿಳಿ." ಎಂದು ಹೇಳಿ, ಮೂರುಬಾಣಗಳಿಂದ ಭೀಷ್ಮನನ್ನು ಹೊ

ಡೆದನು. ಮತ್ತು ಅವನ ಸಾರಥಿಯನ್ನೂ ಹೊಡೆದು ನೋಯಿಸಿದನು. ಅವನಧ್ವಜವು ಮುರಿದುಬಿತ್ತು, ರಥವು ತುಮುರು ತುಮುರಾಯಿತು. ಭೀಷ್ಮನು ಕಂಗೆಟ್ಟು, ಎದುರಾಳನ್ನು ನೋಡಿ ‹‹ಭಲಾ ಅರ್ಜುನಾ! ನೀನೇ ಶೂರನು'' ಎಂದು ಅವನ ಮೇಲೆ ಆರುಬಾಣಗಳನ್ನು ಪ್ರಯೋಗಿಸಿದನು. ಅವು ಅರ್ಜುನನ ದೇಹದೊಳಕ್ಕೆ ಹೊಕ್ಕು ರಕ್ತವನ್ನು ಸುರಿಸಿದುವು. ಆಗ ಅರ್ಜುನನು ಸಿಟ್ಟಾಗಿ, ಒಂದು ಮಹಾ ಶರವನ್ನು ಪ್ರಯೋಗಿಸಿದನು. ಭೀಷ್ಮನು ಅದನ್ನು ಮಧ್ಯಮಾರ್ಗದಲ್ಲಿಯೇ ಕತ್ತರಿಸಿದನು. ಆಮೇಲೆ ಅರ್ಜುನನು ಆಗ್ನೇಯಾಸ್ತ್ರವನ್ನು ಬಿಟ್ಟನು. ಕುರುಸೇನೆಯೆಲ್ಲಾ ಕಳವಳಿಸಿತು. ಭೀಷ್ಮನು ವರುಣನ ಅಸ್ತ್ರವನ್ನು ಪ್ರಯೋಗಿಸಿ ಬೆಂಕಿಯನ್ನು ನಂದಿಸಿದನು. ಭೀಷ್ಮಾರ್ಜುನರಿಬ್ಬರೂ ರೋಷಭೀಷಣರಾಗಿ ಕೌಬೇರ, ವಾಯವ್ಯ, ನಿರುರುತಿ, ಯಾಮ್ಯ, ಐಂದ್ರ, ಶಾಂಕರ ಮುಂತಾದ ಮಂತ್ರಾಸ್ತ್ರಗಳನ್ನು ಪ್ರಯೋಗಿಸುತ್ತ, ಒಬ್ಬೊಬ್ಬನು ಪ್ರತ್ಯಸ್ತ್ರಗಳಿಂದ ಅವುಗಳನ್ನು ಕಡಿದಿಡುತ್ತಾ ಬಂದರು.

ಆಗ ವಿಮಾನದಲ್ಲಿ ಕುಳಿತು ನೋಡುತ್ತಿದ್ದ ದೇವೇಂದ್ರನು ‹‹ಅರ್ಜುನನ ಬಾಣಗಳಿಗೆ ಎದುರಿಸಿ ನಿಲ್ಲಬೇಕಾದರೆ ಭೀಷ್ಮಾಚಾರ್ಯನ ಹೊರತಾಗಿ ಮತ್ತಾರೂ ಶಕ್ತರಲ್ಲ. ಭೀಷ್ಮನ ಉರವಣೆಯನ್ನು ತಡೆಯಬೇಕಾದರೆ ಅರ್ಜುನನೇ ಸರಿ'' ಎಂದು ಬೆರಳನ್ನು ತೂಗಿ ಹೊಗಳುತ್ತಿದ್ದನು. ಇದನ್ನು ಕೇಳಿ ದೇವತೆಗಳೂ ಅವರನ್ನು ಹೊಗಳುತ್ತಾ ‹‹ಈ ಭೀಷ್ಮಾರ್ಜುನರು ಧನುರ್ವಿದ್ಯೆಯಲ್ಲಿ ನಮ್ಮನ್ನು ಕೂಡ ಮೀರಿರುವರು. ಪೂರ್ವಕಾಲದಲ್ಲಿ ಇವರು ಜನಿಸಿದ್ದರೆ ಹಿರಣ್ಯಾಕ್ಷನು ಭೂಮಿಯನ್ನು ಕದ್ದೊಯ್ಯುತ್ತಿದ್ದನೆ? ಸೀತೆಯು ಅಶೋಕವನದಲ್ಲಿ ನವೆಯುತ್ತಿದ್ದಳೆ? ಮಹಾ ವೀರಾಗ್ರಣಿಗಳಿವರು'' ಎಂದು ಕೈಯೆತ್ತಿಹೊಡೆದು ತಪ್ಪಾಳೆ ತಟ್ಟುತ್ತಿದ್ದರು.

ಆಗ ಉತ್ತರನು ಅರ್ಜುನನನ್ನು ಕುರಿತು ‹‹ಜೀಯಾ! ಹಿಂದೆ

ಕರ್ಣನ ಮಹಿಮೆಯನ್ನು ಕಂಡೆನು. ಆಮೇಲೆ ಅಶ್ವತ್ಥಾಮನ ಧನು ರ್ವಿದ್ಯಾ ಪ್ರಭಾವವನ್ನು ನೋಡಿದೆನು. ಮಂದರಗಿರಿಗೆ ಸಮಾನವಾದ ಧೈರ್ಯವುಳ್ಳ ದ್ರೋಣಾಚಾರ್ಯನ ಪಾಂಡಿತ್ಯವೂ ತಿಳಿಯಿತು. ಕೃಪಾ ಚಾರ್ಯನ ಶೌರ್ಯವೂ ಗೊತ್ತಾಗಿದೆ. ಈಗ ಈ ಆರ್ಯನ ಶೌರ್ಯವು ಅವರ ವಿಕ್ರಮಗಳಿಗಿಂತ ಮೀರಿದ್ದಾಗಿದೆ'' ಎಂದು ಹೊಗಳಿದನು. ಅದಕ್ಕೆ ಅರ್ಜುನನು ''ಎಲೈ ಉತ್ತರನೇ! ಕಾರ್ತವೀರ್ಯಾರ್ಜುನನ ತೋಳು ಬಲುಮೆಯನ್ನು ಪರಶುರಾಮನು ಮುರಿದು ಬಲಶಾಲಿಯೆನಿಸಿ ಕೊಂಡನು. ಅಂತಹ ಪರಶುರಾಮನನ್ನು ಸೋಲಿಸಿದ ವೀರನು ಈ ಭೀಷ್ಮ ನೇ ಅಲ್ಲವೇ! ಇವನೊಡನೆ ಯುದ್ಧಮಾಡುವುದು ನಮ್ಮಿಂದ ಸಾಧ್ಯ ವಾದೀತೆ?'' ಎಂದನು. ಆಗ ಭೀಷ್ಮನು ಐದುಬಾಣಗಳಿಂದ ಅರ್ಜುನ ನನ್ನು ಹೊಡೆದು ನೋಯಿಸಿದನು. ಮೂರಂಬಿನಿಂದ ರಥವನ್ನುರುಳಿ ಸಿದನು. ಹಾವು ಹುತ್ತವನ್ನು ಬಗಿದು ಒಳಕ್ಕೆನುಗ್ಗುವಂತೆ ಬಾಣಗಳು ಶತ್ರುವೀರನ ಮೈಯಲ್ಲಿ ಹೊಕ್ಕುವು. ಅದಕ್ಕೆ ಅರ್ಜುನನು ಬಹಳ ಸಿಟ್ಟುಗೊಂಡು, ಹತ್ತುಬಾಣಗಳಿಂದ ಭೀಷ್ಮನ ಎದೆ ಬಿರಿಯುವಂತೆ ಹೊಡೆದನು. ಆತನು ಆ ಪೆಟ್ಟನ್ನು ತಡೆಯಲಾರದೆ ತನ್ನ ರಥದಲ್ಲಿ ಬಿದ್ದು ಮೈಮರೆತನು. ಸೇನೆಯು ಇದನ್ನು ಕಂಡು ಹೆದರಿ ''ಓಹೋ! ಭೀಷ್ಮಾ ಚಾರ್ಯರು ಸೋತುಹೋದರು. ಇನ್ನೇನು! ಕುರು ಸೈನ್ಯವು ಉರಿದು ಹೋಯಿತು. ನಮ್ಮರಸನು ಎಲ್ಲಿರುವನು?'' ಎಂದು ಅರಚಿಕೊಂಡಿ ತು. ಆಗ ದುರ್ಯೋಧನನು ಎದುರಾಗಿ ಬಂದು ನಿಂತನು. ಅತಿರಥರು ಕೋಪಿಸಿ ''ಎಲಾ! ಈ ನಾಯಿಗಳಬಾಯಿ ಸೀಳಿರೋ! ಸುಭಟರ ಸೋಲು ರಾಯನಿಗೆ ಸೋಲಾಗುವುದೆ?'' ಎನ್ನುತ್ತಿದ್ದರು. ದು ರ್ಯೋಧನನು ಸರ್ಪಧ್ವಜದಿಂದ ಅಲಂಕೃತವಾದ ರಥದಲ್ಲಿ ಕುಳಿತು ಮುಂದಾಳಾಗಿ ಬಂದು ಯುದ್ಧಕ್ಕೆ ನಿಂತನು. ಚದರಿಹೋಗಿದ್ದ ಸೇನಾ ಸಮುದ್ರವು ಒಟ್ಟಾಗಿ ಬಂದು ಸೇರಿತು. ಭಟ್ಟರು ವಾದ್ಯಗಳ ಶಬ್ದದಸಂಗಡ

ಕೈಯೆತ್ತಿ ಕೌರವರಾಯನ ಬಿರುದುಗಳನ್ನು ಹೊಗಳುತ್ತಿದ್ದರು. ಕುರು ಸೈನ್ಯವು ಗುಂಪು ಒಡೆಯದಹಾಗೆ ವಾದ್ಯಧ್ವನಿಗಳಿಂದ ರಣರಂಗದಲ್ಲಿ ಬಿದ್ದಿದ್ದ ಹೆಣಗಳನ್ನು ತುಳಿದುಕೊಂಡು ಕೌರವನ ಮುಖಸಂಜ್ಞೆಯಿಂದ ಅರ್ಜುನನಮೇಲೆ ಬಂದು ಬಿದ್ದಿತು. ಆಗ ಅರ್ಜುನನು ಬಲುಪರಾಕ್ರಮದಿಂದ ಕಾದಿ ಗರ್ವಿಷ್ಠರ ಕೊಬ್ಬನ್ನೆಲ್ಲಾ ಅಡಗಿಸುತ್ತಾ ಅಸಂಖ್ಯಾತವಾಗಿ ಬಾಣಗಳನ್ನು ಸುರಿಸುತ್ತಾ ಬಂದನು. ಎದುರಿಸಿದ ವೀರರೆಲ್ಲರೂ ಯುದ್ಧದಲ್ಲಿ ಮೈಲಾರದೇವರುಗಳಾದರು. ಆಮೇಲೆ ಎಲ್ಲವನ್ನೂ ಕಳೆದುಕೊಂಡು ಕಾಲಭೈರವನ ಸಾರೂಪ್ಯವನ್ನು ಪಡೆದರು.

ಹೀಗೆ ಸೇನಾಪತಿಗಳೆಲ್ಲರೂ ಸೋತಮೇಲೆ ಕುರುರಾಯನು ಕರ್ಣಾದಿ ವೀರರೊಡನೆ ಮಂತ್ರಾಲೋಚನೆ ಮಾಡಿ ಹೊಂದೇರನ್ನು ಸವರಿಸಿಕೊಂಡು ಬಂದು ಅರ್ಜುನನ ಎದುರಿನಲ್ಲಿ ನಿಂತು ಅವನೊಂದಿಗೆ ಹೀಗೆ ಸಂಭಾಷಿಸಿದನು.

ಕುರು—ಎಲೈ ಪಾರ್ಥನೇ! ಯುದ್ಧದಲ್ಲಿ ಬಾಲಕರನ್ನೂ, ಮುದುಕರನ್ನೂ, ಹಾರುವರನ್ನೂ ಮುರಿದೋಡಿಸಿದೆನೆಂದು ಗರ್ವಪಡಬೇಡ. ನಿಮಗೆ ಕಾಡಿನ ರಾಜ್ಯವಲ್ಲದೆ ನನ್ನ ಭೂಮಿಯಲ್ಲಿ ಸ್ವಲ್ಪವಾದರೂ ಸ್ಥಳವು ಸಿಕ್ಕಲಾರದು. ಆದುದರಿಂದ ಪುನಃ ಕಾಡಿಗೆ ಹೊರಡು. ಇಗೋ ನನ್ನ ಈ ಬಾಣದ ವೇಗವನ್ನು ನೋಡು.

ಅರ್ಜು—ಕುರುಪತಿಯೇ! ಏಕೆ ಇಂತಹ ಹೀನವಾಕ್ಯಗಳನ್ನಾಡುವೆ? ನಾವು ಸತ್ಯವನ್ನು ಮೀರದೆ ಅರಣ್ಯವಾಸವನ್ನು ಪೂರಯಿಸಿ ಪ್ರತಿಜ್ಞಾಪಾಲನೆ ಮಾಡಿದೆವು. ನಿನಗೇನೋ ಲೋಕಾಪವಾದವು ತಪ್ಪಲಿಲ್ಲ. ನಮ್ಮ ಅವಧಿ ಕಳೆಯಿತು. ಮುಂದೆ ನ್ಯಾಯವಾಗಿ ನಮಗೆ ಬರಬೇಕಾದ ರಾಜ್ಯವನ್ನು ಪಡೆದುಕೊಳ್ಳುವೆವು, ಹದ್ದುಮೀರಿ ಬಗುಳಿದರೆ ನಿನ್ನ ಗಂಟಲನ್ನು ಸೀಳಿ ಹಾಕುವೆನು. ಈ ಶರದಪೆಟ್ಟನ್ನು ತಡೆದುಕೋ ನೋಡೋಣ, (ಬಾಣವನ್ನು ಎಸೆದನು.)

ಕುರು—ಎಲಾ ಮರುಳೇ! ನೀನೇನು ಬಲ್ಲೆ? ಗರುಡನಗೂಡಿಗೆ ಕನ್ನವನ್ನು ಕೊರೆದ ಹಾವು ಬದುಕಬಲ್ಲುದೆ? ನೀನು ಏಕೆ ಕಳವಳಗೊಳ್ಳುವೆ? ನಿಮ್ಮೈವರ ತಲೆಗಳನ್ನು ಕತ್ತರಿಸಿ ತಿರಿಕಲ್ಲಾಟವನಾಡುವೆನು, ಬಗುಳಬೇಡ. ನಿಲ್ಲಿಸು.

ಅರ್ಜು—ಆಹಾ! ನೀನು ಗರುಡನೇ ಸರಿ, ನಿನ್ನ ಪಕ್ಕೆಗಳನ್ನು ದಬಾಯಿಸಿ ಹೆಡಂಲೆಯಮೇಲೆ ಹತ್ತಿ, ಬೆನ್ನೆಲುಬನ್ನು ಮುರಿಯುವಂತೆ ಓಡಿಸುವ ಮಹಾ ವಿಷ್ಣುವು ನಾನೆಂಬುದನ್ನು ಅರಿಯೆಯಾ? ನಿನ್ನ ಮನಸ್ಸನ್ನು ಗಟ್ಟಿಯಾಗಿ ಮಾಡಿಕೊಂಡು ಸಿದ್ಧನಾಗು.

ಹೀಗೆ ಹೇಳಿ ಎರಡುಬಾಣಗಳಿಂದ ದುರ್ಯೋಧನನ ಮೈಯಲ್ಲಿ ರಕ್ತಪ್ರವಾಹವನ್ನು ಹರಿಸಿದನು. ಅತನು ಧರಿಸಿದ್ದ ಉತ್ತಮ ವಸ್ತ್ರಗಳೆಲ್ಲಾ ರಕ್ತದಿಂದ ತೊಯ್ದುಹೋದುವು. ಕೌರವನು ಶಕ್ತಿಕುಂದಿ ಸಾರಥಿಗೆ ಸನ್ನೆ ಮಾಡಲು ಅವನು ರಥವನ್ನು ಹಿಂದಿರುಗಿಸಿ ಓಡಿಸಿದನು. ಆಗ ಅರ್ಜುನನು ‹‹ಎನಿದು! ಕೌರವನು ಓಡಿಹೋದನು. ಯುದ್ಧದಲ್ಲಿ ಹೀಗೆ ಓಡುವುದು ತರವಲ್ಲ. ಬಂದು ನಿಲ್ಲಲಿ; ಕೊಲ್ಲುವುದಿಲ್ಲ'' ಎಂದು ಕೂಗಿ ಹೇಳಿದನು. ಈ ಮಾತು ಮುಗಿಯುವುದಕ್ಕೆ ಮುಂಚೆಯೇ ಕೌರವನು ಸಿದ್ಧನಾಗಿ ಬಂದು, ‹‹ನನ್ನ ಕೈಗಳು ಸೋತು ಹೋದುವೆಂದು ತಿಳಿದೆಯೊ? ಏಕೆ ಪೊಳ್ಳುಮಾತುಗಳನ್ನು ಹರಟುತ್ತೀಯೆ? ಇದು ರಾಜನೀತಿಯಲ್ಲ. ಹೀಗೆಮಾಡುವುದು ನಿಮ್ಮ ವಂಶಕ್ಕೆ ಅವಮಾನವಲ್ಲವೆ? ನಿನ್ನ ದೊಡ್ಡಸ್ತಿಕೆ ಸಾಕು; ನಿಲ್ಲಿಸು.'' ಎಂದು ಎಮುರಿಸಿ ಬಾಣಗಳನ್ನು ಪ್ರಯೋಗಿಸಿದನು. ಆಗ ಅರ್ಜುನನು ಅವುಗಳನ್ನು ಕಡಿದಿಟ್ಟು ಕ್ರೂರವಾದ ಬಾಣಗಳಿಂದ ದುರ್ಯೋಧನನನ್ನು ನೋಯಿಸಿದನು. ಕೌರವನು ಅವುಗಳ ಹೊಡೆತವನ್ನು ತಡೆಯಲಾರದೆ ವ್ಯಥೆಪಡುತ್ತಿದ್ದನು. ದೊರೆಯ ದುಗುಡವನ್ನು ಕಂಡು, ಓಡಿಹೋಗಿದ್ದ ವೀರರೆಲ್ಲರೂ ಬಂದು ಸೇರಿದರು. ಆಗ

ಕರ್ಣನು "ಇದೇನು ? ನಮ್ಮೊಡೆಯನು ನೊಂದು ಕುಂದಿರುವಂತಿದೆ. ಅರ್ಜುನನನ್ನು ಈದಿನ ಕೊಲ್ಲದೆ ಬಿಡೆನು.'' ಎಂದು ಬಂದು ಒಂದು ಕಡೆ ನಿಂತು ಬಿಲ್ಲನ್ನು ಧ್ವನಿಗೊಳಿಸುತ್ತಿದ್ದನು. ಮತ್ತೊಂದು ಕಡೆಯಲ್ಲಿ ಅಶ್ವತ್ಥಾಮನು, ಕರ್ಣನ ಮಗನಾದ ವೃಷಸೇನನು, ಸೈಂಧವನು,ಭೀಷ್ಮನು, ಕೃಪ ದುಶ್ಶಾಸನಾದಿಗಳು ಬಂದು ಮುತ್ತಿಕೊಂಡರು. ದ್ರೋಣಾಚಾರ್ಯನು ರೋಷದಿಂದ ಬಂದು ಯುದ್ಧಕ್ಕೆ ನಿಂತನು. ಬಾಹ್ಲಿಕನು, ಕಳಿಂಗನು, ಸುಕೇತುವು, ಭೂರಿಶ್ರವನು, ದುಸ್ಸಹನು; ಇವರೆಲ್ಲರೂ ಒಂದು ಕಡೆ ನಿಂತು ಅರ್ಜುನನನ್ನು ಮುತ್ತಿಕೊಂಡರು. ಸುತ್ತಲೂ ಕೋಟೆ ಕಟ್ಟಿದಹಾಗೆ ಕುರುಸೇನೆಯು ನಿಂತಿದೆ. ಅರ್ಜುನನು ಎತ್ತಹೋಗಲಿಕ್ಕೂ ಮಾರ್ಗವೇ ಇಲ್ಲ.

ಇದನ್ನು ಕಂಡು ಉತ್ತರನು "ಓಹೋ! ಬಡಬಾಗ್ನಿಯನ್ನು ತೊಳೆಯುವ ಸಮುದ್ರದಂತೆ ಸೋತು ಓಡಿಹೋಗಿದ್ದವರೆಲ್ಲರೂ ಮತ್ತೆ ಬಂದು ಸೇರಿಬಿಟ್ಟರು. ಇನ್ನು ನಾವು ಬದುಕುವ ಮಾರ್ಗವು ಯಾವುದು? ಎಂದು ಚಿಂತಿಸುತ್ತಿದ್ದನು. ಕತ್ತಲೆಯ ಮೊತ್ತವು ಸೂರ್ಯನನ್ನು ಎದುರಿಸುವಂತೆಯೂ, ಮೇಘಗಳು ವಾಯುವಿನ ಸೆರಗನ್ನು ಹಿಡಿಯುವಂತೆಯೂ, ಕುರುಸೇನೆಯು ಒದರುತ್ತ ಬಂದು ಅರ್ಜುನನ್ನೆದುರಿಸಿತು. ಅರ್ಜುನನು ಇದನ್ನು ನೋಡಿ "ಸಾಮಾನ್ಯವಾದ ಬಾಣದಿಂದ ಇವರು ಸಗ್ಗುವಹಾಗಿಲ್ಲ. ಇವರಿಗೆ ತಕ್ಕ ಚಿಕಿತ್ಸೆಮಾಡುವೆನು'' ಎಂದು ಬಿಲ್ಲಿನಲ್ಲಿ ಸಮ್ಮೋಹನಾಸ್ತ್ರವನ್ನು ಹೂಡಿ ಶತ್ರುಗಳ ಮೇಲೆ ಪ್ರಯೋಗಿಸಿದನು. ಕೂಡಲೇ ಅದು ಹೋಗಿ ಶತ್ರುಸೈನ್ಯವನ್ನೆಲ್ಲಾ ಮಲಗಿಸಿಬಿಟ್ಟಿತು. ಸೈನಿಕರೂ ವೀರರೂ ನಿದ್ರಾಭರದಿಂದ ವೈರಿಯರಿಯದೆ ಒರಗಿದರು. ಕೆಲವರು ಬಲವಾಗಿ ಗೊರಕೆ ಹೊಡೆಯುತ್ತಿದ್ದರು. ಕೆಲವರು ಉಸಿರಾಡದೆ ಬಿದ್ದಿದ್ದರು. ಕೆಲವರು ಮುಖಕ್ಕೆ ಮುಸುಕು ಹಾಕಿಕೊಂಡು ತೂಕಡಿಸುತ್ತಿದ್ದರು. ಕೌರವ ಸೇನೆಯಲ್ಲಿ ಹತ್ತು

ಕೋಟಿ ಆನೆಗಳು ಮೈಗಳನ್ನು ಅಲ್ಲಾಡಿಸುತ್ತ ಕೊನೆಯ ಕಿವಿಗಳನ್ನು ಜೋಲು ಹಾಕಿಕೊಂಡು, ಕಾಲುಗಳನ್ನು ಮಡಿಸಿಕೊಂಡು, ಸೊಂಡಿಲುಗಳನ್ನು ಕೊರಲೊಳಕ್ಕೆ ಸೇರಿಸಿ ತೂಗಾಡಿ ಬಿದ್ದುವು. ಆನೆಯ ಮಾವಟಿಗರಿಗಂತು ಎಚ್ಚರಿಕೆಯೇ ಇಲ್ಲ. ಕುದುರೆಗಳು ಅರೆತೆರೆದ ಕಣ್ಣುಗಳಿಂದ ಕೊರಳನ್ನು ಅರ್ಧಕ್ಕೆ ತಿರುವಿಕೊಂಡು, ಗೊರಸುಗಳನ್ನು ತೂಗುತ್ತ ತೂಕಡಿಸಿಕೊಂಡು ಬಿದ್ದಿದುವು. ರಾವುತರು ತಮ್ಮ ತಮ್ಮ ಕುದುರೆಗಳ ಮೇಲೆಯೇ ಮಲಗಿ ನಿದ್ರಾಂಗನೆಯ ಕೇಳಿಯಲ್ಲಿ ಮಗ್ನರಾಗಿದ್ದರು. ಅತಿರಥರು ಬಿಲ್ಲುಗಳನ್ನು ಸೆಳೆಯುತ್ತಿದ್ದ ಹಾಗೆಯೇ ನಿದ್ರಾಭಾರಕ್ಕೆ ಬಾಣಗಳು ಕೈಯಿಂದ ಜಾರಿಬೀಳುತ್ತಿರಲು, ಒಬ್ಬರ ಹತ್ತಿರ ಒಬ್ಬರು ಮಲಗಿದರು. ಅವರು ತಮ್ಮ ಬೆನ್ನುಬತ್ತಳಿಕೆಯ ಹತ್ತಿರ ತೋಳುಗಳನ್ನಿಟ್ಟುಕೊಂಡು ಅವೇ ತಲೆದಿಂಬುಗಳಾಗಲು ಗೊರಕೆ ಹೊಡೆಯುತ್ತ ಬಿದ್ದಿದ್ದರು. ಅವರ ಸಾರಥಿಗಳು ಕೂಡ ಆಯಾ ರಥಗಳಲ್ಲಿಯೇ ಮಲಗಿಬಿಟ್ಟರು.

ದ್ರೋಣಾಚಾರ್ಯರಿಗೆ ಬಾಣದ ಸೊಕ್ಕು ಹತ್ತಿತು. ಅವರು ನಿದ್ರಾಮುದ್ರಿತರಾದರು. ಅವರ ಮಗನೂ ಒಂದು ಕಡೆಯಲ್ಲಿ ಮಲಗಿದನು. ಅವನ ಕೈಗಳಿಂದ ಬಿಲ್ಲೂ ಅಂಬುಗಳೂ ಜಾರಿಬಿದ್ದುವು. ಕರ್ಣ ದುರ್ಯೋಧನರ ಕಣ್ಣುಗಳು ಮುಚ್ಚಿಹೋಗಿ ಮೈಮರೆತರು. ಕೌರವ ಸೈನ್ಯವೆಲ್ಲವೂ ಸಮ್ಮೋಹನಾಸ್ತ್ರಪ್ರಭಾವದಿಂದ ಮೂರ್ಛೆಗೊಂಡಿತು. ಅತಿರಥರೂ ಮಹಾರಥರೂ ಯಾರೂ ಈ ಅಸ್ತ್ರದ ಪೆಟ್ಟಿಗೆ ಸಿಕ್ಕದೆ ತಪ್ಪಿಸಿಕೊಳ್ಳಲಿಲ್ಲ. ಜೀವನು ಜಾಗ್ರತೆ, ಸ್ವಪ್ನ; ಸುಷುಪ್ತಿ (ನಿದ್ದೆ) ಎಂಬ ಮೂರು ಅವಸ್ಥೆಗಳಿಗೆ ಸಿಕ್ಕುವಂತೆ ಸೈನ್ಯವೆಲ್ಲವೂ ತೂಗಡಿಕೆಯಿಂದ ಮೈಮರೆತು ನಿದ್ರಿಸುತ್ತಿದ್ದಿತು. ಆದರೂ ಭೀಷ್ಮಾಚಾರ್ಯನೊಬ್ಬನು ಮಾತ್ರ ನಿರ್ಮಲನಾಗಿ ತನ್ನ ರಥದಲ್ಲಿ ಕುಳಿತು ತೇಜಃಪುಂಜನಾಗಿ ಹೊಳೆಯುತ್ತಿದ್ದನು.

ಈ ಪ್ರಕಾರವಾಗಿ ಅರ್ಜುನನೊಬ್ಬನೇ ಹನ್ನೊಂದು ಅಕ್ಷೋಹಿಣಿಯ ಬಲವನ್ನೆಲ್ಲಾ ಸೋಲಿಸಿ, ಸಮ್ಮೋಹನಾಸ್ತ್ರದಲ್ಲಿ ಕೆಡಹಿದನು. ಆಗ ದೇವತೆಗಳು ಆತನಮೇಲೆ ಹೂವಿನ ಮಳೆಯನ್ನು ಸುರಿಸಿದರು. ಆ ಬಳಿಕ ಆತನು ಶತ್ರುರಾಜರಿದ್ದ ಕಡೆಗೆ ರಥವನ್ನು ನಡಿಸಿಕೊಂಡು ಹೋಗಿ, ದ್ರೋಣಾಚಾರ್ಯನ ರಥದಬಳಿಯಲ್ಲಿಳಿದು ಆತನ ಪಾದಗಳಿಗೆ ನಮಸ್ಕರಿಸಿದನು. ರಥದಲ್ಲಿ ಕುಳಿತಿದ್ದ ಭೀಷ್ಮಾಚಾರ್ಯರಿಗೆ ವಂದನೆಗಳನ್ನು ಮಾಡಿದನು. ಕರ್ಣನ ಕಿರೀಟವನ್ನೂ ವಸ್ತ್ರಗಳನ್ನೂ ಸುಲಿದುಕೊಂಡನು. ದುರ್ಯೋಧನನ ವಸ್ತ್ರಾಭರಣಗಳನ್ನು ಕಿತ್ತುಕೊಂಡು ಉತ್ತರನಿಗೆ ತೋರಿಸಿ,ಉಳಿದ ರಾಜರ ಕಿರೀಟಗಳನ್ನು ಕತ್ತರಿಸಿಕೊಂಡು ಬಂದನು. ದುಶ್ಶಾಸನನ ಶಿರೋರತ್ನವನ್ನು ಕಿತ್ತುಕೊಂಡು, ಭೂರಿಶ್ರವ ಜಯದ್ರಥರನ್ನು ಹೊರಳಿಸಿ ಅವರ ಒಡವೆಗಳನ್ನು ಕಸಿದುಕೊಂಡನು. ಹೀಗೆ ಎಲ್ಲಾ ರಾಯರಿಗೂ ಮಾನಭಂಗಮಾಡಿ ಅರ್ಜುನನು ರಥವನ್ನೇರಿದನು. ಆ ಬಳಿಕ ಅರ್ಜುನನ ಅಪ್ಪಣೆಯಿಂದ ಉತ್ತರನು ಆ ರಥದಿಂದ ಇಳಿದು ಪ್ರಸಿದ್ಧರಾದ ವೀರರ ವಸ್ತ್ರಾಭರಣಗಳನ್ನು ತೆಗೆದುಕೊಂಡು ಬಂದು ರಥದಲ್ಲಿರಿಸಿದನು. ಆಗ ಭೀಷ್ಮಾಚಾರ್ಯನು ಬಿಲ್ಲನ್ನು ತೆಗೆದುಕೊಂಡು ಅರ್ಜುನನನ್ನು ಅಡ್ಡಹಾಕಿದನು. ಅರ್ಜುನನು ಎರಡು ಬಾಣಗಳಿಂದ ಆತನ ಶೌರ್ಯವನ್ನು ನಿಲ್ಲಿಸಿ, ಮೂರು ಬಾಣಗಳಿಂದ ಕೌರವನ ಕಿರೀಟವನ್ನು ಕತ್ತರಿಸಿದನು. ಈ ಪ್ರಕಾರ ಕೌರವ ಸೈನ್ಯವನ್ನೆಲ್ಲಾ ಗೆದ್ದು ಉತ್ತರಸಹಿತನಾಗಿ ಬನ್ನಿಮರದ ಬಳಿಗೆ ಬಂದು, ತಾವು ತೆಗೆದುಕೊಂಡಿದ್ದ ಶಸ್ತ್ರಾಸ್ತ್ರಗಳನ್ನು ಮೊದಲು ಇಟ್ಟಿದ್ದಂತೆ ಅಲ್ಲಿಯೇ ಕಟ್ಟಿರಿಸಿ, ತಾವು ಊರಿಂದ ತಂದಿದ್ದ ರಥವನ್ನೇರಿ ಪಟ್ಟಣದ ಕಡೆಗೆ ಹೊರಟುಬಂದರು.

——:0:——

## ಹತ್ತನೆಯ ಸಂಧಿ.

**ಅರ್ಜುನನು ಕೌರವ ಸೈನ್ಯವನ್ನೆಲ್ಲಾ ಜಯಿಸಿ, ಉತ್ತರನೊಡನೆ ಮತ್ಸ್ಯನಗರಿಗೆ ಬಂದು ಸೇರಿದನು.**

ಕೌರವರು ಉತ್ತರ ಗೋಗ್ರಹಣದಲ್ಲಿ ಅಪಜಯವನ್ನು ಹೊಂದಿ ತಮ್ಮ ತಲೆಗಳ ಮೇಲೆ ಮುಸುಕು ಹಾಕಿಕೊಂಡು, ವಾದ್ಯಗಳ ಶಬ್ದವನ್ನೆಲ್ಲಾ ನಿಲ್ಲಿಸಿ, ದುಗುಡದಿಂದ ಹೊರಟು ಹಸ್ತಿನಾಪುರಕ್ಕೆ ಹೋಗಿ ಸೇರಿದರು. ಇತ್ತ ಅರ್ಜುನನು ಸ್ಮಶಾನದಲ್ಲಿದ್ದ ಬನ್ನಿಯ ಮರದಲ್ಲಿ ಪೂರ್ವದಂತೆ ಆಯುಧಗಳನ್ನು ಕಟ್ಟಿರಿಸಿ, ಮೊದಲು ವಿರಾಟನಗರದಿಂದ ತಂದಿದ್ದ ರಥದಮೇಲೆ ಉತ್ತರನನ್ನು ಕುಳ್ಳಿರಿಸಿ, ತಾನೇ ಸಾರಥಿಯಾಗಿ ಕುಳಿತುಕೊಂಡನು. ಅಗ್ನಿದತ್ತವಾಗಿ ಬಂದಿದ್ದ ರಥವು ಎಂದಿನಂತೆ ತನ್ನ ಸ್ಥಳಕ್ಕೆ ಹೊರಟುಹೋಯಿತು. ಆ ರಥದ ಧ್ವಜಾಗ್ರದಲ್ಲಿ ಕುಳಿತಿದ್ದ ಆಂಜನೇಯನು ಇಳಿದುಬಂದು ಅರ್ಜುನನ ಮೈಸವರಿ, ಗೋಗ್ರಹಣದಲ್ಲಿ ಜಯವನ್ನು ಪಡೆದುದಕ್ಕಾಗಿ ಸಂತೋಷದಿಂದ ಹರಸಿ, ಸ್ವೇಚ್ಛೆಯಿಂದ ವನಕ್ಕೆ ಹೊರಟುಹೋದನು. ಅರ್ಜುನನು ಉತ್ತರನ ರಥವನ್ನು ನಡಿಸಿಕೊಂಡು ಬಂದು ಪಟ್ಟಣದ ಹತ್ತಿರ ನಿಲ್ಲಿಸಿ, ಅವನನ್ನು ನೋಡಿ ನಸುನಗುತ್ತ "ಎಲೈ ಕುಮಾರನೇ! ಯುದ್ಧದಲ್ಲಿ ನೀನೇ ಜಯಿಸಿದುದಾಗಿ ಹೇಳಿ ನಿಮ್ಮ ತಂದೆಯಬಳಿಗೆ ದೂತನನ್ನು ಕಳುಹಿಸು. ನಮ್ಮ ಸಮಾಚಾರವನ್ನು ಈಗಲೇ ಪ್ರಚುರಗೊಳಿಸಬೇಡ. ನಿನ್ನ ಪರಾಕ್ರಮವನ್ನೇ ಪ್ರಕಟಿಸು. ನಿನ್ನ ವಿಜಯವು ಎಲ್ಲರಿಗೂ ತಿಳಿದು ಸಂತೋಷದಿಂದ ಮೆರೆಯಲಿ. ನಾನು ಹೇಳಿದಹಾಗೆ ಮಾಡು." ಎಂದು ನೇಮಿಸಿದನು. ಉತ್ತರನು ಹಾಗೆಯೇ ಆಗಬಹುದೆಂದು ಒಪ್ಪಿಕೊಂಡು, ದೂತರನ್ನು ಕರೆಯಿಸಿ, ಉತ್ತರಗೋಗ್ರಹಣದಲ್ಲಿ ನಿಮ್ಮ ಕುಮಾರನಾದ ಉತ್ತರನೇ ಜಯವನ್ನು ಪಡೆದು ಬರುತ್ತಿರುವನೆಂದು ತಂದೆಯಾದ ವಿರಾಟರಾಯನಿಗೆ ತಿಳುಹಿರೆಂದು ಹೇಳಿಕಳುಹಿಸಿದನು,

ಅತ್ತ ವಿರಾಟರಾಯನು ದಕ್ಷಿಣ ಗೋಗ್ರಹಣದ ಜಯದಿಂದ ಹಿಂದಿರುಗಿ ಬಂದು, ಕಂಕಭಟ್ಟರೊಡಗೊಂಡು ಅರಮನೆಗೆ ಬಂದು ನೋಡಿದನು. ಉತ್ತರನು ಇರಲಿಲ್ಲ. ಎಲ್ಲಿಹೋದನೆಂದು ವಿಚಾರಿಸಿದನು. ಉತ್ತರಗೋಗ್ರಹಣದಲ್ಲಿ ಕುರುಬಲವನ್ನು ಜಯಿಸುವುದಕ್ಕೆ ಬೃಹನ್ನಳೆಯನ್ನು ಸಾರಥಿಯಾಗಿ ಮಾಡಿಕೊಂಡು ಕುಮಾರನು ಯುದ್ಧರಂಗಕ್ಕೆ ಹೋಗಿರುವನೆಂದು ಅಲ್ಲಿದ್ದವರು ಹೇಳಿದರು. ಇದನ್ನು ಕೇಳಿದಕೂಡಲೇ ವಿರಾಟರಾಯನಿಗೆ ಬಹು ವ್ಯಸನವಾಯಿತು. ಕ್ರೂರವಾದ ಬಾಣವು ಹೊಟ್ಟೆಯಲ್ಲಿ ಮುರಿದಂತೆ ಆಯಿತು. ಆತನು ಕಳವಳಿಸಿ ನೊಂದುಕೊಂಡನು. ಅಯ್ಯೋ! ಏನಿದು? ಹಸುಮಗುವೆಲ್ಲಿ? ಕುರುರಾಯರ ಬಲವೆಲ್ಲಿ? ಭೀಷ್ಮಾದಿ ವೀರರೆಲ್ಲರೂ ಯುದ್ಧಕ್ಕೆ ಬಂದಿರುವರು. ಮಗುವು ಯುದ್ಧವನ್ನು ಜಯಿಸಬಲ್ಲುದೆ? ಹಾ! ಮರುಳೇ! ಎಂದು ಚಿಂತಿಸಿದನು. ಬಳಿಕ ತನ್ನ ಮಗನಿಗೆ ಸಹಾಯವಾಗಿ ಹೋಗಿರೆಂದು ಮಂತ್ರಿಗಳನ್ನು ಅಟ್ಟಿ, ದಿಕ್ಕು ತೋರದೆ ಯೋಚಿಸುತ್ತಿದ್ದನು. ಅಷ್ಟರಲ್ಲಿ ದೂತರು ವಾದ್ಯರಭಸದಿಂದ ಬಂದು, ರಾಜನಿಗೆ ಕೈಮುಗಿದು ‘‘ಮಹಾ ಪ್ರಭುವೇ! ಲಾಲಿಸಬೇಕು. ಶತ್ರುರಾಜರೆಂಬ ಕಾಡು ಗಿಡಗಳಿಗೆ ಕೊಡಲಿಯಾಗಿಯೂ, ಕುರುಸೇನೆಯೆಂಬ ಆನೆಯಹಿಂಡಿಗೆ ಸಿಂಹಪ್ರಾಯನಾಗಿಯೂ ಇರುವ ಉತ್ತರಕುಮಾರನು ಕರ್ಣಗುರುಗಾಂಗೇಯಾದಿ ಕೌರವವೀರರನ್ನೆಲ್ಲಾ ಜಯಿಸಿ, ಗೋವುಗಳ ಗಣವನ್ನು ಹಿಂದಿರುಗಿಸಿಕೊಂಡು ಜಯಶೀಲನಾಗಿ ಬರುತ್ತಿರುವನು. ಪಟ್ಟಣದಲ್ಲೆಲ್ಲಾ ಬಾವುಟಗಳನ್ನು ಕಟ್ಟಿಸು. ಕುಮಾರನನ್ನು ಎದುರುಗೊಂಡು ಕರೆದು ತರಲು ತಕ್ಕ ಜನರನ್ನು ಕಳುಹಿಸು’’ ಎಂದು ಬಿನ್ನಯಿಸಿದರು. ವಿರಾಟರಾಯನು ಈ ಮಾತನ್ನು ಕೇಳಿ ಬಹಳವಾಗಿ ಹಿಗ್ಗಿದನು. ಶರೀರವು ಪುಳಕಗೊಂಡು ಸಂತೋಷಾತಿಶಯದಿಂದ ಮೈಮರೆತನು. ಮನಸ್ಸು ಗಲಿಬಿಲಿಯೂ

ಯಿತು. ಕಣ್ಣುಗಳು ಅರಳಿದುವು. ಈ ಸುದ್ದಿಯನ್ನು ತಿಳಿಸಿದ ದೂತರಿಗೆ ತನ್ನ ಮೈಮೇಲಿದ್ದ ವಸ್ತ್ರಾಭರಣಗಳನ್ನೆಲ್ಲಾ ಹಂಚಿಕೊಟ್ಟನು. ಅವರು ರಾಜನ ಅಪ್ಪಣೆ ಪಡೆದು ಹೊರಟುಹೋದರು. ಬಳಿಕ ಕುಮಾರನನ್ನು ಎದುರುಗೊಳ್ಳಲಿಕ್ಕೆ ತಕ್ಕ ಉತ್ಸವವನ್ನು ಬೆಳಸಬೇಕೆಂದು ನಿಯಮಿಸಿದನು. ಆಗ ಪೌರಜನರೂ, ಸುಮಂಗಲಿಯರೂ ಸರ್ವಾಲಂಕಾರ ಭೂಷಿತೆಯರಾಗಿ, ಚಿತ್ರಾಂಬರಗಳನ್ನು ಧರಿಸಿಕೊಂಡು, ಕಹಳಾಮೃದಂಗಾದಿ ವಾದ್ಯಗಳ ಶಬ್ದದೊಂದಿಗೆ ಉತ್ತರನನ್ನು ಎದುರುಗೊಳ್ಳಲು ಹೊರಟರು. ವಿರಾಟರಾಯನು ಉಕ್ಕಿಬರುತ್ತಿರುವ ತನ್ನ ಸಂತೋಷವನ್ನು ತಡೆಯಲಾರದೆ ಹೋದನು. ಹತ್ತಿರದಲ್ಲಿದ್ದ ಕಂಕಭಟ್ಟನನ್ನು ಆತನು ನೋಡಿ ಇಂತೆಂದನು.

ವಿರಾ—ಯತಿಯೇ! ನಾನು ಈಗ ಈ ಸಂತೋಷಸಮುದ್ರದಲ್ಲಿ ಮುಳುಗಿರುವೆನು. ನಿನ್ನೊಂದಿಗೆ ಜೂಜಾಡಬೇಕೆಂದು ಮನಸ್ಸುಂಟು. ಆಡೋಣ. ಬಾ.

ಕಂಕ—ಮಹಾರಾಜನೇ! ಜೂಜಿನಲ್ಲಿ ಪಾಂಡವರು ಪಟ್ಟ ಕಷ್ಟಗಳನ್ನು ಕೇಳಿ ಅರಿಯೆಯೊ! ಅವರವಿಧಿ ಏನಾಯಿತು? ಜೂಜಾಟವು ಸಲ್ಲದು. ಈ ಯೋಚನೆ ಬೇಡ. ಬಿಡು.

ವಿರಾ—ಆರ್ಯನೇ! ಪಾಂಡವರಾದರೋ ಬುದ್ಧಿಯಿಲ್ಲದೆ ರಾಜ್ಯವನ್ನು ಪಣವಾಗಿ ಒಡ್ಡಿ ಸೋತರು. ನಾವು ಹಾಗೆ ಯಾವ ಪಣವನ್ನೂ ಇಟ್ಟು ಆಡಬೇಕಾಗಿಲ್ಲ. ಕುಮಾರನಿಗೆ ಜಯವಾಯಿತೆಂಬ ಸಂತೋಷವು ಹೆಚ್ಚಿದೆ. ಆದುದರಿಂದ ವಿನೋದಾರ್ಥವಾಗಿ ಸ್ವಲ್ಪ ಹೊತ್ತು ಜೂಜಾಡಿ ಕಾಲವನ್ನು ಕಳೆಯೋಣ. ಸಾರಿಗಳನ್ನು ಒಡ್ಡು.

ಧರ್ಮರಾಯನು ಬದಲು ಹೇಳಲೊಲ್ಲದೆ ಹಾಸಂಗಿಯನ್ನು ಹಾಸಿ, ಕಾಯಿಗಳನ್ನಿಟ್ಟು ದಾಳಗಳನ್ನು ಹಾಕುತ್ತಾ ಬಂದನು.

ಆಟವಾಡುತ್ತಿರುವಾಗ ವಿರಾಟರಾಯನು ಧರ್ಮರಾಯನನ್ನು ನೋಡಿ ಇಂತೆಂದನು.

ವಿರಾ—ಆರ್ಯನೇ! ನನ್ನ ಮಗ ಉತ್ತರನ ಪರಾಕ್ರಮವನ್ನು ಕೇಳಿದೆಯೊ? ಯುದ್ಧದಲ್ಲಿ ಶಿವನಿಗೆ ಕೂಡ ಸಾಧ್ಯರಲ್ಲದ ಶೂರರೆಲ್ಲರೂ ಕಾದಿ ಸೋತುಹೋದರಂತೆ! ದೇವತೆಗಳಲ್ಲಿಯಾಗಲಿ ಮನುಷ್ಯರಲ್ಲಿಯಾಗಲಿ ನನ್ನ ಮಗನಂತಹ ಶೂರರು ಉಂಟೆ? ಹೇಳು.

ಧರ್ಮ—ರಾಜನೇ! ಕುರುಸೈನ್ಯವು ಸೋತುಹೋದುದೇನೋ ನಿಜವೇ. ಪಶುಗಳನ್ನು ಹಿಂದಿರುಗಿಸಿ ತಂದುದೂ ಸುಳ್ಳಲ್ಲ. ಈ ಜಯವೇನೋ ಆಶ್ಚರ್ಯಕರವಾಗಿದೆ. ಲೋಕವಿಖ್ಯಾತನಾದ ಸಾರಥಿಯು ನಿನ್ನ ಮಗನಿಗೆ ಸಿಕ್ಕಿದ್ದುದರಿಂದ ಅವನಿಗೆ ಯಾವ ಭಯವೂ ಇಲ್ಲದೆ ಜಯವಾಯಿತು ಇದರಲ್ಲಿ ತಪ್ಪೇನು?

ವಿರಾ—ಎಲೈ ಹುಚ್ಚುಯತಿಯೇ! ನಿನ್ನ ಮನಸ್ಸು ನೆಟ್ಟಗಿಲ್ಲ. ಮತ್ಸರಗ್ರಸ್ತನಾಗಿದ್ದೀಯೆ. ಕುಮಾರನ ವಿಜಯದಲ್ಲಿ ನಿನಗೆ ಇನ್ನೂ ಸಂಶಯವಿರುವುದೆ? ನನ್ನ ಮಗನು ಅಂಜುಪುರುಕಿಯೆಂದು ತಿಳಿದಿರುವೆಯೊ? ನೀನು ಹೇಳುವ ಸಾರಥಿಯು ಬಲು ಸಮರ್ಥನೋ? ನಿನಗೆ ಆ ನಪುಂಸಕನಲ್ಲಿ ಪಕ್ಷಪಾತವಿರುವ ಹಾಗೆ ತೋರುತ್ತಿದೆ. ಸ್ತ್ರೀಯರ ಅಂಗಚಿಹ್ನೆಗಳಿಂದ ಪುರುಷವೇಷವನ್ನು ಧರಿಸಿರುವ ಸಾರಥಿಯ ಸಹಾಯದಿಂದ ಬಹು ಶೂರನಾದ ನನ್ನ ಮಗನಿಗೆ ಜಯವಾಯಿತೆಂದು ಸುಳ್ಳು ಬಗುಳುತ್ತಿರುವೆ? ಇದುವರೆಗೂ ಯತಿಯೆಂತಲೂ, ಮಿತ್ರನೆಂತಲೂ ಸೈರಿಸಿದೆನು. ಮುಂದೆ ಇಂತಹ ಹುಚ್ಚುಮಾತುಗಳನ್ನು ಯಾರ ಸಂಗಡಲಾದರೂ ಹೇಳಿಗೀಳೀಯೆ! ಜೋಕೆ! ಎಲೈ ಕಂಕನೇ! ನೀನು ದುಷ್ಟಾತ್ಮನು, ನಿಸ್ಸಾರ ಹೃದಯನು, ತೊಲಗು.

ಧರ್ಮ—ಅರಸನೇ! ಕೋಪಗೊಳ್ಳಬೇಡ, ಸಮಾಧಾನವನ್ನು ತಂದುಕೋ, ನಿನಗೆ ಕೀರ್ತಿಯ ಮೇಲೆ ಅಪೇಕ್ಷೆ ಇದ್ದರೆ ಜನಸಮ್ಮತ

ವಾಗುವಂತೆ ಸಾರಥಿಯಾಗಿದ್ದ ಬೃಹನ್ನಳೆಯೇ ಯುದ್ಧದಲ್ಲಿ ಶತ್ರುಗ
ಳೊಂದಿಗೆ ಕಾದಿ ಜಯಿಸಿದನೆಂದು ಡಂಗುರವನ್ನು ಹೊಯ್ಸು. ನಿನ್ನ
ಮಗ ಉತ್ತರನೇ ಸಾರಥಿಯಾಗಿ ಕೆಲಸಮಾಡಿದನೆಂದು ಸಾರಿಸು.
ಇದು ಸುಳ್ಳಲ್ಲ. ನಾವು ಪಕ್ಷಪಾತದ ಮಾತುಗಳಾಡತಕ್ಕವರಲ್ಲ.
ನಮ್ಮ ನಾಲಿಗೆಯಲ್ಲಿ ಕವಲಿಲ್ಲ. ನಿನ್ನ ಮೋಹದ ಕಣ್ಣುಗಳಿಗೆ ನಿನ್ನ
ಮಗನೇ ಅತ್ಯಂತ ಬಲಶಾಲಿಯೆಂದು ತೋರಿರಬಹುದು. ಇದರಲ್ಲಿ
ದೋಷವೇನೂ ಇಲ್ಲ. ಸಾಂಸಾರಿಕ ಭ್ರಮೆಯು ಹೀಗೆಯೇ ಇರು
ವುದು. ಯುದ್ಧದಲ್ಲಿ ಕಾದಿ ಗೆದ್ದವನು ಬೃಹನ್ನಳೆಯೇ ಹೊರತು ನಿನ್ನ
ಮಗನಾದ ಉತ್ತರನಲ್ಲ. ಇದನ್ನು ಖಂಡಿತವಾಗಿ ಹೇಳಬಲ್ಲೆನು.
ಭೀಷ್ಮದ್ರೋಣ ಕೃಪಾಶ್ವತ್ಥಾಮಾದಿ ವೀರರೆಲ್ಲರೂ ನಿನ್ನ ಮಗನಿಗೆ
ಹೆದರಿ ಓಡಿಹೋಗತಕ್ಕವರೇ? ಚೆನ್ನಾಗಿ ಆಲೋಚಿಸು. ನಿಜವಾಗಿಹೇಳು.

ಕಂಕನು ಹೀಗೆ ಹೇಳುತ್ತಾ ಬಂದಹಾಗೆಲ್ಲಾ ವಿರಾಟರಾಯ
ನಿಗೆ ಕೋಪವು ಹೆಚ್ಚುತ್ತಾಬಂತು. ಅವನು ಹಲ್ಲುಗಳನ್ನು ಕಡಿಯು
ತ್ತಾ, ಕಣ್ಣುಗಳಲ್ಲಿ ಕೆಂಡವನ್ನು ಕಾರುತ್ತಾ, ಕೋಪದಿಂದ ಬಿಡುಗಳನ್ನು
ಕಚ್ಚುತ್ತಾ, ಚಿನ್ನದ ದಾಳವನ್ನು ತೆಗೆದುಕೊಂಡು ಕಂಕನ ಹಣೆಯ
ಮೇಲೆ ಬಡಿದನು. ಆ ಪೆಟ್ಟಿಗೆ ತಲೆಯುಸಲೆಯೊಡೆದು ಅದರಿಂದ
ರೋಹಣಾದ್ರಿಯ ಪ್ರವಾಹದಂತೆ ರಕ್ತಧಾರೆಯು ಸುರಿಯತೊಡಗಿತು.
ಧರ್ಮರಾಯನು ಆ ನೋವನ್ನು ಸೈರಿಸಿಕೊಂಡು ಸುರಿಯುತ್ತಿರುವ ರಕ್ತ
ವನ್ನು ಕೆಳಕ್ಕೆ ಬೀಳದಂತೆ ಕೈಸೇರೆಯಲ್ಲಿ ಹಿಡಿದು ಕೊಂಡು, ಓರೆನೋ
ಟದಿಂದ ರಾಜನಬಳಿ ನಿಂತಿದ್ದ ತಮ್ಮ ಧರ್ಮಪತ್ನಿಯಾದ ಸೈರಂಧ್ರಿಯ
ಮುಖವನ್ನು ನೋಡಿದನು. ತತ್‌ಕ್ಷಣವೇ ಆಕೆಯು ಓಡಿಬಂದು
"ಅಯ್ಯೋ ಪಾಪ! ಯತಿಗಳಿಗೆ ಎಷ್ಟು ನೋವಾಯಿತೋ?" ಎಂದು ತನ್ನ
ಸೀರೆಯುಸೆರಗಿನಿಂದ ಆ ರಕ್ತವನ್ನೆಲ್ಲಾ ಸ್ವಲ್ಪ ಮಾಚೆಲ್ಲದಹಾಗೆ ಒತ್ತಿಬಿ
ಟ್ಟಳು. ಆಮೇಲೆ ತನ್ನ ಕೈಗಳಿಂದ ಆತನ ಹಣೆಗೆ ಹತ್ತಿದ್ದ ರಕ್ತವನ್ನೊ

ರಸಿ, ಕೆನ್ನೆಯನ್ನು ತೊಡೆದು ನೀರಿನಿಂದ ಚೆನ್ನಾಗಿ ತೊಳೆದು ಒರಸಿದಳು.

ವಿರಾಟರಾಯನು ಅದನ್ನು ನೋಡಿ ಸೈರಂಧ್ರಿಗೆ ಇಂತೆಂದನು.

ವಿರಾಟ—''ಎಲೌ ಸೈರಂಧ್ರಿಯೇ? ಇವನ ರಕ್ತವನ್ನು ನೀನು ಏಕೆ ಒರಸಿದೆ? ಇದರ ಕಾರಣ ನನಗೆ ತಿಳಿಯಲಿಲ್ಲ. ಇವನು ನೊಂದರೆ ನೀನೇಕೆ ಹೆದರಬೇಕು? ಅಂತಃಪುರದಲ್ಲಿ ಕೆಲಸಮಾಡುತ್ತಿದ್ದ ಹೆಂಗಸು ಈ ರಾಜ ಸಭೆಗೆ ಬಂದುದೇತಕ್ಕೆ?

ಸೈರಂಧ್ರಿ—(ತಾಳಿಮೆಯಿಂದ) ''ಪ್ರಭುವೇ ಕೇಳು. ನಾನು ನಿನ್ನ ಹಿತಚಿಂತೆಯಿಂದಲೇ ಇಲ್ಲಿಗೆ ಓಡಿಬಂದೆನು. ಈ ರಕ್ತವನ್ನು ಒರಸದೆ ಹೋಗಿದ್ದರೆ ಅದು ನೆಲದಲ್ಲಿಬಿದ್ದು, ನಿನ್ನ ರಾಜ್ಯದ ಐಶ್ವರ್ಯವು ಉರಿದುಹೋಗುತ್ತಿತ್ತು. ಈ ಯತಿಯು ತನ್ನ ಕೈಯಲ್ಲಿ ಈ ರಕ್ತವನ್ನು ಹಿಡಿದುಕೊಂಡು ನಿನ್ನನ್ನು ಕಾಪಾಡಿದನು ಎಂದು ತಿಳಿ. ಇದರಿಂದ ನೀನು ಬದುಕಿಕೊಂಡೆ. ಈ ಯತಿಯರಕ್ತದ ಬಿಂದುತೊಟ್ಟು ಭೂಮಿಯಲ್ಲಿ ಬಿದ್ದುದಾದರೆ ಆ ಪ್ರದೇಶದಲ್ಲಿರುವವರನ್ನೆಲ್ಲಾ ಕೊಂದು ಹಾಕುವೆನೆಂದು ಬೃಹನ್ನಳೆಯು ಪ್ರತಿಜ್ಞೆಮಾಡಿರುವನು. ಇಂದು ನಿನ್ನ ಪುಣ್ಯವು ಚೆನ್ನಾಗಿತ್ತು.''

ವಿರಾಟನು ಇದನ್ನು ಕೇಳಿ ಆಶ್ಚರ್ಯಪಟ್ಟನು. ''ಏನಿದು? ಇವಳು ಯಾರು? ಈ ಯತಿಯು ಯಾರು? ನಾಟ್ಯಾಚಾರ್ಯನಾದ ಬೃಹನ್ನಳೆಗೂ ಇವಳಿಗೂ ಇರುವ ಸಂಬಂಧವೇನು? ಇದರ ಕಾಲು ಕೀಲುಗಳನ್ನು ತಿಳಿದುಕೊಳ್ಳುವುದು ಕಷ್ಟವಾಗಿದೆ. ಹೇಗಾದರೂ ಇರಲಿ.'' ಎಂದು ತಾನುಮಾಡಿದ ರಕ್ತಪಾತಕ್ಕೆ ನೊಂದುಕೊಂಡು ನನಗೆ ಈ ವಿಚಾರವೇತಕ್ಕೆ? ಎಂದು ಸುಮ್ಮನಾದನು.

ಅತ್ತಲಾ ಪಟ್ಟಣದಲ್ಲಿ ಉತ್ತರನನ್ನು ನೋಡುವುದಕ್ಕೆ ಸೇರಿದ್ದ ಜನರ ಸಂದಣಿಯು ನೂಕು ನುಗ್ಗಾಗಿದ್ದಿತು. ಮಂತ್ರಿಗಳೆಲ್ಲರೂ ಹೋಗಿ ಯುವರಾಜನನ್ನು ಎದುರುಗೊಂಡರು. ಬ್ರಾಹ್ಮಣರು ಸ್ವಸ್ತಿ

ವಾಚನಗಳನ್ನು ಹೇಳಿದರು. ಸುಮಂಗಲಿಯರು ಆರತಿಗಳನ್ನೆತ್ತಿ ಕು
ಮಾರನಮೇಲೆ ಅಕ್ಷತೆಗಳನ್ನು ಎರಚಿದರು. ಮಂಗಳವಾದ್ಯಗಳು
ಭೋರ್ಗರೆದುವು. ಜನರು ಕುಮಾರನ ಮುಖವನ್ನು ನೋಡಿ "ಇದೇ
ನು ? ಇಂತಹ ಸಂತೋಷ ಸಮಯದಲ್ಲಿ ನಮ್ಮ ರಾಜಪುತ್ರನ ಮುಖ
ದಲ್ಲಿ ಕಳೆಗುಂದಿ ಇದೆ. ಇದಕ್ಕೆ ಕಾರಣವೇನೋ ತಿಳಿಯದು. ಇವನಿಗೆ
ಹೇಗೆ ಜಯವಾಯಿತೋ ಕಾಣೆವು'' ಎನ್ನುತ್ತಿದ್ದರು. ಕೆಲವರು, ಈ
ಹಸುಳೆಯು ಭೀಷ್ಮಾಚಾರ್ಯರನ್ನು ಗೆದ್ದನೆ ? ಕರ್ಣದ್ರೋಣಾದಿಗಳನ್ನು
ಓಡಿಸಿದನೆ ? ಎನ್ನುತ್ತಿದ್ದರು. ಇನ್ನೂ ಕೆಲವರು—ನಿದಾನಿಸಿ ನೋ
ಡಿದರೆ ಇವನು ಗೆದ್ದ ಹಾಗೆಯೇ ಕಾಣಿಸುವುದಿಲ್ಲ. ಬೃಹನ್ನಳೆಯಿಂದಲೇ
ಈ ಕಾರ್ಯವಾಗಿರಬಹುದೆಂದು ತೋರುತ್ತದೆ ಎನ್ನುತ್ತಿದ್ದರು. ಆಗ
ಉತ್ತರನು ಪೌರಜನದ ಜಯಜಯಶಬ್ದವನ್ನು ನಿಲ್ಲಿಸಿ, ಎದುರಿಗೆ ತಂದ
ಆರತಿಗಳನ್ನು ಕಣ್ಣೆತ್ತಿನೋಡದೆ, ಭಟ್ಟರ ಹೊಗಳಿಕೆಗೆ ಕಿವಿಗೊಡದೆ,
ತಲೆಗೆ ಮುಸುಕುಹಾಕಿಕೊಂಡು, ನೆಲವನ್ನೇ ನೋಡುತ್ತಾ ಚಿಂತೆ
ಯಿಂದಲೇ ಅರಮನೆಗೆ ಹೋದನು. ಅರಮನೆಯುಲ್ಲಿದ್ದ ವಿರಾಟರಾ
ಯನು ತನ್ನ ಮಗನನ್ನು ನೋಡಿ ಬಿಗಿದಪ್ಪಿಕೊಂಡು "ಎಲೈ ಮಗನೇ,
ಬಾ. ವಸುಕುಲದ ಅರಸರ ಚಿಂತಾಮಣಿಯೇ ಬಾ. ಬಾ. ರಾಜದಳ
ಕ್ಕೆ ಧೂಮಕೇತುವೇ, ಬಾ. ನನ್ನ ಕಂದಯ್ಯ, ಬಾ. ಬಾ.''ಎಂದು
ಅಪ್ಪಿ ಕುಳ್ಳಿರಿಸಿಕೊಂಡು ಮುದ್ದಾಡಿದನು. ಅಂತಃಪುರದ ಸ್ತ್ರೀಯರು
ಉಪ್ಪಾರತಿಗಳನ್ನೂ ಬಣ್ಣದ ಸೊಡರುಗಳನ್ನೂ ರತ್ನದ ತಟ್ಟೆಗಳಲ್ಲಿ
ಇಟ್ಟುಕೊಂಡು ಬಂದು ಅವನಿಗೆ ನಿವಾಳಿಸುತ್ತಿದ್ದರು. ಆಗ ಉತ್ತ
ರನು ವಿರಾಟರಾಯನನ್ನು ನೋಡಿ ಇಂತೆಂದನು.

ಉತ್ತ—"ಅಪ್ಪಾ ! ಸಾಕು, ನಿಲ್ಲಿಸು. ಈ ಬಯಲಾಡಂ
ಬರವು ನನಗೆ ಬೇಡ. ಈ ಉಪಚಾರಗಳು ವೀರಪುರುಷರಿಗೆ ಒಪ್ಪುವು
ವೇ ಹೊರತು ನನ್ನಂತವನಿಗೆ ಸಲ್ಲವು. ಇವುಗಳನ್ನೆಲ್ಲಾ ಹಿಂದಿರುಗಿಸು.''

ವಿರಾ—(ನಗುತ್ತಾ) ಮಗುವೇ ! ದರ್ಪಶಾಲಿಯಾದ ನಿನಗೆ ಇಂತಹ ರಾಜೋಪಚಾರಗಳು ತಕ್ಕುವಲ್ಲದೆ ಉಳಿದವರಿಗೆ ಸಲ್ಲುವವೆ? ಇಂತಹ ಶೌರ್ಯವು ಲೋಕದಲ್ಲಿ ಮತ್ತೊಬ್ಬರಿಗೆ ಉಂಟೆ ? ನೀನೇ ನಿಗರ್ವಿಶಿರೋಮಣಿ. ಅನ್ಯಾದೃಶವಾದ ನಿನ್ನ ಶೌರ್ಯವನ್ನು ವಿನಯದಿಂದ ಮುಚ್ಚಿಕೊಳ್ಳಬೇಡ. ಮಗುವೇ! ಕರ್ಣಭೀಷ್ಮ ದ್ರೋಣಾದಿ ವೀರರನ್ನು ನೀನೊಬ್ಬನೇ ಗೆಲಿದು ಬಂದೆಯಲ್ಲವೇ ? ನಿನ್ನಂತಹ ಶೂರರನ್ನು ಎಲ್ಲಿಯೂ ನೋಡಿಲ್ಲ. ಉತ್ಸವಕಾಲದಲ್ಲಿ ಚಿಂತೆಗೆ ಕಾರಣವೇನು ? ತಂದೆ ! ಹೆತ್ತವರ ಮನಸ್ಸಿಗೆ ಸಂತೋಷವನ್ನು ತಂದೆ ! ನೀನು ಒಬ್ಬರಿಗೂ ಹಂಗಿಗನಲ್ಲ. ಏಕೆ ನಾಚಿಕೊಳ್ಳುತ್ತಿ ? ಎನ್ನುತ್ತ ತಗ್ಗಿಸಿದ ಅವನ ಮುಖವನ್ನು ಮೇಲಕ್ಕೆತ್ತಿದನು.

ಉತ್ತ—ಅಪ್ಪಾ ! ಕಾದಿ ಗೆಲಿದವನು ನಾನಲ್ಲ; ಬೇರೆ ಒಬ್ಬ ವೀರನಿರುವನು. ಸಾರಥಿಯಾಗಿ ಕುಕ್ಕರಿಸಿದ್ದ ನನಗೆ ಇಷ್ಟರ ಮರ್ಯಾದೆಗಳೇತಕ್ಕೆ ? ನನಗೆ ನಾಚಿಕೆಯಾಗುತ್ತಿದೆ ನನ್ನನ್ನು ಹೆಚ್ಚಾಗಿ ಹೊಗಳದೆ ಇರು ; ಬೇಡುವೆನು.

ವಿರಾ—ಮಗನೇ ! ಅಸ್ಥಾನದಲ್ಲಿ ವಿನಯವು ಶೋಭಿಸುವುದಿಲ್ಲ ; ಏಕೆ ಸುಳ್ಳುಹೇಳುತ್ತಿದ್ದೀಯೆ ? ಕಾದಿದವನು ನೀನೇ ಅಲ್ಲವೆ? ಸಾರಥಿಯಾಗಿದ್ದವನು ನಿನ್ನ ತಂಗಿಯ ಗುರುವಾದ ಬೃಹನ್ನಳೆಯಂತೆ ! ಈ ವಾದವು ಏತಕ್ಕೆ ? ನಿನ್ನ ಪರಾಕ್ರಮವನ್ನು ನಾನು ಅರಿಯೆನೆ ?

ಉತ್ತ—ತಂದೇ ! ನನಗೆ ಶೌರ್ಯವುಂಟೆಂದು ಏತಕ್ಕೆ ಹೊಗಳುತ್ತೀಯೆ ? ಬೆಂದುದನ್ನು ಕೆದಕಿ ಮತ್ತಷ್ಟು ನೋಯಿಸಬೇಡ. ನಿನ್ನೆಯ ಹಗಲು ನಡೆದ ಯುದ್ಧದಲ್ಲಿ ಗೆದ್ದವೀರನು ಬೇರೆ ಇರುವನು. ಸುಮ್ಮನೆ ನನ್ನನ್ನೇಕೆ ಬೇಸರಗೊಳಿಸುವೆ. ಗೆದ್ದ ವೀರನನ್ನು ನಾಳೆಯ ದಿನ ಉದಯದಲ್ಲಿ ನಿನಗೆ ತೋರುವೆನು. ಅಷ್ಟರೊಳಗೆ ಕೊಟ್ಟರೆ ನನ್ನ ಅರಮನೆಗೆ ಹೋಗಿ ಸೇರುವೆನು.

ಉತ್ತರನು ಈಪ್ರಕಾರ ಹೇಳಿ ತಂದೆಯಿಂದ ಅಪ್ಪಣೆಪಡೆದು ತನ್ನ ಮನೆಗೆ ಹೋದನು. ಅರ್ಜುನನು ಉತ್ತರೆಯ ಮನೆಗೆಹೋಗಿ ತಾನು ತಂದ ಉತ್ತಮ ವಸ್ತ್ರಗಳನ್ನೂ, ರತ್ನಾಭರಣಗಳನ್ನೂ, ಕಿರೀಟಾದಿ ವಸ್ತುಗಳನ್ನೂ ಅವಳಿಗೆ ಒಪ್ಪಿಸಿ ಸಂತೋಷದಿಂದ ಹೊರಟು ಧರ್ಮ ರಾಯನ ಮನೆಗೆ ಬಂದನು. ಸಂಕೇತಪ್ರಕಾರ ಭೀಮನೂ ಅಲ್ಲಿಗೆ ಬಂದು ಸೇರಿದನು. ದ್ರೌಪದಿಯೂ ನಕುಲಸಹದೇವರೂ ಅಲ್ಲಿಗೆ ಬಂದರು. ಅರ್ಜುನನು ತನ್ನ ಅಣ್ಣಂದಿರಿಗೆ ನಮಸ್ಕಾರಮಾಡಿದನು. ನಕುಲಸಹದೇವರು ಅರ್ಜುನಾದಿಗಳ ಕಾಲಿಗೆ ಎರಗಿ ಕೈಮುಗಿದರು. ಭೀಮಾದಿಗಳು ನಾಲ್ವರೂ ದಕ್ಷಿಣಗೋಗ್ರಹಣದಲ್ಲಿ ಸುಶರ್ಮಾದಿ ವೀರ ರನ್ನು ಗೆದ್ದ ರೀತಿಯನ್ನು ಹೇಳಿದರು. ಅರ್ಜುನನು ಕುರುಸೇನೆಯನ್ನು ಭಂಗಪಡಿಸಿ, ತಾನು ಮಾಡಿದ ಸಾಹಸ ಕೃತ್ಯಗಳನ್ನೆಲ್ಲಾ ವಿವರಿಸಿ ಹೇ ಳುತ್ತಿದ್ದನು. ಅಷ್ಟರಲ್ಲಿ ಅವನ ದೃಷ್ಟಿಯು ಧರ್ಮರಾಯನ ಹಣೆಯ ಮೇಲೆ ಬಿದ್ದಿತು. ಅವನ ನೆತ್ತಿಯಲ್ಲಿದ್ದ ಗಾಯವನ್ನು ನೋಡಿ, "ಇದೇ ನು! ಅಣ್ಣನವರ ಹಣೆಯಲ್ಲಿ ಗಾಯವಾಗಿದೆ; ರಕ್ತದ ಬಿಂದುಗಳು ತೊ ಟ್ಟಿಟ್ಟಹಾಗೆ ಕಾಣುತ್ತಿದೆ. ಇದರ ಕಾರಣವೇನು?" ಎಂದು ಕೇಳಿದನು.

ಧರ್ಮರಾಯನು—ತಮ್ಮಾ! ಕೋಪಿಸಬೇಡ, ಪ್ರಮಾದದಿಂದ ಹೀಗೆ ಆಯಿತು. ಹೋಗಲಿ. ಬಿಡು.

ಅರ್ಜು—ಅಣ್ಣಾ! ಇದರಿಂದ ನನ್ನ ಮನಸ್ಸಿನ ಸಂಶಯವು ಪರಿಹರವಾಗಲಿಲ್ಲ. (ಹತ್ತಿರ ಇದ್ದ ದ್ರೌಪದಿಯ ಕಡೆಗೆ ತಿರುಗಿ)ದೇವೀ! ನಡೆದುದನ್ನು ಮರೆಯದೆ ಹೇಳು.

ದ್ರೌಪ—(ಸಭೆಯಲ್ಲಿ ನಡೆದುದನ್ನೆಲ್ಲಾ ಹೇಳಿದಳು.)

ಅರ್ಜು—(ಸಿಟ್ಟಿನಿಂದ ಕಿಡಿಕಿಡಿಯಾಗಿ) ಈಗಲೇ ಈ ವಿರಾಟ ರಾಯನನ್ನು ಕೊಂದುಹಾಕುವೆನು. ಅವನು ಇಷ್ಟರಕೆಲಸ ಮಾಡಿದನೆ? ಅವನ ರಕ್ತವನ್ನು ಶಾಕಿನಿ ಡಾಕಿನಿಯರಿಗೆ ಕುಡಿಸುವೆನು. ಅವನಿಗೆ

ಮತ್ತು (ಮೈಕವು) ತಲೆಗೆ ಹತ್ತಿರಬಹುದು.

ಭೀಮ—ತಮ್ಮಾ! ನಿನಗೆ ಈಗ ತಿಳಿಯಿತೆ? ನನಗೆ ಮೊದಲಿನಿಂದಲೂ ಇದು ಗೊತ್ತುಂಟು. ಈ ವಿರಾಟರಾಯನಿಗೆ ಹುಚ್ಚು ಹಿಡಿದಿದೆ. ಅದನ್ನು ಬಿಡಿಸುವುದಕ್ಕೆ ಇದೇ ತಕ್ಕಕಾಲ. ಈ ನೀಚನನ್ನೂ ಕೀಚಕನಬಳಿಗೆ ಕಳುಹುವೆನು. ಇವನು ತನ್ನ ತಲೆಯ ಸಾಲಗಾರನಾಗಿ ತೋರುತ್ತಾನೆ. ನಮ್ಮ ಅಣ್ಣಯ್ಯನ ರಕ್ತವು ನೆಲದಮೇಲೆ ಸುರಿಯಿತೆ? ಛೀ! ಎಂತಹದ್ರೋಹಿ! ಇವನ ಕುಲವನ್ನೇ ಸವರಿ ಬಿಡುವೆನು. ಇವನನ್ನು ಈಗಲೇ ಸೀಳಿ ಭೂತಗಣಕ್ಕೆ ಬಲಿಕೊಡುವೆನು.

ಧರ್ಮ—(ಅವರನ್ನು ಸಮಾಧಾನ ಮಾಡಿ) ಸಹೋದರರಿರಾ! ಕೋಪಿಸಬೇಡಿರಿ. ಸೈರಣೆಯನ್ನು ತಂದು ಕೊಳ್ಳಿರಿ. ಕೆಟ್ಟುದನ್ನೆಣಿಸುವುದು ಉತ್ತಮರ ಮತವಲ್ಲ. ಎಲ್ಲಿಯಾದರೂ ಗುಣವನ್ನೇ ಹುಡುಕಬೇಕು. ನನ್ನ ರಕ್ತವು ನೆಲದಮೇಲೆ ಬಿದ್ದಿಲ್ಲ. ನಿಜವಾಗಿಯೂ ಬಿದ್ದಿಲ್ಲ. ನಿನ್ನಾಣೆ! ಅದು ಕೆಳಕ್ಕೆ ಬೀಳುವಷ್ಟರಲ್ಲಿ ಈ ದ್ರೌಪದಿಯು ತನ್ನ ಸೀರೆಯ ಸೆರಗಿನಿಂದ ರಕ್ತ ಸುರಿಯದಂತೆ ಒರಸಿಬಿಟ್ಟಳು. ಕೋಪಿಸಬೇಡ; ಸಮಾಧಾನ ತಂದುಕೋ; ನಿನ್ನ ಗಲ್ಲವನ್ನು ಹಿಡಿದು ಬೇಡುವೆನು.

ಭೀಮ—ಇಂತಹ ಕಾಲದಲ್ಲಿಯೂ ನಿಮ್ಮ ಸೈರಣೆಯನ್ನು ಬಿಡಲಾರಿರಾ! ಸಾಕುಬಿಡಿ. ತಾನೇ ರಾಜನೆಂಬ ಗರ್ವವು ಇವನ ನೆತ್ತಿಗೆ ಹತ್ತಿದೆ; ಇದನ್ನು ಬಿಡಿಸಲೇಬೇಕು. ಈ ಕೃತ್ಯವು ಕ್ಷಮಿಸಲ್ಪಡತಕ್ಕುದಲ್ಲ; ಈ ನೀಚನ ಜೀವವನ್ನು ಈಗಲೇ ಹೀರಿಬಿಡುವೆನು. ಇವನನ್ನು ಮಾತ್ರವೇ ಅಲ್ಲ. ಇವನ ಸಂತತಿಯನ್ನೇ ನಿರ್ಮೂಲ ಮಾಡಿಬಿಡುವೆನು. ಈ ದ್ರೌಪದಿಗೆ ಕೀಚಕನು ಮಾಡಿದ ತಪ್ಪಿಗೆ ತಕ್ಕ ಶಿಕ್ಷೆ ಮಾಡಿದುದಾಯಿತು ಈಗ ಇವನ ಅಪರಾಧಕ್ಕೆ ತಕ್ಕ ಪ್ರತಿಫಲ ಕೊಡಬೇಕಾಗಿದೆ.

ಧರ್ಮ—ತಮ್ಮ ಭೀಮಾ! ಕೇಳು. ಏಕೆ ಕೋಪಿಸಿಕೊಂಡು ಹಲ್ಲು ಮುದಿ ಕಡಿಯುತ್ತೀಯೆ? ರೋಷವನ್ನು ಬಿಡು. ನಾವು ಈ ವಿರಾಟರಾಯನ ಆಶ್ರಯದಲ್ಲಿ ಒಂದು ವರುಷದಿಂದ ಇದ್ದೆವು. ಕಡೆಗಾಲದಲ್ಲಿ ಇವನಿಗೆ ಕೇಡುಮಾಡಿ ಹೋದರೆ ಜನರು ನಮ್ಮನ್ನು ಏನೆನ್ನುವರು? ಆತುರಪಡಬೇಡ, ಸೈರಿಸು, ನಮಗೆ, ಕಷ್ಟಕಾಲ. ಪೂರ್ವಜನ್ಮದ ಕರ್ಮಫಲ. ಮಾಡತಕ್ಕದೇನು? ಅನುಭವಿಸಿಯೇ ತೀರಬೇಕು. ಪರರಿಗೆ ಹಾನಿಮಾಡಬಾರದು, ಸಮಾಧಾನತಂದುಕೋ.

ಭೀಮ—ಅಣ್ಣಯ್ಯಾ! ನೀವು ಬರಿಯ ಧರ್ಮಜಾಡ್ಯದಿಂದಲೇ ವೈರಿಗಳನ್ನು ನಿಗ್ರಹಿಸದೆ ಕೈಗೆ ಸಿಕ್ಕಿದಾಗ ಬಿಡಿಸುತ್ತಾ ಬಂದಿರಿ. ನಿಮ್ಮ ಮಾತಿಗೆ ಬದ್ಧರಾಗಿ ಕಾಡಿನಲ್ಲಿಯೂ ಇಲ್ಲಿಯೂ ಹದಿಮೂರು ವರುಷಗಳು ನವೆದುದು ಸಾಲದೆ? ನಾವು ಹೀಗೆಯೇ ಸುಮ್ಮನೆ ಇದ್ದು ಬಿಟ್ಟರೆ ಇನ್ನೆಂದಿಗೆ ನಾವು ರಾಜತೇಜವನ್ನು ಮೆರೆಯಿಸುವೆವು? ಈಗ ಸಮಾಧಾನಕ್ಕೆ ಕಾಲವಲ್ಲ, ಬಿಟ್ಟುಬಿಡಿರಿ.

ಧರ್ಮ—ತಮ್ಮಾ! ಸುಮ್ಮನೆ ಏತಕ್ಕೆ ಕೋಪಿಸಿಕೊಳ್ಳುವೆ? ಸೈರಿಸು, ಒಂದು ಉಪಾಯ ಹೇಳುವೆನು ಕೇಳು. ನಾಳೆ ಬೆಳಗಾದ ಮೇಲೆ ನಾವುಗಳೆಲ್ಲರೂ ನಮ್ಮನಮ್ಮ ನಿಜರೂಪದಿಂದ ಹೋಗಿ ಇವನ ಸಿಂಹಾಸನದ ಮೇಲೆ ಕುಳಿತುಕೊಂಡಿರೋಣ. ಆಗ ಈ ವಿರಾಟರಾಯನು ಬರುವನು. ಅವನು ವಿನಯವಾಗಿ ಕಂಡರೆ ಮನ್ನಿಸೋಣ, ತನ್ನ ಗರ್ವವನ್ನೇನಾದರೂ ತೋರಿಸುವಂತೆ ಕಂಡುಬಂದರೆ ಅವನಿಗೆ ತಕ್ಕ ಪ್ರಾಯಶ್ಚಿತ್ತ ಮಾಡಿಬಿಡೋಣ.

ಧರ್ಮರಾಯನ ಈ ಉಪದೇಶವನ್ನು ಕೇಳಿ ಎಲ್ಲರೂ ಒಪ್ಪಿಕೊಂಡರು. ಬಳಿಕ ಅವರು ಸಮಾಧಾನಗೊಂಡು ತಮ್ಮ ತಮ್ಮ ಮನೆಗಳಿಗೆ ಹೋಗಿ ಮಲಗಿದರು.

——:0:——

## ಹನ್ನೊಂದನೆಯ ಸಂಧಿ.

**ಶ್ರೀ ಕೃಷ್ಣನು ಅಭಿಮನ್ಯುವಿನ ಮದುವೆಗೋಸ್ಕರ ದ್ವಾರಕಾಪುರದಿಂದ ಹೊರಟು ಉಪಪ್ಲಾವ್ಯಕ್ಕೆ ಬಂದು ಅಲ್ಲಿ ಲಗ್ನವನ್ನು ನೆರವೇರಿಸಿದನು.**

ಪಾಂಡವರು ಈಪ್ರಕಾರ ಮಂತ್ರಾಲೋಚನೆ ಮಾಡಿ, ನಾಳೆ ಬೆಳಿಗ್ಗೆ ವಿರಾಟರಾಯನ ಸಭೆಯಲ್ಲಿ ತಾವುಗಳು ತಮ್ಮ ನಿಜರೂಪವನ್ನು ಪ್ರಕಟಿಸಬೇಕೆಂದು ನಿಶ್ಚಯಿಸಿಕೊಂಡರಷ್ಟೆ! ಅದೇ ರಾತ್ರಿಯಲ್ಲಿಯೇ ಅಜ್ಞಾತವಾಸದ ರೂಪಗಳನ್ನು ಬಿಟ್ಟುಕೊಟ್ಟರು. ದುರ್ಗೆಯ ವರ ಪ್ರಸಾದದಿಂದ ತಮ್ಮ ತಮ್ಮ ನಿಜರೂಪಗಳನ್ನು ಪಡೆದರು. ಸುಖ ದಿಂದ ಆರಾತ್ರಿ ಕಳೆಯಿತು. ಅವರ ಪುರೋವೃದ್ಧಿ ಸೂಚನೆಯೋ ಎಂಬಂತೆ ಅರುಣೋದಯವಾಯಿತು. ಸ್ವಲ್ಪ ಹೊತ್ತಿನಲ್ಲಿಯೇ ಸೂ ರ್ಯನು ಪೂರ್ವಾದ್ರಿಯಲ್ಲಿ ಹುಟ್ಟಿದನು. ಆ ಸೂರ್ಯನ ಶ್ರುತಿಸಿದ್ಧವಾದ ರಥದ ಕುದುರೆಗಳ ಗೊರಸುಗಳಿಂದ ಎದ್ದ ಕೆಂಧೂಳಿಯೋ ಎಂಬಂತೆ ಆಕಾಶದಲ್ಲಿ ಕೆಂಬಣ್ಣವು ಹೊಳೆಯಿತು. ಪಾಂಡವರ ಸಂತೋಷವೆಂಬ ರಾಗರಸವುಬ್ಬಿ ಭೂಮಿಯನ್ನೆಲ್ಲ ಆವರಿಸಿ ಗಗನಕ್ಕೂ ಹರಡಿತೋ ಎಂಬಂತೆ ಕಾಣಿಸಿತು. ಆ ರಾಗವು ಪೂರ್ವದಿಕ್ಕೆಂಬ ಸ್ತ್ರೀಯು ಗಗನ ವೆಂಬ ಕೇಶಪಾಶದಲ್ಲಿ ತೆಗೆದ ಬೈತಲೆಗೆ ಹಚ್ಚಿದ ಕುಂಕುಮರೇಖೆಯೋ ಎಂಬ ಭ್ರಾಂತಿಯನ್ನು ಹುಟ್ಟಿಸುತ್ತಿತ್ತು.

ಸೂರ್ಯನು ಕಮಲಗಳ ಪರಿಮಳೋತ್ಸವಕ್ಕೆ ತುಂಬಿಗಳೆಂಬ ಅತಿಥಿಗಳನ್ನು ಕರೆಯಿಸಿಕೊಂಡನು. ಚಂದ್ರಕಾಂತ ಶಿಲೆಗಳು ತನ್ನ ಶತ್ರುವಿಗೆ ಆಪ್ತವಾಗಿವೆಯೆಂದು ಅವುಗಳನ್ನೆಲ್ಲಾ ಬಾಗಿಸಿದನು. ತನ್ನ ನ್ನೇ ನಂಬಿದ್ದ ಚಕ್ರವಾಕಗಳು ರಾತ್ರಿಯೆಲ್ಲಾ ಸೆರೆಯಲ್ಲಿದ್ದುದರಿಂದ ತನ್ನ ಅಭ್ಯುದಯಸೂಚಕವಾಗಿ ಅವುಗಳ ಸೆರೆಯನ್ನು ಬಿಡಿಸಿದನು. ಅವನು ತನ್ನ ಶತ್ರುವಾದ ರಾಜನ ರಾಜ್ಯವನ್ನು ಹಾಳುಮಾಡಿ ಪೂ ರ್ವಾದ್ರಿಯೆಂಬ ಅರಮನೆಯಲ್ಲಿ ಓಲಗ ಕೊಡುತ್ತಿದ್ದನು.

ಈ ಪ್ರಕಾರವಾಗಿ ಪ್ರಾತಃಕಾಲದ ಚಿಹ್ನೆಗಳೆಲ್ಲವೂ ಕಂಡು ಬಂದು ಲೋಕದ ಅಂಧಕಾರವು ಕಳೆಯಿತು. ಪಾಂಡವರೆಲ್ಲರೂ ದ್ರೌಪದೀಸಹಿತರಾಗಿ ದೇವರಧ್ಯಾನಮಾಡಿ, ಮಂಗಳಸ್ನಾನ ಮಾಡಿದರು. ಬಳಿಕ ವಸ್ತ್ರಾಭರಣಮಾಲ್ಯಾದಿಗಳಿಂದ ಅಲಂಕೃತರಾಗಿ ತಮ್ಮ ನಿತ್ಯ ಕರ್ಮಗಳನ್ನು ನೇರವೇರಿಸಿದರು. ಆಮೇಲೆ ಬ್ರಾಹ್ಮಣರಿಗೆ ಯಥಾಶಕ್ತಿಯಾಗಿ ವಸ್ತ್ರಾಭರಣಗಳನ್ನು ದಾನಮಾಡಿದರು. ಆಗ ಧರ್ಮರಾಯನು ದುಃಖವೆಂಬ ಕತ್ತಲೆಯನ್ನು ಭೇದಿಸಿಕೊಂಡು ಬಂದ ಹರ್ಷವೆಂಬ ಸೂರ್ಯಮಂಡಲದಂತೆಯೂ, ಅಜ್ಞಾನವನ್ನು ಕಳೆದು ಮುಕ್ತಾವಸ್ಥೆಯಲ್ಲಿರುವ ಚಿತ್ಸ್ವರೂಪದಂತೆಯೂ, ನಿರ್ಮಲವಾದ ಕ್ಷಾತ್ರತೇಜಸ್ಸಿನಿಂದ ಮೆರೆದನು. ಆತನು ಹದಿಮೂರು ವರುಷವೂ ಏಕನಿಷ್ಠೆಯಿಂದ ಆಚರಿಸಿದ ಸತ್ಯವ್ರತವೆಂಬ ಶ್ರೇಷ್ಠವಾದ ಮಹಾಯಜ್ಞದ ಸಮಾಪ್ತಿಸೂಚಕವಾದ ಅವಭೃತಸ್ನಾನ ಮಾಡಿದವನಂತೆ ಹೊಳೆಯುತ್ತಿದ್ದನು. ಬಳಿಕ ಆತನು ಭೀಮಸೇ ಮೊದಲಾದ ತಮ್ಮಂದಿರನ್ನೂ, ರಾಣಿಯನ್ನೂ ಕೂಡಿಕೊಂಡು ವಿರಾಟರಾಯನ ಸಭಾಮಂದಿರಕ್ಕೆ ಬಂದನು. ಆತನು ಅಲ್ಲಿ ಮೆರೆಯುವ ರತ್ನ ಖಚಿತವಾದ ಸಿಂಹಾಸನದ ಮೇಲೆ ಮಂಡಿಸಿದನು. ಆತನ ಸಹೋದರರೂ, ಸಾಧ್ವಿಯಾದ ದ್ರೌಪದಿಯೂ, ಧರ್ಮರಾಯನ ಪಾದಸೇವೆ ಮಾಡುತ್ತಿದ್ದರು. ಅಲ್ಲಿ ಇದ್ದ ಕಂಚುಕಿಗಳು ಈ ಮಹಾತ್ಮರನ್ನು ನೋಡಿ ಬೆರಗಾದರು. ಅವರು "ಆಹಾ! ಇವರು ಯಾರು? ರಾಜಸಿಂಹಾಸನವನ್ನೇರಿ ಕುಳಿತುಕೊಂಡಿರುವರು ! ಮಹಾ ತೇಜಸ್ವಿಗಳಾದ ಇವರನ್ನು ನೋಡಿದರೆ ಕಣ್ಣೆವೆಗಳು ಸೀದುಹೋಗುತ್ತಿವೆಯಲ್ಲ !" ಎಂದು ಹೆದರಿ, ಅಲ್ಲಿಂದ ತತ್‌ಕ್ಷಣ ಓಡಿಹೋಗಿ! ವಿರಾಟರಾಯನನ್ನು ಎಬ್ಬಿಸಿ ಬಿನ್ನವಿಸಿದರು. "ಮಹಾಪ್ರಭೋ ! ಯಾರೋ ಆಸ್ಥಾನಕ್ಕೆ ಬಂದು ತಮ್ಮ ಸಿಂಹಾಸನದ ಮೇಲೆ ಕುಳಿತಿರುವರು. ಅವರನ್ನು ನೋಡಿದರೆ ಮನುಷ್ಯರಂತೆ ಕಾಣಿಸುವುದಿಲ್ಲ. ಸ್ವರ್ಗಾಧಿಪತಿಯಾದ

ಇಂದ್ರನೋ, ಪರಮೇಶ್ವರನೋ, ಅಥವಾ ಲಕ್ಷ್ಮೀಕಾಂತನಾದ ನಾರಾ ಣನೋ ತಿಳಿಯದು. ಅವರನ್ನು ತಡೆಯಲು ನಮ್ಮಿಂದ ಸಾಧ್ಯವಿಲ್ಲ.''

ವಿರಾಟರಾಯನು ಇದನ್ನು ಕೇಳಿ ''ಏನಿದು ಆಶ್ಚರ್ಯಕರವಾಗಿದೆ ? ನನ್ನ ಸಿಂಹಾಸನದ ಮೇಲೆ ಬಂದು ಕುಳಿತಿರುವ ದೇವತೆಗಳು ಯಾರಾಗಿರಬಹುದು ? ಹೋಗಿ ಪ್ರತ್ಯಕ್ಷವಾಗಿ ನೋಡಿ ತಿಳಿಯೋಣ.'' ಎಂದು ಯೋಚಿಸಿ, ತನ್ನ ಮಗನಾದ ಉತ್ತರನನ್ನೂ, ಪುರೋಹಿತರನ್ನೂ, ಪ್ರಧಾನಿಗಳನ್ನೂ ಕರೆದುಕೊಂಡು ಸಭಾಮಂದಿರಕ್ಕೆ ಬಂದು ನೋಡಿದನು. ಪಾಂಡವರ ಆಭರಣಗಳಲ್ಲಿ ಹುದುಗಿರುವ ಮುತ್ತುಗಳಕಾಂತಿಯು ಚಂದ್ರಬಿಂಬದಿಂದ ಅನ್ಮೃತಕಿರಣಗಳು ಸ್ರವಿಸಿ ಹರಿದುಬಂದ ಪ್ರವಾಹದ ಅಲೆಗಳೋ ಎಂಬಂತೆ ಸಭೆಯಲ್ಲೆಲ್ಲಾ ಹರಡಿಕೊಂಡಿದ್ದಿತು. ಆ ಸಮಯದಲ್ಲಿ ವಿರಾಟರಾಯನು ದೂರದಲ್ಲಿಯೇ ನಿಂತುಕೊಂಡು ಅವರನ್ನು ನೋಡಿದನು. ಅಲ್ಲಿ ಪರಮೇಶ್ವರನ ನಾಲ್ಕು ಮುಖಗಳ ಮಧ್ಯದಲ್ಲಿ ಪ್ರಕಾಶಿಸುವ ಈಶಾನವೆಂಬ ಐದನೆಯ ಮುಖದಂತೆ ನಾಲ್ವರು ಸಹೋದರರ ಮಧ್ಯದಲ್ಲಿ ಯುಧಿಷ್ಠಿರನು ಕುಳಿತಿದ್ದನು. ಆತನ ಎಡಗಡೆ ಪತಿವ್ರತಾಶಿರೋಮಣಿಯಾದ ದ್ರೌಪದಿಯು ಕುಳಿತಿದ್ದಳು. ಈ ಮಹಾತ್ಮರನ್ನು ನೋಡಿದಕೂಡಲೇ ವಿರಾಟರಾಯನ ಕಣ್ಣಿನ ದೃಷ್ಟಿಯು ಅವರ ದೇಹಕಾಂತಿಯೆಂಬ ಪ್ರವಾಹದಲ್ಲಿಯೇ ಮುಳುಗಿತು. ಆಗ ವಿರಾಟರಾಯನು ತನ್ನ ಮನಸ್ಸಿನಲ್ಲಿ ''ಇದೇನು ! ಭ್ರಾಂತಿಯೋ, ಕಳವಳವೋ, ಕನಸೋ ನನ್ನ ಮನಸ್ಸಿಗೆ ಏನೂ ತೋರದೆ ಇದೆ. ಇವರು ನರಾಕೃತಿಯನ್ನು ತಾಳಿದ ದೇವತೆಗಳಾಗಿರಬಹುದೆ? ಕಣ್ಣು ತೆರೆಯಲಿಕ್ಕೆ ಭಯವಾಗುತ್ತಿದೆಯಲ್ಲ ! ಪರಮೇಶ್ವರನೇ ಇಲ್ಲಿ ಅವತರಿಸಿರುವನೋ ಏನೋ!'' ಎಂದು ಬೆರಗಾಗಿ ನೋಡುತ್ತಿದ್ದನು. ಕೆಲವರು ಇವರ ಸ್ವರೂಪವನ್ನು ನೋಡಿ ''ಆಹಾ! ಇವರ ರೂಪವು ನಮ್ಮಲ್ಲಿ ಈಚೆಗೆಬಂದು ಸೇರಿದ ಕಂಕ, ವಲಲ, ಬೃಹನ್ನಳೆ ಇವರ ಆಕೃತಿಯನ್ನು ಹೋಲು

ತ್ತಿದೆ'' ಎನ್ನುತ್ತಿದ್ದರು. ಇವರು ಮನುಷ್ಯರಲ್ಲ. ದೇವತೆಗಳೇ ಬಂದಿರುವರೋ ಏನೋ, ಎಂದು ಕೆಲವರು ಆಡಿಕೊಳ್ಳುತ್ತಿದ್ದರು. ''ಏನೋ ಅಪ್ಪಾ ! ಇವರ ಮಾಹಾತ್ಮ್ಯವು ನಮಗೆ ಏನೂ ಗೊತ್ತಾಗುವುದೇ ಇಲ್ಲ. ಬರಿಯ ವಿಚಾರದಿಂದ ಫಲವೇನು?'' ಎಂದು ಕೆಲವರು ಗುಜುಗುಜಿಸುತ್ತಿದ್ದರು.

ಆಗ ಉತ್ತರನು ತಂದೆಯನ್ನು ನೋಡಿ ''ಅಪ್ಪಾ! ಕೇಳು. ನಿನ್ನೆಯದಿನ ನನ್ನ ಜತೆಯಲ್ಲಿ ಬಂದು ಶತ್ರುರಾಜರನ್ನೆಲ್ಲಾ ಜಯಿಸಿದ ವೀರನನ್ನು ನೋಡಿದೆಯಾ ? ಇಗೋ ಇಲ್ಲಿಯೇ ಇದ್ದಾನೆ. ನೋಡು. ಇವನೇ ಅರ್ಜುನನು. ಇವನ ಮುಂದುಗಡೆ ಪ್ರಕಾಶಿಸುತ್ತಾ ಕುಳಿತಿರುವವನು ಯಾರು ? ಬಲ್ಲೆಯಾ ? ಇವನೇ ಕೀಚಕಾಂತಕನಾದ ಭೀಮಸೇನನು. ಇಗೋ ನೋಡು. ಇಲ್ಲಿ ಕುಳಿತಿರುವವರು ಅವಳಿ ಮಕ್ಕಳಾದ ನಕುಲಸಹದೇವರು. ಇತ್ತನೋಡಿದೆಯಾ ? ಸಿಂಹಾಸನದಲ್ಲಿ ಮಂಡಿಸಿರುವ ಮಹಾತ್ಮನು ಯಾರೆಂದು ತಿಳಿದಿರುವೆ ? ಈತನೇ ಪಾಂಡವರಲ್ಲಿ ಹಿರಿಯನಾದ ಧರ್ಮಪುತ್ರನಲ್ಲವೆ ? ಇಗೊನೋಡು. ಈಕೆಯೇ ಪಂಚಪಾಂಡವರ ಧರ್ಮಪತ್ನಿಯಾಗಿ, ವನವಾಸಕ್ಲೇಶಗಳನ್ನೂ, ಅಜ್ಞಾತವಾಸದ ದುಃಖಗಳನ್ನೂ ಸಹಿಸಿ, ಕೃಶಾಂಗಿಯಾಗಿರುವ ದ್ರೌಪದಿಯು. ಪತಿವ್ರತಾಶಿರೋಮಣಿಯೆಂಬ ಹೆಸರು ಇವಳಿಗೇನೇ ಸಲ್ಲುವುದು. ಇವರೇ ಪಾಂಡವರು. ಗಂಭೀರಹೃದಯರು. ವಿಮಲ ಸದ್ಗುಣಸಂಪನ್ನರು. ಇವರೆಲ್ಲರನ್ನೂ ನೋಡಿದೆಯಾ ? ಇವರು ನಮ್ಮಲ್ಲಿ ಒಂದು ಸೇರಿದುದು ಭಾಗ್ಯಲಕ್ಷ್ಮಿಯೇ ನಮ್ಮ ಮನೆಗೆ ದಯಮಾಡಿದಂತೆ ಆಯಿತು. ಈ ಮಹಾರಾಯನ ಪಾದಗಳಿಗೆ ವಂದಿಸಿ, ಶರಣಾಗತರಾಗಿ ಧನ್ಯತೆಯನ್ನು ಹೊಂದೋಣ. ನಡೆಯಿರಿ. ಎಂದು ಒಬ್ಬೊಬ್ಬರನ್ನಾಗಿ ತೋರಿಸಿದನು.

ವಿರಾಟ—(ತನ್ನ ಮಗನಮಾತು ಕೇಳಿ ಅತ್ಯಾಶ್ಚರ್ಯಪಟ್ಟು)

ಓಹೋ ! ಈತನೇ ಮಹಾತ್ಮನಾದ ಧರ್ಮರಾಯನೇ ! ಇವನು ಭೀಮನೇ ! ಇವನೇ ಅರ್ಜುನನೇ ! ಇವರು ನಕುಲಸಹದೇವರೇ ! ಈಕೆಯೋ ಪತಿವ್ರತಾ ಶಿರೋಮಣಿಯಾದ ದ್ರೌಪದಿಯೇ ! ಇವರು ಎಲ್ಲಿಂದ ಇಲ್ಲಿಗೆ ಬಂದರು ? ನಮ್ಮ ಪುಣ್ಯವಿಶೇಷದಿಂದ ಇವರ ದರ್ಶನವು ನಮಗೆ ಲಭ್ಯವಾಯಿತು !!

ಉತ್ತರ—ತಂದೆಯೇ ! ಇವರು ಅಜ್ಞಾತವಾಸಕ್ಕಾಗಿ ತಮ್ಮ ರೂಪಗಳನ್ನು ಬದಲಾಯಿಸಿಕೊಂಡು ಬಂದು, ನಮ್ಮ ಪಟ್ಟಣದಲ್ಲಿ ಸೇರಿಕೊಂಡಿದ್ದರು. ಇವರ ಬಳಕೆಯೋ ಬೇರೆ ; ನಡತೆಯೋ ಬೇರೆ ; ಹೆಸರುಗಳೇ ಬೇರೆ ; ಕ್ರಿಯೆಗಳೇ ಬೇರೆ ; ಆಗಿದ್ದುವು. ತತ್ವಜ್ಞಾನಿಯು ಈ ಲೋಕಕ್ಕೆ ಹುಚ್ಚನಂತೆ ತೋರುವನಲ್ಲವೇ ? ಈ ಪಾಂಡವರು ಕಾರಣಾಂತರದಿಂದ ಬಂದು ಬೇರೆ ರೂಪದಿಂದ ನಮ್ಮಲ್ಲಿದ್ದು ಕಾಲಕಳೆದರು. ಇಂದಿಗೆ ನಮ್ಮ ಜನ್ಮವೂ , ರಾಜತ್ವವೂ ಸಫಲವಾದುವು. ಇವರಿಗೆ ಶರಣಾಗತರಾಗಿ ನಮಸ್ಕರಿಸೋಣ, ನಡಿ.

ಈಮಾತು ಕೇಳಿ ವಿರಾಟರಾಯನಿಗೆ ಬಹುಸಂತೋಷವಾಯಿತು. ಆಗಲೇ ಮಣಿಕನಕಾಂಬರಗಳನ್ನು ತರಿಸಿ, ಅವರಿಗೆ ಕಾಣಿಕೆಯಾಗಿ ಒಪ್ಪಿಸಿ, ತನ್ನ ಪುತ್ರಮಿತ್ರಾಮಾತ್ಯರೊಡಗೂಡಿ ಬಂದು ಪಾಂಡವರಿಗೆ ಕೈಮುಗಿದು ಇಂತೆಂದನು.

ವಿರಾ—ಆರ್ಯನೇ ! ನಮ್ಮನ್ನು ರಕ್ಷಿಸು. ತಮ್ಮ ಪಾದದಲ್ಲಿ ತಪ್ಪುಮಾಡಿದೆನು ಮನ್ನಿಸು. ಇಗೋ, ಶರಣಾಗತನಾಗಿದ್ದೇನೆ. (ಧರ್ಮರಾಯನ ಕಾಲುಗಳನ್ನು ಹಿಡಿದುಕೊಂಡು) ನಾನು ಮಹಾಪರಾಧಿ. ಎಲೈ ದಯಾಳುವೇ ? ನಾನು ನಿನ್ನ ಪಾದ ಸೇವಕನು. ನನ್ನನ್ನು ಕಾಪಾಡು.

ಈಪ್ರಕಾರ ವಿರಾಟರಾಯನು ಹೇಳಿದಮೇಲೆ ತಾನೂ ತನ್ನ ಪರಿವಾರವೂ ಬಹು ಭಯಭಕ್ತಿಗಳಿಂದ ನಮಸ್ಕರಿಸಿದರು. ರಾಣಿಯಾದ

ಸುಧೇಷ್ಣೆಯು ತನ್ನ ಮಗಳೊಂದಿಗೆ ಅಲ್ಲಿಗೆ ಬಂದು ದ್ರೌಪದಿಗೆ ನಮಸ್ಕಾರಮಾಡಿ ಕಾಣಿಕೆಗಳನ್ನು ತಂದು ಒಪ್ಪಿಸಿ ಕೈಕಟ್ಟಿಕೊಂಡು ನಿಂತಿದ್ದಳು. ಪುರಜನರೂ ಪ್ರತ್ಯೇಕವಾಗಿ ಬಂದು ಕಾಣಿಕೆಗಳನ್ನೊಪ್ಪಿಸಿ ನಮಸ್ಕರಿಸಿದರು. ಆಗ ಧರ್ಮರಾಯನು ಮುಗುಳು ನಗೆಯಿಂದ ಭೀಮಾರ್ಜುನರ ಮುಖವನ್ನು ನೋಡಿದನು. ಆಗ ತಮ್ಮಂದಿರು ತಲೆಬಾಗಿ ಅಣ್ಣನಿಗೆ ನಮಸ್ಕಾರಮಾಡಿದರು. ಎಲ್ಲರೂ ಕಾಣಿಕೆಗಳನ್ನು ಪರಿಗ್ರಹಿಸಿ, ಅವರವರ ಗೌರವಕ್ಕೆ ತಕ್ಕಂತೆ ಎಲ್ಲರನ್ನೂ ಮನ್ನಿಸಿದರು. ಆಗ ಧರ್ಮರಾಯನು ವಿರಾಟರಾಯನ ತಲೆಯನ್ನೆತ್ತಿ ಹಿಡಿದು, ತನ್ನ ಹತ್ತಿರ ಕುಳ್ಳಿರಿಸಿಕೊಳ್ಳಲಿಕ್ಕೆ ಹೋಗಲು, ಆತನು ಅದನ್ನು ತಪ್ಪಿಸಿಕೊಂಡು ಸಿಂಹಾಸನಕ್ಕೆ ಸ್ವಲ್ಪ ದೂರದಲ್ಲಿ ಬಂದು ನಿಂತು, ಅತ್ಯಾಶ್ಚರ್ಯದಿಂದ.

ವಿರಾ—(ತನ್ನಲ್ಲಿ) ಆಹಾ! ನಾನು ಎಷ್ಟರ ಪುಣ್ಯಮಾಡಿದ್ದೆನೋ! ಪುಣ್ಯಾತ್ಮನಾದ ಧರ್ಮರಾಯನ ಪಾದದರ್ಶನವು ಲಭಿಸಿತು. (ಪ್ರಕಾಶವಾಗಿ) ಮಹಾತ್ಮನಾದ ಯುಧಿಷ್ಠಿರನೇ! ಕೇಳು. ನಿಮ್ಮಗಳ ದರ್ಶನದಿಂದ ಇಂದಿಗೆ ಧನ್ಯನಾದೆನು. ಈ ಲೋಕದಲ್ಲಿ ನನಗೆ ಸಮರಾದ ಪುಣ್ಯವಂತರಿಲ್ಲವೆಂದು ತಿಳಿಯುತ್ತೇನೆ. ಈ ದೇಶವು ನನ್ನದಲ್ಲ; ನಿಮ್ಮದೇ ಎಂದು ತಿಳಿಯಿರಿ. ಈ ನಗರವೂ ನಿಮ್ಮದು. ಈ ಖಜಾನೆಯೂ ನಿಮ್ಮದೇ. ನನ್ನ ದೇಹವೇ ನಿಮ್ಮ ಅಧೀನವಾಗಿದೆ. ನೀವೇ ನನ್ನನ್ನು ಕಾಪಾಡಬೇಕು. ಈ ಶುಭಮುಹೂರ್ತದಲ್ಲಿ ತಮಗೆ ಇದೇ ಸಿಂಹಾಸನದಲ್ಲಿಯೇ ಪಟ್ಟಾಭಿಷೇಕ ಮಾಡುವೆನು. ದಯೆಮಾಡಿ, ನನ್ನ ಪ್ರಾರ್ಥನೆಯನ್ನು ಅಂಗೀಕರಿಸಿ, ಕೃತಾರ್ಥನನ್ನಾಗಿ ಮಾಡಿರಿ.

ಧರ್ಮ—(ನಗುತ್ತಾ) ಅಯ್ಯಾ ದೊರೆಯೇ! ನಿನ್ನ ವಿನಯವಚನಗಳೆಂಬ ಅಮೃತರಸದಿಂದ ಇದಕ್ಕೆ ಮೊದಲೇ ನನಗೆ ಅಭಿಷೇಕ

ವನ್ನು ಮಾಡಿದ್ದೀಯೆ. ಇದರಿಂದಲೇ ಸಂತುಷ್ಟನಾದೆನು. ಇನ್ನು ಬೇರೆ ನನಗೆ ಪಟ್ಟಾಭಿಷೇಕವೇಕೆ? ಇಷ್ಟೇ ಸಾಕು. ಈ ಜನರೆಲ್ಲಾ ನಮ್ಮವರೇ; ನೀನೂ ನಮ್ಮವನಲ್ಲವೆ? ಹೆಚ್ಚು ಉಪಚಾರ ವಾಕ್ಯಗಳು ಬೇಕಾಗಿಲ್ಲ. ಈ ಸಹೋದರರು ಕಾಡಿನಲ್ಲಿ ಬಹಳ ನವೆದರು. ಇವರ ಕೋಪಾಗ್ನಿಯು ಉರಿಯುತ್ತಿದೆ. ಇದು ಇನ್ನೂ ನಂದಲಿಲ್ಲ. ಮಹಾ ಯುದ್ಧ ಮಾಡಿ ಶತ್ರುಗಳನ್ನು ಆಹುತಿ ತೆಗೆದುಕೊಂಡು ಹಸ್ತಿನಾಪುರಕ್ಕೆ ಎಂದಿಗೆ ಹೋದೇವು? ಎಂದು ಆತುರ ಪಡುತ್ತಿದ್ದಾರೆ. ನಿಮಗೂ ಇದು ತಿಳಿದೇ ಇದೆ. ಮುಂದಿನ ಕಾರ್ಯಕ್ಕೆ ನಾವು ಬೇಗ ಹೊರಡ ಬೇಕಾಗಿದೆಯಲ್ಲವೆ?

ವಿರಾ—ಅರ್ಜುನೇ! ನಿಮ್ಮ ಮಾತು ನಿಜ. ಎಲ್ಲವನ್ನೂ ತಿಳಿದ ಹಿರಿಯರಿಗೆ ಹೆಚ್ಚಾಗಿ ಹೇಳತಕ್ಕ ಶಕ್ತಿ ನನಗೆ ಇಲ್ಲ. ತಮ್ಮ ಉಪಕಾರದ ಋಣವನ್ನು ಹೇಗೆ ತೀರಿಸಲಿ?

ಉತ್ತರ—(ತಂದೆಯ ಮುಖನೋಡಿ) ಅಪ್ಪಾಜಿ! ಇವರು ಮಾಡಿದ ಉಪಕಾರಕ್ಕೆ ಯಾವುದಾದರೂ ನಾವು ಪ್ರತ್ಯುಪಕಾರ ಮಾ ಡಲೇಬೇಕು.

ವಿರಾ—ಮಗೂ—ನಿನ್ನ ಮಾತು ಸರಿಯೇ. ಏನುಮಾಡಿದರೆ ಇವರ ಮನಸ್ಸಿಗೆ ಒಪ್ಪುವುದು. ಯೋಚಿಸಿ ಹೇಳು.

ಉತ್ತ—ಬಾಲನ ಬಿನ್ನಹವೊಂದಿದೆ. ನಮ್ಮ ಉತ್ತರೆಯು ಮದುವೆಗೆ ನೆರೆದಿದ್ದಾಳೆ. ಯುದ್ಧದಲ್ಲಿ ನನ್ನ ಪ್ರಾಣವನ್ನು ಉಳಿಹಿದ ಮಹಾಪುರುಷನಾದ ಅರ್ಜುನನಿಗೆ ಈಕೆಯನ್ನು ಕೊಟ್ಟು, ಮದುವೆ ಮಾಡಿ ಧನ್ಯರಾಗೋಣವೆಂದು ನನ್ನ ಅಭಿಲಾಷೆ ಇದೆ.

ವಿರಾ—ಇದು ಬಹು ಒಳ್ಳೇ ಯೋಚನೆ. ಹಿರಿಯರಾದ ಧರ್ಮ ರಾಯರನ್ನು ಪ್ರಾರ್ಥಿಸೋಣ. (ಧರ್ಮರಾಯನನ್ನು ನೋಡಿ, ಕೈ ಮುಗಿದುಕೊಂಡು) ಜೀಯಾ! ನನ್ನ ಪ್ರಾರ್ಥನೆಯನ್ನು ಸಲ್ಲಿಸಬೇಕು.

ನನ್ನ ಮಗಳಾದ ಉತ್ತರೆಯನ್ನು ಮಹಾನುಭಾವನಾದ ಅರ್ಜುನನು ಪರಿಗ್ರಹಿಸಿ, ನನ್ನನ್ನು ಧನ್ಯನಾಗಿ ಮಾಡಬೇಕೆಂದು ಪ್ರಾರ್ಥನೆ.

ಧರ್ಮ—(ಸಂತೋಷದಿಂದ ಅರ್ಜುನನ ಮುಖವನ್ನು ನೋಡಿ) ತಮ್ಮಾ! ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?

ಅರ್ಜು—ಜೀಯಾ! ಇವರಪ್ರಾರ್ಥನೆ ಯುಕ್ತವಾಗಿಯೇ ಇದೆ. ಆದರೆ ಉತ್ತರೆಗೆ ನಾನು ಒಂದು ವರುಷಕಾಲ ನಾಟ್ಯವಿದ್ಯೆಯನ್ನು ಕಲಿಸುತ್ತಾ, ಮಗಳಂತೆ ಭಾವಿಸಿದ್ದೇನೆ. ಇವಳೂ ನನ್ನಲ್ಲಿ ಗುರುಭಕ್ತಿಯನ್ನಿಟ್ಟುಕೊಂಡು ವಿದ್ಯಾಭ್ಯಾಸಮಾಡಿದ್ದಾಳೆ. ಇಂತವಳನ್ನು ಪತ್ನಿಯಾಗಿ ಪರಿಗ್ರಹಿಸುವುದು ದೋಷಾವಹವಲ್ಲವೆ?

ಧರ್ಮ—ಹಾಗಾದರೆ ಇವರಪ್ರಾರ್ಥನೆಗೆ ಏನುಹೇಳೋಣ?

ಅರ್ಜು—ಈತನು ಇಷ್ಟಪಟ್ಟರೆ ಅಭಿಮನ್ಯುಕುಮಾರನಿಗೆ ಉತ್ತರೆಯನ್ನು ಕೊಟ್ಟು ಮದುವೆ ಮಾಡಬಹುದು.

ವಿರಾ—ಆರ್ಯನೇ! ನಮಗೆ ಅರ್ಜುನನಾದರೂ ಸರಿಯೆ! ಅವನ ಮಗನಾದರೂ ಸರಿಯೆ! ಅಂತು ನಿಮ್ಮ ಸಂಬಂಧ ಬೆಳೆಸಬೇಕೆಂಬುದೇ ನನ್ನ ಪ್ರಾರ್ಥನೆ. ದಯಮಾಡಿ ಈ ವೀಳಯವನ್ನು ಪರಿಗ್ರಹಿಸಬೇಕು.

ಧರ್ಮ—(ಸಂತೋಷದಿಂದ ತಾಂಬೂಲವನ್ನು ಪರಿಗ್ರಹಿಸಿ) ವಿರಾಟರಾಯನೇ! ನಿಮ್ಮ ಮಾತನ್ನು ಮನ್ನಿಸುವೆವು. ಆದರೆ ನಮ್ಮ ಸಂಕಲ್ಪವನ್ನು ಹೇಳುವೆನು, ಕೇಳು. ಶ್ರೀಕೃಷ್ಣಮೂರ್ತಿಯು ನಮಗೆ ಒಡೆಯನು. ಗುರುವು, ಬಂಧುವು, ನಮ್ಮ ಸುಖದುಃಖಗಳಿಗೆ ಆ ಸ್ವಾಮಿಯೇ ಬಾಧ್ಯನಾಗಿದ್ದಾನೆ. ಆತನ ಅನುಮತಿಯಿಲ್ಲದೆ ನಾವು ಯಾವ ಕೆಲಸವನ್ನೂ ಮಾಡಲಾರೆವು. ಆದುದರಿಂದ ಈ ವಿಷಯವನ್ನು ಆತನಿಗೆ ತಿಳಿಸಿ, ಆ ಮಹಾತ್ಮನನ್ನು ಬರಮಾಡಿಕೊಂಡು, ವಿವಾಹಮಹೋತ್ಸವಕ್ಕೆ ಯತ್ನಿಸಬಹುದು.

ವಿರಾ—ಮಹಾತ್ಮನೇ! ತಮ್ಮ ಅಭಿಪ್ರಾಯವು ನಮಗೂ

ಸಮ್ಮತವಾದುದೇ. ನಾವೂ ಸಹ ಆ ಮಹಾತ್ಮನ ಭಕ್ತಕೋಟಿಯಲ್ಲಿಯೇ ಸೇರಿದವರು. ಆತನ ದರ್ಶನಮಾಡಿ ಮನಃಪೂರ್ವಕ ವಂದಿಸಿ, ಆತನನ್ನು ನಾನೂ ಪ್ರಾರ್ಥಿಸಿಕೊಳ್ಳುವೆನು. ತಮ್ಮ ಅನುಗ್ರಹದಿಂದ ಆತನು ಇಲ್ಲಿಗೆ ಬಂದರೆ ಈ ನೆವದಿಂದಲಾದರೂ ಆತನ ಪಾದಸೇವೆ ಮಾಡಿ, ಧನ್ಯನಾಗುವೆನು.

ಧರ್ಮರಾಯನು ಆ ರಾಯನ ಮಾತನ್ನು ಕೇಳಿ, ಶ್ರೀಕೃಷ್ಣ ಸ್ವಾಮಿಯಲ್ಲಿ ಆತನಿಗೆ ಇರುವ ದೃಢಭಕ್ತಿಗೆ ಸಂತೋಷಿಸಿದನು. ಕೂಡಲೇ ಬಗೆಬಗೆಯಾದ ವಸ್ತ್ರಾಭರಣಗಳನ್ನು ತರಿಸಿ, ಲಗ್ನಪತ್ರಿಕೆಯನ್ನು ಬರಿಸಿ, ಬಹುವೇಗವಾಗಿ ಹೋಗತಕ್ಕ ದೂತರ ಕೈಗೆ ಕೊಟ್ಟು, ಶ್ರೀಕೃಷ್ಣನ ಸನ್ನಿಧಿಗೆ ಕಳುಹಿದರು. ಆ ದೂತರು ಸಾಧ್ಯವಾದಷ್ಟು ಬೇಗಬೇಗ ಪ್ರಯಾಣಮಾಡಿ, ದ್ವಾರಕಾ ಪಟ್ಟಣಕ್ಕೆ ಹೋಗಿ ಸೇರಿದರು. ಶ್ರೀಕೃಷ್ಣಸ್ವಾಮಿಯ ಅರಮನೆಯ ಬಾಗಿಲಲ್ಲಿ ನಿಂತು, ಒಳಕ್ಕೆ ಹೇಳಿ ಕಳುಹಿದರು. ಸ್ವಾಮಿಯು ದ್ವಾರಪಾಲಕರಿಂದ ಈ ದೂತರ ಆಗಮನವನ್ನು ಕೇಳಿ, ಸಂತೋಷದಿಂದ ಅವರನ್ನು ಒಳಕ್ಕೆ ಕರೆದುತರಬೇಕೆಂದು ಅಪ್ಪಣೆ ಕೊಟ್ಟನು. ಆ ದೂತರು ಶ್ರೀಕೃಷ್ಣನ ಓಲಗಶಾಲಿಗೆ ಬಂದು, ಸ್ವಾಮಿಯ ದರ್ಶನಮಾಡಿ, ಆತನ ಪಾದಗಳಿಗೆ ನಮಸ್ಕಾರ ಮಾಡಿ, ಧರ್ಮರಾಯನು ಕಳುಹಿದ ವಿಜ್ಞಾಪನಪತ್ರವನ್ನೂ, ಆತನು ಕಳುಹಿದ ವಸ್ತ್ರಾಭರಣಗಳನ್ನೂ, ಆತನ ಸನ್ನಿಧಿಯಲ್ಲಿ ಒಪ್ಪಿಸಿದರು. ಶ್ರೀಕೃಷ್ಣನು ನಸುನಗುತ್ತಾ ಅವರನ್ನು ಮನ್ನಿಸಿ, ಅವರು ತಂದ ವಸ್ತುಗಳನ್ನೆಲ್ಲಾ ಪರಿಗ್ರಹಿಸಿ, ಪಾಂಡವರು ಮತ್ತು ದ್ರೌಪದಿಯ ಕ್ಷೇಮ ಸಮಾಚಾರಗಳನ್ನು ವಿಚಾರಿಸಿದನು. ಅದಕ್ಕವರು ಕೈಮುಗಿದು ಕೊಂಡು, ಇಂತೆಂದರು:

ದೂತರು——"ಮಹಾಸ್ವಾಮಿ! ದ್ರೌಪದೀಸಹಿತರಾದ ಪಾಂಡವರೈವರೂ ಕ್ಷೇಮದಿಂದ ಇದ್ದಾರೆ. ಭಕ್ತವ್ಯಸನಿಗಳಾದ ತಮ್ಮಲ್ಲಿ

ರುವಾಗ ಪಾಂಡವರು ಜೀವಿಸಿರುವುದೇನು ಅತಿಶಯವೆ ? ಜೀಯಾ ! ಲಾಲಿಸು. ಈ ಉಡುಗೊರೆಗಳು ತಮ್ಮ ಪಾದಗಳಿಗೆ–ಇವು ರಾಣಿಯ ರಿಗೆ–ಇವು ಬಲರಾಮದೇವರಿಗೆ–ಇವು ತೀರ್ಥರೂಪರಾದ ವಸುದೇವ ದೇವಕಿಯರಿಗೆ–ಇವು ಉಗ್ರಸೇನರಾಯರಿಗೆ–ಇವು ಉದ್ಧವಕೃತವರ್ಮ ಸಾತ್ಯಕಿಗಳಿಗೆ–ಇವು ಸಾಂಬಪ್ರದ್ಯುಮ್ನಾನಿರುದ್ಧರಿಗೆ, ಎಂದು ಬೇರೆ ಬೇರೆಯಾಗಿ ತೆಗೆದು ಒಪ್ಪಿಸಿದರು. ಆಗ ಶ್ರೀಕೃಷ್ಣನು ಬಹು ಸಂ ತೋಷದಿಂದ ಪಾಂಡವರು ಕಳುಹಿದ ಉಡುಗೊರೆಗಳನ್ನೆಲ್ಲಾ ತೆಗೆದು ಕೊಂಡು ಅವರವರಿಗೆ ಕೊಡಿಸಿ, ಸಮೀಪದಲ್ಲಿದ್ದ ಪತ್ರವಾಚಕನನ್ನು ನೋಡಿ, ದೂತರು ತಂದುಕೊಟ್ಟ ಪತ್ರಿಕೆಯನ್ನು ಅವರ ಕೈಗೆ ಕೊಟ್ಟ ನು. ಅವರು ಅದನ್ನು ಓದಿದರು.

ಸ್ವಸ್ತಿ—ಘೋರದಾನವಗಜಕಂಠೀರವಾ - ಜನ್ಮದುರಿತ ಭಯ ಸಂಹರಣಾ–ಚಕ್ರಕಾಂತಿಗಳಿಂದ ಸೂರ್ಯಕಿರಣಗಳನ್ನು ತಿರಸ್ಕರಿಸುವ ಸ್ವಾಮಿಯೇ-ಶ್ರೀಕೃಷ್ಣಾ-ದೇವಕೀನಂದನಾ-ಭಕ್ತರಾದ ಪಾಂಡುಪು ತ್ರರ ವಿಜ್ಞಾಪನೆಯನ್ನು ಲಾಲಿಸಬೇಕೆಂದು ಬೇಡುತ್ತೇವೆ. ನಿಮ್ಮ ಕರುಣಾಕಟಾಕ್ಷವೆಂಬ ಸಂಜೀವಿನಿಯಿಂದ ನಾವು ಜೀವಸಹಿತರಾಗಿ ಕ್ಷೇಮದಿಂದ ಇದ್ದೇವೆ. ತಮ್ಮ ಅನುಗ್ರಹದಿಂದ ಹನ್ನೆರಡು ವರುಷ ಗಳ ವನವಾಸವನ್ನೂ, ಒಂದು ವರುಷದ ಅಜ್ಞಾತವಾಸವನ್ನೂ, ಪೂರ ಯಿಸಿದೆವು. ಪ್ರತಿಜ್ಞೆಯಂತೆ ಅಜ್ಞಾತವಾಸದ ಅವಧಿಯನ್ನು ಮತ್ಸ್ಯ ನಗರಿಯಲ್ಲಿ ಕಳೆದೆವು. ಈ ಮಧ್ಯದಲ್ಲಿಯೇ ನಮ್ಮನ್ನು ಕಂಡುಹಿಡಿಯ ಬೇಕೆಂದು ಕೌರವರು ಸೇನಾಸಮೇತರಾಗಿ ಬಂದರು. ವಿರಾಟರಾ ಯನ ಗೋಗಣವನ್ನೆಲ್ಲಾ ಸೆರೆಹಿಡಿದರು. ನಮಗೂ ಆ ಕೌರವರಿಗೂ ಘೋರಯುದ್ಧ ನಡೆಯಿತು. ಅದರಲ್ಲಿ ತಮ್ಮ ದಯೆಯಿಂದ ಕೌರವ ಸೇನೆಯನ್ನು ಹಿಂದೋಡಿಸಿ ಗೋಗಣವನ್ನು ಬರಮಾಡಿಕೊಟ್ಟೆವು. ವಿರಾಟರಾಯನು ನಮ್ಮನ್ನು ಪಾಂಡವರೆಂದು ತಿಳಿದುಕೊಂಡು ಮನ್ನಿ

ಸಿದನು. ಪ್ರಕೃತ ಈತನು ತನ್ನ ಮಗಳಾದ ಉತ್ತರೆಯನ್ನು ಅರ್ಜುನನ ಪುತ್ರನಾದ ಅಭಿಮನ್ಯುಕುಮಾರನಿಗೆ ಕೊಟ್ಟು ಮದುವೇ ಮಾಡಬೇಕೆಂದು ಅಪೇಕ್ಷಿಸಿದ್ದಾನೆ. ಈ ವಿವಾಹಮಹೋತ್ಸವಕ್ಕೆ ತಾವು ದಯಮಾಡಿಸಬೇಕು. ತಮ್ಮ ಪಾದದರ್ಶನಾಪೇಕ್ಷೆಯನ್ನೇ ಯಾವಾಗಲೂ ಚಿಂತಿಸುತ್ತಿದ್ದೇವೆ. ಈ ಮದುವೆಯ ನೆವದಿಂದಲಾದರೂ ತಾವು ದಯಮಾಡಿ ಬಂದು ತಮ್ಮ ಪಾದದರ್ಶನಲಾಭವನ್ನು ಕರುಣಿಸಿ ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತೇನೆ.

ನಮಗೆ ವನವಾಸದಿಂದ ಉಂಟಾದ ಕ್ಲೇಶದ ಸಂತಾಪವನ್ನು ಪರಿಹರಿಸಿ ತಮ್ಮ ಉಚಿತವಚನಗಳೆಂಬ ಶೀತವೃಷ್ಟಿಯನ್ನು ಸುರಿಸಿ ನಮ್ಮ ಉತ್ಸಾಹವೆಂಬ ಸಸಿಯನ್ನು ಬೆಳೆಯಿಸಿ ಸಲಹಬೇಕು. ಕರುಣಾಳುವಾದ ದೇವನೇ! ನೀವು ದಯಮಾಡಿ ಬಂದು ಭಕ್ತರನ್ನು ಕಾಪಾಡಬೇಕು. ಎಳಗಂದಿಯು ಕರುವನ್ನು ತಾನೇ ಹುಡುಕಿಕೊಂಡು ಬರುವ ಹಾಗೆ, ತನ್ನ ಚರಣಸೇವಕರೇ ತನ್ನ ಕುಟುಂಬವೆಂಬ ಬಿರುದನ್ನು ಮೆರೆಯಿಸುವುದಕ್ಕಾಗಿ ನನ್ನ ಬಿನ್ನಹವನ್ನು ಲಾಲಿಸಿ, ಬಂದು ದರ್ಶನ ಕೊಡಬೇಕೆಂದು ಬೇಡುವೆನು. ಇದೇ ನಮಗೆ ಮಹಾಪ್ರಸಾದವೆಂದು ತಿಳಿದಿರುವೆನು. ಕ್ಷಮಿಸಬೇಕು. ಕಿಂಕರನಬಿನ್ನಹ. **ಯುಧಿಷ್ಠಿರ.**

ಹೀಗೆ ಓದಿದ ಪತ್ರಾರ್ಥವನ್ನು ಕೇಳಿ ಶ್ರೀಕೃಷ್ಣನು ಆನಂದ ಭರಿತನಾದನು. ಆತನ ಮೈಯೆಲ್ಲಾ ಪುಳಕಿತವಾಯಿತು. ಭಕ್ತರ ಮೇಲೆ ಸ್ವಾಮಿಗೆ ಎಷ್ಟರಪ್ರೀತಿ ಇರುವುದೋ! "ದೂತರೇ! ಇಂದಿಗೆ ಧರ್ಮರಾಯಾದಿಗಳ ಏಳಿಗೆಯ ಸುದ್ದಿಯನ್ನು ಕೇಳಿದೆವಲ್ಲವೆ! ಆ ಕೌರವೇಂದ್ರನ ಕಪಟೋಪಾಯಗಳ ವರ್ತಮಾನವೂ ಗೊತ್ತಾಯಿತು." ಎಂದು ಹೇಳಿ ಯದುವೀರರನ್ನು ನೋಡಿ, ಇಂತೆಂದನು. ಇಂದಿಗೆ ನಮ್ಮ ಚಿಂತೆಯು ದೂರವಾಯಿತು. ಪಾಪ! ಪಾಂಡವರು ಅಜ್ಞಾತವಾಸದ ಕಾಲದಲ್ಲಿ ಎಷ್ಟು ಸಂಕಟಪಟ್ಟರೋ! ಅಂತು ಕಷ್ಟ

ಕಾಲವು ಕಳೆಯಿತು. ನಮ್ಮ ಪುಣ್ಯದ ಗಿಡವು ಈಗ ಫಲಿಸಿತು. ನಮ್ಮ ಅತ್ತೆಯಾದ ಕುಂತೀದೇವಿಯು ಸಂಕಟಪಟ್ಟರೆ ನಾವು ನೋಡಿ, ಸೈರಿಸಿಕೊಂಡು ಇರಬಹುದೆ ? ಇದೇ ಚಿಂತೆಯಿಂದ ನಮ್ಮ ತಂದೆಯು ಯಾವಾಗಲೂ ಕೊರಗುತ್ತಿರುವನು. ಗ್ರಹಚಾರದೋಷದಿಂದ ಪಾಂಡವರು ಕಾಡಿನಲ್ಲಿ ಬಹುಕಾಲ ನವೆದಿದ್ದಾರೆ. ಯಾದವರಾದ ನಾವು ರಾಜ್ಯದ ಸುಖವನ್ನು ಅನುಭವಿಸಿಕೊಂಡಿದ್ದೇವೆ. ಇದುವರೆಗೆ ಕಳೆದ ಕಾಲವೇನೋ ಕಳೆದೇಹೋಯಿತು. ಕಳೆದುಹೋದುದಕ್ಕೆ ಅಳಲಿ ಫಲವೇನು ? ಪಾಂಡವರ ಸಂತೋಷವೇ ನಮ್ಮ ಸಂತೋಷ. ಅವರ ದುಃಖವೇ ನಮ್ಮ ದುಃಖ. ಅವರ ಅಭ್ಯುದಯವೇ ನಮ್ಮ ಅಭ್ಯುದಯ. ಅನುಕೂಲ ಕಾಲಕ್ಕೆ ಶುಭದ ಮೇಲೆ ಶುಭವು ಬರುತ್ತಿರುವುದು. ಕುಂತೀ ಪುತ್ರರ ಅಭಿವೃದ್ಧಿಗೆ ಇದು ಮೊದಲನೆಯ ಮಂಗಳ ಸೂಚನೆಯು. ಇದರ ಮೇಲೆ ತಂಗಿಯ ಮಗನ ಮದುವೆಯು ಮತ್ತೂ ಹೆಚ್ಚಿನದು. ಯಾದವರೆಲ್ಲರೂ ಮತ್ಸ್ಯನಗರಕ್ಕೆ ಪ್ರಯಾಣಮಾಡಲಿ. ಇದಕ್ಕೆ ತಕ್ಕ ಸನ್ನಾಹಗಳನ್ನು ಬೇಗ ಮಾಡಿಸಿರಿ.

ಈ ಪ್ರಕಾರವಾಗಿ ಶ್ರೀಕೃಷ್ಣನು ಅಪ್ಪಣೆಕೊಟ್ಟು, ಬಂದಿದ್ದ ಚಾರರಿಗೆ ಉಡುಗೊರೆಗಳನ್ನೂ, ಗಂಧಪುಷ್ಪತಾಂಬೂಲಗಳನ್ನೂ, ಕೊಟ್ಟು, ಧರ್ಮರಾಯನ ಹೆಸರಿಗೆ ಒಂದು ರಾಯಸವನ್ನು ಬರೆಯಿಸಿಕೊಟ್ಟು ಕಳುಹಿದನು. ಆ ದೂತರು ಹಿಂದಿರುಗಿ ಬಂದು, ಧರ್ಮರಾಯನನ್ನು ಕಂಡು, ಯಾದವರ ಅರಸನಾದ ಶ್ರೀಕೃಷ್ಣರಾಯನು ಬಿಜಯಮಾಡುತ್ತಿರುವನೆಂದು ತಿಳಿಸಿದರು.

ಬಳಿಕ ಪಾಂಡವರು ಸುಮುಹೂರ್ತದಲ್ಲಿ ವಿರಾಟನ ರಾಜಧಾನಿಯಾದ ಮತ್ಸ್ಯನಗರವನ್ನು ಬಿಟ್ಟು, ಉತ್ತರದಲ್ಲಿ ಸಮೀಪದಲ್ಲಿದ್ದ ಉಪಪ್ಲಾವ್ಯವೆಂಬ ಪಟ್ಟಣಕ್ಕೆ ಬಂದು, ಅಲ್ಲಿ ಬಿಡಾರಮಾಡಿಕೊಂಡಿದ್ದರು. ಶ್ರೀಕೃಷ್ಣನ ಆಗಮನದ ಸಂತೋಷಕ್ಕಾಗಿ ಆ ಪಟ್ಟಣವನ್ನು

ದಿವ್ಯವಾಗಿ ಅಲಂಕರಿಸಿದರು. ರಾಜರಿಗೆಲ್ಲಾ ಲಗ್ನಪತ್ರಿಕೆಗಳನ್ನು ಬರೆಯಿಸಿ ಕಳುಹಿದರು. ಅವುಗಳ ಜತೆಯಲ್ಲಿ ಅವರವರ ಗೌರವಕ್ಕೆ ತಕ್ಕಹಾಗೆ ಉಡುಗೊರೆಗಳೂ ಕಳುಹಲ್ಪಟ್ಟುವು. ದ್ರುಪದರಾಯನು ಮೂರುಲಕ್ಷ ಸೈನ್ಯದೊಂದಿಗೆ ಹೊರಟುಬಂದು ಅಳಿಯಂದಿರನ್ನು ಕಂಡು ಸಂತೋಷದಿಂದ ಹರಸಿದನು. ಈತನ ಜತೆಯಲ್ಲಿ ನೀಲನು, ಯುಧಾಮನ್ಯುವು, ದೃಷ್ಟದ್ಯುಮ್ನನು, ಶಿಖಂಡಿ, ಇವರೆಲ್ಲರೂ ಬಂದರು. ಇವರಲ್ಲದೆ ಪಾಂಡವರ ಮಿತ್ರರಾದ ರಾಜರುಗಳೆಲ್ಲರೂ ಬೇರೆಬೇರೆ ದೇಶಗಳಿಂದ ಉಪಪ್ಲಾವ್ಯಕ್ಕೆ ಬಂದು ಸೇರುತ್ತಿದ್ದರು. ಪಾಂಡವರು ಅವರನ್ನೆಲ್ಲಾ ಸಂತೋಷದಿಂದ ಮನ್ನಿಸಿ, ಅವರವರಿಗೆ ತಕ್ಕ ಸ್ಥಳಗಳನ್ನು ಗೊತ್ತುಮಾಡಿ ಇಳಿಸಿದರು. ಅಕ್ಷೌಹಿಣಿಯ ಬಲವೆಲ್ಲವೂ ಸೇರಿತು. ಕೃಷ್ಣಸ್ವಾಮಿಯೂ ಬರುತ್ತಿರುವನೆಂದು ಕೇಳಿ, ಜನರೆಲ್ಲರೂ ಗುಂಪುಗುಂಪಾಗಿ ತಮ್ಮತಮ್ಮ ಮನೆಯ ಬಾಗಿಲುಗಳನ್ನು ಶೃಂಗಾರವಾಗಿ ಅಲಂಕರಿಸುತ್ತಿದ್ದರು. ಬೀದಿಗಳಲ್ಲಿ ಎಲ್ಲಿನೋಡಿದರೂ ಚಿತ್ರವಿಚಿತ್ರವಾದ ರಂಗವಲ್ಲಿಗಳು ಚಿತ್ರಿಸಲ್ಪಟ್ಟುವು. ಲೋವೆಗಳಿಗೆಲ್ಲಾ ನವರತ್ನಗಳೆಂಬ ಪುಷ್ಪಗಳಿಂದಲೇ ಶೃಂಗರಿಸಿದರು. ಕಸ್ತೂರಿ, ಸಾದು ಇವುಗಳಿಂದ ನೆಲವನ್ನು ಸಾರಿಸಿದರು. ಕುಂಕುಮ ಕೇಸರದ ರಸದಿಂದ ಗೋಡೆಗಳ ಬುಡದಲ್ಲಿ ಕಾರಣೆಯ ಗೆರೆಗಳನ್ನು ಬರೆದರು. ಗೋಡೆಗಳಿಗೆಲ್ಲಾ ಚಿತ್ರದ ಪಟಗಳನ್ನು ಕಟ್ಟಿ ಅಲಂಕರಿಸಿದರು. ಬೀದಿಗಳಿಗೆಲ್ಲಾ ಸಾಲುಸಾಲಾಗಿ ಎಳೆಯ ಮಾವಿನ ಚಿಗುರುಗಳಿಂದ ತೋರಣಗಳನ್ನು ಕಟ್ಟಿಸಿದರು. ಕುಳಿತುಕೊಳ್ಳಲಿಕ್ಕೆ ಅಲ್ಲಲ್ಲಿ ಹೊಂಜಗುಲಿಗಳನ್ನು ಕಟ್ಟಿದ್ದರು. ಮನೆಗಳ ನೆಲಕ್ಕೆಲ್ಲಾ ಪನ್ನೀರು ಚೆಲ್ಲಿಸಿ, ಸುಗಂಧಮಯವಾಗಿ ಮಾಡಿದ್ದರು. ಅಲ್ಲಲ್ಲಿ ಚಾವುಟಾಗಳನ್ನೂ ಮೇಲುಕಟ್ಟುಗಳನ್ನೂ ಕಟ್ಟಿಸಿದರು. ಸುವಾಸಿನಿಯರು ಚೆನ್ನಾಗಿ ಅಲಂಕರಿಸಿಕೊಂಡು, ತಮ್ಮ ಕೈಗಳಲ್ಲಿ ಕಲಶಗಳನ್ನೂ, ಕನ್ನಡಿಗಳನ್ನೂ

ಹಿಡಿದುಕೊಂಡು, ಶ್ರೀಕೃಷ್ಣನು ಬರುವ ಮಾರ್ಗದಲ್ಲಿ ಎದುರಾಗಿ ಹೊರಟರು. ಯದುಕುಲಸ್ವಾಮಿಯನ್ನು ಎದುರುಗೊಳ್ಳುವುದಕ್ಕೆ ಚತುರಂಗ ಸೈನ್ಯವೆಲ್ಲಾ ಹೊರಟಿತು. ವಾದ್ಯಗಳ ಶಬ್ದವು ಸಮುದ್ರ ಘೋಷದಂತೆ ಮೊರೆಯುತ್ತಿದ್ದಿತು. ಧ್ವಜಛತ್ರಚಾಮರಾದಿ ಬಿರುದು ಗಳು ಗಗನಮಂಡಲವನ್ನು ಮುಚ್ಚಿದುವು. ಸಕಲಸೈನ್ಯವೂ ಒತ್ತಾಗಿ ನಡೆಯಿತು.

ದ್ರುಪದವಿರಾಟಪಾಂಡವರು ಅತಿಶಯಕಾಂತಿಯಿಂದ ಮೆರೆ ಯುವ ಗರುಡಧ್ವಜವನ್ನು ದೂರದಲ್ಲಿಯೇ ಕಂಡು, ತಮ್ಮ ತಮ್ಮ ಪಾಲಕಿಗಳಿಂದ ಇಳಿದು, ಕಾಲುನಡೆಯಿಂದಲೇ ನಡೆದುಹೋಗಿ, ಸ್ವಾ ಮಿಗೆ ನಮಸ್ಕರಿಸಿದರು. ರಾಜರೆಲ್ಲರೂ ವಾಹನಗಳಿಂದ ಇಳಿದು ಬರುತ್ತಿರಲು ಶ್ರೀಕೃಷ್ಣನು ತಾನು ಹತ್ತಿದ್ದ ಆನೆಯಿಂದ ಕೆಳಕ್ಕಿಳಿದು ನಡೆದುಬಂದನು. ವೇದಗಳು ಹೊಗಳಿಹೊಗಳಿ ಬೇಸತ್ತರೂ, ಮುನಿಗಳು ಬಹು ಕ್ಲೇಶದಿಂದ ತಪಸ್ಸುಮಾಡಿದರೂ, ಮೈದೋರದ ಪರಮಾತ್ಮನು ಭಕ್ತಪರಾಧೀನನಾಗಿ ಪಾಂಡವರ ವಶವರ್ತಿಯಾದನು.

“ತಾನು ಹೆತ್ತಮಕ್ಕಳುಹಾಗಿರಲಿ; ತನ್ನ ಭಕ್ತರನ್ನು ಕರೆ; ನೆನೆದ ವರಿಗೆ ತನ್ನನ್ನು ತೆತ್ತು ಬದುಕುವೆನು” ಎಂಬುದೇ ಆ ಪರಮಾತ್ಮನ ಸಂಕಲ್ಪವು. ದೇವದೇವೋತ್ತಮನಾದ ಶ್ರೀಕೃಷ್ಣನು ರಾಜಮಾರ್ಗ ದಲ್ಲಿ ಬರುತ್ತಿರುವಾಗ ಸೈನ್ಯದ ಪಾದಘಾತದಿಂದ ಎದ್ದ ಧೂಳಿಯು ಆಕಾಶವನ್ನೆಲ್ಲಾ ಮುಚ್ಚಿಬಿಟ್ಟಿತು. ಆಗ ಶ್ರೀಕೃಷ್ಣನ ಮಹಿಮೆಗಳ ನ್ನೆಲ್ಲಾ ಭಟ್ಟರಾಜರು ಹೊಗಳುತ್ತಿದ್ದರು. ಸ್ವಾಮಿಯ ಮುಖವು ಥುಳಿದ ಕಿರುಬೆವರಿನಿಂದಲೂ, ಮನೋಹರವಾದ ಕಪೋಲದಿಂದಲೂ, ಕರುಣಾರಸವನ್ನು ಸೂಸುವ ಮುಗುಳು ನಗೆಯಿಂದಲೂ ರಮಣೀಯ ವಾಗಿದ್ದಿತು. ಎಲ್ಲರೂ ಕಣ್ಣಿನ ಬರತೀರುವಂತೆ ಶ್ರೀಕೃಷ್ಣನ ಮುಖಾರ ವಿಂದವನ್ನು ನೋಡಿ ಆನಂದ ಬಾಷ್ಪಗಳನ್ನು ಸುರಿಸುತ್ತಾ, ಹಣೆಯ

ಮೇಲೆ ಕೈಗಳನ್ನಿಟ್ಟು ವಂದಿಸುತ್ತಿದ್ದರು. ಆನೆಗಳು ಪ್ರದಕ್ಷಿಣವಾಗಿ ಸುತ್ತುತ್ತಿದ್ದುವು. ಕುದುರೆಗಳು ಹೇಷಾರವವನ್ನು ಮಾಡುತ್ತಿದ್ದುವು. ಜನರು ಪುಳುಕಿತಾಂಗರಾಗಿ ಮೈಮರೆತು, ಹರುಷ ಸಮುದ್ರದಲ್ಲಿ ಓಲಾಡುತ್ತಿದ್ದರು. ಸ್ತ್ರೀಯರು ಶ್ರೀಕೃಷ್ಣಮೂರ್ತಿಯ ದಿವ್ಯಮಂಗಳ ವಿಗ್ರಹವನ್ನು ತಮ್ಮ ಕಣ್ಣುಗಳಿಂದ ಎಷ್ಟು ನೋಡಿದರೂ ತೃಪ್ತರಾಗದೆ, ರೆಪ್ಪೆಗಳನ್ನು ತೆರೆದುಕೊಂಡೇ ಇದ್ದುದರಿಂದ ಮೀನಾಕ್ಷಿಯರೆಂಬ ಹೆಸರು ಅವರಿಗೆ ಅನ್ವರ್ಥವಾಯಿತು. ಪುರುಷಶ್ರೇಷ್ಠನಾದ ಮನ್ಮಥನನ್ನೇ ಪಡೆದ ತಂದೆಯಾದ ಶ್ರೀಕೃಷ್ಣನಿಗೆ ಇಂತಹ ರೂಪವು ಏನು ಅತಿಶಯವೆಂದು ಬಲ್ಲವರು ಹೊಗಳುತ್ತಿದ್ದರು.

ಆಗ ಧರ್ಮರಾಯನು ತನ್ನ ಎರಡು ಕೈಸೇರೆಗಳಲ್ಲಿಯೂ ರತ್ನಗಳನ್ನು ತುಂಬಿ ತಂದು, ಸ್ವಾಮಿಯ ಪಾದಾರವಿಂದದಲ್ಲಿ ಅರ್ಪಿಸಿ ಭಕ್ತಿಯಿಂದ ನಮಸ್ಕರಿಸಿದನು. ಭೀಮಾರ್ಜುನ ನಕುಲಸಹದೇವರೂ, ದ್ರುಪದ ವಿರಾಟ ಮೊದಲಾದ ರಾಜರೂ ಬಂದು ಶ್ರೀಕೃಷ್ಣನಿಗೆ ವಂದಿಸಿದರು. ಕೃಷ್ಣನು ಧರ್ಮರಾಯನ ತಲೆಯನ್ನು ಹಿಡಿದು ಮೇಲಕ್ಕೆತ್ತಿ, ಅಪ್ಪಿಕೊಂಡನು. ಉಳಿದ ಪಾಂಡವರಿಗೂ ಆಲಿಂಗನ ಸುಖವನ್ನಿತ್ತು, ದ್ರುಪದ ವಿರಾಟರನ್ನು ಮನ್ನಿಸಿದನು. ದ್ರೌಪದಿಯು ಸ್ತ್ರೀಯರಗುಂಪಿನೊಂದಿಗೆ ಬಂದು ಶ್ರೀಕೃಷ್ಣನನ್ನು ಕಂಡು ವಂದಿಸಿ ಕಾಣಿಕೆ ಕೊಟ್ಟಳು. ಶ್ರೀಕೃಷ್ಣನು ಅವುಗಳನ್ನು ಪರಿಗ್ರಹಿಸಿ, ಆಕೆಯನ್ನು ಮನ್ನಿಸಿ, ತನ್ನ ರಾಣೀವಾಸವಿದ್ದಲ್ಲಿಗೆ ಕಳುಹಿದನು. ದ್ರೌಪದಿಯು ರುಕ್ಮಿಣಿ, ಸತ್ಯಭಾಮೆ ಮೊದಲಾದ ಶ್ರೀಕೃಷ್ಣಪತ್ನಿಯರನ್ನು ಕಂಡು ಕಾಣಿಕೆಗಳನ್ನು ಒಪ್ಪಿಸಿ, ಅವರವರ ಮರ್ಯಾದೆಗೆ ತಕ್ಕಂತೆ ವಂದಿಸಿದಳು. ಅವರೂ ಆಕೆಯ ಕಾಣಿಕೆಗಳನ್ನು ಪರಿಗ್ರಹಿಸಿ ಪ್ರತಿವಂದನೆಗಳಿಂದ ಸತ್ಕರಿಸಿದರು. ಬಳಿಕ ಧರ್ಮರಾಯನು ಶ್ರೀಕೃಷ್ಣನ ಜತೆಯಲ್ಲಿ ಬಂದಿದ್ದ ದೇವಕೀ ವಸುದೇವರನ್ನೂ, ಬಲರಾಮನನ್ನೂ, ಉಗ್ರಸೇನ

ನನ್ನೂ ಕಂಡು ವಂದಿಸಿದನು. ಸುಭದ್ರೆಯು ಬಂದು ತನ್ನ ಭಾವಂದಿರಿಗೆ ವಂದಿಸಿದಳು. ಅಭಿಮನ್ಯುಕುಮಾರನು ಬಂದು ಪಾಂಡವರೈವರಿಗೂ, ತಾಯಿಯಾದ ದ್ರೌಪದಿಗೂ ನಮಸ್ಕಾರಮಾಡಿದನು. ವಸುದೇವನು ಅಳಿಯನಾದ ಧರ್ಮರಾಯನನ್ನು ನೋಡಿ, ಕೈದಣಿಯುವಂತೆ ಆತನ ಮೈತಡವಿ ಇಂತೆಂದನು.

ವಸು—ಮಗನೇ! ವಿಧಿಯು ನಿಮ್ಮನ್ನು ಕಾಡಿಗೆ ಅಟ್ಟಿ ಬಂಧಿಸಿತಲ್ಲವೇ? ಗ್ರಹಚಾರ ಫಲವಿದು. ಸಾಕು ಬಿಡು. ದೈವವನ್ನು ನಿಂದಿಸಿ ಫಲವಿಲ್ಲ. ದ್ರೌಪದಿಯ ಮುತ್ತೈದೆ ತನದ ಭಾಗ್ಯದಿಂದ ಸಕಲಾಪತ್ತುಗಳನ್ನೂ ಕಳೆದುಕೊಂಡು, ಪುನಃ ಈ ಭೂಲೋಕಕ್ಕೆ ಬಂದ ಹಾಗಾಯಿತು. ನಮ್ಮ ಅದೃಷ್ಟ ವಿಶೇಷದಿಂದ ನಿಮ್ಮನ್ನು ಕಂಡೆವು.

ಧರ್ಮ—ಮಾವೈಯ್ಯಾ! ರಾಣಿಯ ಐದೆತನಕ್ಕೂ, ನಮ್ಮೈವರ ಆಯುಷ್ಯಕ್ಕೂ, ರಾಜ್ಯೈಶ್ವರ್ಯಾಭಿವೃದ್ಧಿಗೂ ನಿಮ್ಮ ಮಗನಾದ ಶ್ರೀಕೃಷ್ಣನೇ ನಮಗೆ ಮೂಲಕಾರಣನು. ಈತನ ಅನುಗ್ರಹವು ನಮ್ಮ ಮೇಲೆ ಸಂಪೂರ್ಣವಾಗಿರುವುದರಿಂದ ದೇವತೆಗಳು ಕೂಡ ನಮಗೆ ಸಮಾನರಲ್ಲವು. ಮಿಕ್ಕ ಮನುಷ್ಯರು ನಮಗೆ ಗಣ್ಯವೆ?

ವಸು—ಧರ್ಮಾ! ನಿನ್ನ ಮಾತು ನಿಜ. ಶ್ರೀಕೃಷ್ಣನು ಯಾವಾಗನೋಡಿದರೂ "ನನಗೆ ತಂದೆಯೂ ಬೇಡ. ತಾಯಿಯೂ ಬೇಡ. ಹೆಂಡತಿಯರನ್ನೂ ಒಲ್ಲೆನು. ನನ್ನ ಭಕ್ತರಿಗೇನೇ ನನ್ನ ಮನಸ್ಸನ್ನೆಲ್ಲಾ ಒಪ್ಪಿಸಿರುವೆನು" ಎಂದು ಹೇಳುತ್ತಿರುವನು. ಅವನು ತನ್ನವರ ಮನಸ್ಸು ನೊಂದರೆ ತಾನೇ ನೊಂದೆನೆನ್ನುವನು. ತನ್ನನ್ನು ನಂಬಿದ ಭಕ್ತರ ಸುಖವೇ ತನ್ನ ಸುಖವೆಂಬುದೇ ಶ್ರೀಕೃಷ್ಣನ ಅಭಿಮತವು. ಅವನು ರಾಣಿಯರನ್ನೂ ಗಣಿಸನು. ಮಕ್ಕಳನ್ನೂ ಲಕ್ಷ್ಯಮಾಡನು. ದೇಶಕೋಶಸಂಪದಗಳೂ ಅವನಿಗೆ ಬೇಡ. ತನ್ನ ಭಕ್ತರಮುಂದೆ

ಸಕಲೈಶ್ವರ್ಯಗಳನ್ನೂ ಹುಲ್ಲುಕಡ್ಡಿಗೆ ಸಮಾನವೆಂದು ತಿಳಿದಿರುವನು. ನೀನೇಗತಿಯೆಂದು ತನ್ನನ್ನು ನಂಬಿದವರಿಗೆ ವಶನಾಗಿರುವನು. ಧರ್ಮಜನೇ ಕೇಳು—ನನ್ನ ಮಗನ ನಡತೆಯೇ ಬೇರೆ. ಅದು ಇತರಮನುಷ್ಯರ ನಡತೆಯಂತೆ ಅಲ್ಲ. ಅದು ಹಾಗಿರಲಿ.

ನೀವೇನು ನಮಗೆ ಅನ್ಯರೇ! ನಿಮಗಾಗಿ ನಾವು ಕೊರಗುವುದು ಸಹಜ. ಇದರಲ್ಲಿ ವಿಶೇಷವೇನೂ ಇಲ್ಲ. ಆದರೆ ಈ ಕೃಷ್ಣನು ತನ್ನ ಶತ್ರುಗಳಿಗೆ ಕೂಡ ತನ್ನನ್ನು ತೆರುವನು. ತನ್ನನ್ನು ಕೊಲ್ಲಬೇಕೆಂದು ಬರುವ ಹಗೆಯನ್ನು ಕೂಡ ಪ್ರೀತಿಸುವನು. ನಮ್ಮ ಕೃಷ್ಣಯ್ಯನಿಗೆ ಇವರು ತನ್ನವರು, ಇವರು ಅನ್ಯರು ಎಂಬ ಭೇದವೇ ಇಲ್ಲ. ಪರರ ಗೋಸ್ಕರವೇ ತಾನು ಬದುಕುತ್ತಿರುವೆನೆಂಬುದೇ ಇವನ ಬಿರುದು. ನಮ್ಮವನ ನಡತೆಯನ್ನು ಏನು ಹೇಳಲಿ!

ಶ್ರೀಕೃಷ್ಣ—ಯುಧಿಷ್ಠಿರ ಮಹಾರಾಜರೇ! ನಮ್ಮ ತಂದೆಯವರು ನನ್ನಮೇಲಣ ಪ್ರೀತಿಯಿಂದ ಪರವಶರಾಗಿ ಅಪಾತ್ರನಾದ ನನ್ನನ್ನು ಹೀಗೆ ಹೊಗಳಿ, ನನ್ನನ್ನು ನಾಚಿಕೆಗೆ ಗುರಿಮಾಡಿದರು. ಅವರು ದೊಡ್ಡವರು ಅವರಮಾತಿಗೆ ಅಡ್ಡಿಯಿಲ್ಲ. ಇರಲಿ. (ಹತ್ತಿರಕ್ಕೆ ಕರೆದು ಕುಳ್ಳಿರಿಸಿಕೊಂಡು) ಧರ್ಮಪುತ್ರನೇ! ಕೌರವರು ಹಸುಗಳನ್ನು ಹಿಡಿದುದು ಹೇಗೆ? ಅರ್ಜುನನೊಬ್ಬನೇ ಕುರುಸೈನ್ಯವನ್ನೆಲ್ಲ ಹೇಗೆ ಜಯಿಸಿದನು? ವಿವರವಾಗಿ ಹೇಳು.

ಧರ್ಮ—ಹಸುಳೆಗಳಿಗೆ ಗರ್ವವೇಕೆ? ಲೋಕದ ಜನರಿಗೆ ನಿನ್ನ ಹೊರತು ಸಾಮರ್ಥ್ಯವೆಲ್ಲಿಂದ ಬರುವುದು? ಯಂತ್ರಕರ್ತೃವು ನೀನೇ ಆಗಿದ್ದೀಯೆ. ಯಂತ್ರವಿಲ್ಲದಿದ್ದರೆ ಜೀವಿಸತಕ್ಕವರು ಯಾರು? ನೀನೇ ನಮ್ಮೆಲ್ಲರ ದೇಹಿ. ನಾವೆಲ್ಲರೂ ನಿನ್ನ ದೇಹಗಳು. ಇಂತದರಲ್ಲಿ ನಮ್ಮನ್ನು ಹೊಗಳಿ ಹೊಗಳಿ ಏತಕ್ಕೆ ನಾಚಿಸುವೆ. ನಮಗೆ ಎಷ್ಟು ಮಾತ್ರವೂ ಅಹಂಕಾರವಿಲ್ಲ.

ಈ ಪ್ರಕಾರ ಪರಸ್ಪರ ಆಹ್ಲಾದಕರವಾದ ಸಂಭಾಷಣೆಗಳಿಂದ ಹೊತ್ತು ಕಳೆಯುತ್ತಿದ್ದರು. ಅಷ್ಟರವೇಳೆಗೆ ಸಂಧ್ಯಾಕಾಲವಾಯಿತು. ತಾವರೇ ಎಸಳಿನ ಮೊನೆಗಳು ಒಂದೊಂದಾಗಿ ಮುಚ್ಚಿಕೊಳ್ಳುತ್ತಾ ಬಂದುವು. ನೆಯ್ದಿಲೆಯ ನೆತ್ತಿಯ ಬೆಸುಗೆ ಬಿಟ್ಟು ಸಡಿಲುತ್ತಾ ಬಂದಿತು. ಜತೆಸೇರಿದ್ದ ಚಕ್ರವಾಕ ದಂಪತಿಗಳ ಕೂಟವು ಅಗಲುತ್ತಾ ಬಂತು. ಯಾವ ದಿಕ್ಕಿನಲ್ಲಿ ನೋಡಿದರೂ ಬಿಸಿಲಿನ ಕಾಂತಿಯು ಕುಂದಿಹೋಗು ತ್ತಲಿದೆ. ತಂಗಾಳಿ ಬೀಸುವುದರಿಂದ ನೆಲವು ತಂಪಾಗಿದೆ. ಆ ವೇ ಳೆಗೆ ಸರಿಯಾಗಿ ಬೋವಿಗಳು ಶ್ರೀಕೃಷ್ಣನ ಬಳಿಗೆ ಪಾಲಕಿಯನ್ನು ಹೊತ್ತುತಂದರು. ದೇವತೆಗಳು ಜಯಧ್ವನಿ ಮಾಡುತ್ತಿದ್ದರು. ವಾ ದ್ಯಗಳು ಭೋರ್ಗರೆಯುತ್ತಿದ್ದುವು. ಆಗ ಶ್ರೀಕೃಷ್ಣನು ಮಂದಸ್ಮಿತ ವದನಾರವಿಂದನಾಗಿ ಪಾಲಕಿಯಲ್ಲಿ ಕುಳಿತನು. ನಡುನಡುವೆ ಕಣ್ಣುಗಳಿ ರುವಂತೆ ತಡಿಕೆ ಕಟ್ಟಿದ ಮೇನಾಗಳಲ್ಲಿ ರಾಣಿವಾಸದ ಸ್ತ್ರೀಯರು ಕುಳಿ ತುಕೊಂಡರು. ಜನರ ಸಂದಣಿಯು ಸಂತೋಷದಿಂದ ಮುಂದುಗಡೆ ಸಾಲುಸಾಲಾಗಿ ನಡೆಯುತ್ತಿದ್ದಿತು. ಶ್ರೀಕೃಷ್ಣನ ಪಾಲಕಿಯ ಎರಡು ಕಡೆಗಳಲ್ಲಿಯೂ ಪಾಂಡವರು ನಡೆದರು. ಪಟ್ಟಣದ ಜನರು ದಾರಿ ಯ ಉದ್ದಕ್ಕೂ ಸ್ವಾಮಿಗೆ ಅಡ್ಡಬಿದ್ದು ನಮಸ್ಕರಿಸುತ್ತಿದ್ದರು. ಬೀದಿ ಯಲ್ಲಿ ಎತ್ತನೋಡಿದರೂ ಧೂಳಿಯೇ ತುಂಬಿಹೋಯಿತು. "ಹೊಕ್ಕು ಹೊಗಳುತ್ತಿರುವ ವೇದಗಳಿಗೆ ಕೂಡ ಮೈಗೊಡದ ಐಂದ್ರಜಾಲಿಕನು ಪಾಂಡವರ ಕೈಗೆ ಸಿಕ್ಕಿಬಿಟ್ಟನು" ಎಂದು ವಿದ್ವಾಂಸರು ಹೊಗಳುತ್ತಿ ದ್ದರು. ಕೈಗೋಲಿನ ಧಳಾಯಿತರು ನುಗ್ಗಿ ಬರುತ್ತಿರುವ ಜನರನ್ನು ತಡೆದು ಅಟ್ಟುತ್ತಿದ್ದರು. ಶ್ರೀಕೃಷ್ಣನಿಗೆ ಇದು ಸರಿಬೀಳಲಿಲ್ಲ. ಆತನು ಆ ಸೇವಕರನ್ನು ನೋಡಿ ಗದರಿಸಿ "ಏಕೈಯ್ಯಾ! ಜನರನ್ನು ಅಟ್ಟುವಿರಿ? ಉತ್ಸವವನ್ನು ನೋಡಲಿಕ್ಕೆ ಇತರರಂತೆ ಅವರಿಗೂ ಆಶೆಯಿ ಲ್ಲವೆ? ತಡೆಯ ಬೇಡಿರಿ" ಎಂದು ಸಮಾಧಾನ ಹೇಳಿದನು.

ಪುರಜನರೆಲ್ಲರೂ ಕಣ್ಣಿನ ಬರವಾರುವಂತೆ ಶ್ರೀಕೃಷ್ಣನ ದಿವ್ಯಮಂಗಳ ವಿಗ್ರಹವನ್ನು ನೋಡುತ್ತಿದ್ದರು. ಯುವತಿಯರು ಮಹಡಿಗಳ ಮೇಲೆ ನಿಂತುಕೊಂಡು ತಮ್ಮ ಕಡೆಗಣ್ಣಿನ ನೋಟಗಳೆಂಬ ಆರತಿಗಳನ್ನು ಶ್ರೀಕೃಷ್ಣನಿಗೆ ಎಲ್ಲೆಲ್ಲಿಯೂ ಎತ್ತುತ್ತಿದ್ದರು. ಸ್ವಾಮಿಯು ಪಾಂಡವರ ಅರಮನೆಯನ್ನು ಪ್ರವೇಶಿಸಿದನು. ಅಲ್ಲಿ ಹಲವರು ಸುವಾಸಿನಿಯರು ಶ್ರೀಕೃಷ್ಣನಿಗೆ ಆರತಿಗಳನ್ನೆತ್ತಿದರು. ಕೆಲವರು ಬಣ್ಣಬಣ್ಣದ ಸೊಡರುಗಳನ್ನು ನಿವಾಳಿಸಿದರು. ಆ ವೇಳೆಯಲ್ಲಿ ಭೀಮಾರ್ಜುನರೇ ಪರಾಕು ಹೇಳಿ ಜನರನ್ನು ಎಚ್ಚರಗೊಳಿಸುತ್ತಿದ್ದರು. ಎತ್ತ ಕಡೆ ನೋಡಿದರೂ ಕೈದೀವಟಿಗೆಗಳು ಸಾಲುಸಾಲಾಗಿ ಹಿಡಿಯಲ್ಪಟ್ಟಿದ್ದುವು. ಶ್ರೀಕೃಷ್ಣನು ಅರಮನೆಯ ಬಾಗಿಲಲ್ಲಿ ಪಾಲಕಿಯಿಂದ ಇಳಿದು ಸಭಾಭವನಕ್ಕೆ ಬಂದನು. ಅಲ್ಲಿ ಥಳಥಳಿಸುತ್ತಿರುವ ರತ್ನಪೀಠದಮೇಲೆ ಶ್ರೀಕೃಷ್ಣನು ಮಂಡಿಸಿದನು. ಬಂದು ಸೇರಿದ ನರಪತಿಗಳೂ, ಅಧಿಕಾರಿಗಳೂ, ಪುರಜನರಲ್ಲಿ ಪ್ರಮುಖರೂ ಎದ್ದುಬಂದು ನಜರುಮುಜರೆಗಳನ್ನು ಮಾಡಿದರು. ಅಲ್ಲಿಗೆ ಅಂದಿನ ದರಬಾರು ಮುಗಿಯಿತು.

ರಾಜರು ಮುಂತಾದವರೆಲ್ಲರೂ ಹೊರಟುಹೋದಮೇಲೆ ಶ್ರೀಕೃಷ್ಣನು ಪಾಂಡವರ ಜತೆಯಲ್ಲಿ ಕುಳಿತುಕೊಂಡು ಬಹಳ ಹೊತ್ತಿನ ತನಕ ಸಂಭಾಷಣೆ ಮಾಡುತ್ತಿದ್ದನು.

ಕೃಷ್ಣ—ಎಲೈ ಧರ್ಮಪುತ್ರನೇ! ಜೂಜಿನ ಪಣದ ಪ್ರತಿಜ್ಞೆಯನ್ನು ಪಾಲಿಸಿ ನೀವೇಗೆದ್ದಿರಿ. ಕೌರವನು ಸೋತಂತೆ ಆಯಿತು. ಇನ್ನು ಮುಂದೆ ನಿಮಗೆ ಸಲ್ಲಬೇಕಾದ ಅರ್ಧರಾಜ್ಯವನ್ನು ತಾನಾಗಿ ಕೊಡುವನೆ? ಅಥವಾ ಮತ್ತೆ ಯಾರಿಂದಲಾದರೂ ಹೇಳಿಸಬಹುದೆ? ಇದಕ್ಕೆ ಯಾವಯೋಚನೆ ಮಾಡಿರುವಿರಿ?

ಧರ್ಮ—ಸ್ವಾಮೀ! ಹಸುಗಳನ್ನು ಶತ್ರುಗಳು ಹಿಡಿದೊಯ್ದಿದ್ದರು. ಅವರನ್ನು ಓಡಿಸಿ ಗೋವುಗಳನ್ನು ಹಿಂದಿರುಗಿಸಿ ತಂದೆವು.

ಕೌರವರು ತಮ್ಮ ನಗರಕ್ಕೆ ಹೋದರು. ನಾವು ಪಟ್ಟಣಕ್ಕೆ ಬಂದ ಮೇಲೆ ವಿರಾಟರಾಯನು ನಮ್ಮೈವರ ಗುರುತುಗಳನ್ನು ತಿಳಿದುಕೊಂಡು ಆ ಬಳಿಕ ನಮ್ಮನ್ನು ವಿನಯದಿಂದ ಸತ್ಕರಿಸಿದನು. ಆ ರಾಯನು ತನ್ನ ಮಗಳಾದ ಉತ್ತರೆಯನ್ನು ಅಭಿಮನ್ಯು ಕುಮಾರನಿಗೆ ಕೊಟ್ಟು ಮದುವೆಯ ಲಗ್ನ ಬೆಳಸಬೇಕೆಂದು ಪ್ರಾರ್ಥಿಸಿದನು. ಆದುದರಿಂದ ನಿಮ್ಮನ್ನು ಇಲ್ಲಿಯತನಕ ಬರಮಾಡಿದೆವು. ದೀನರಾದ ನಾವು ಕೊಟ್ಟ ತೊಂದರೆಯನ್ನು ಕ್ಷಮಿಸಿರಿ. ಈ ವಿವಾಹ ಸಂಬಂಧವು ಯೋಗ್ಯವಾದುದೆಂದು ತಮ್ಮ ಚಿತ್ತಕ್ಕೆ ಒಪ್ಪಿದರೆ ಮದುವೆಯನ್ನು ಮಾಡಿಸಬಹುದು. ನಮ್ಮ ರಾಜ್ಯವನ್ನು ಸಂಪಾದಿಸುವ ವಿಷಯದಲ್ಲಿ ನಮಗೆ ಏನೂ ತೋರದೆ ಇದೆ. ಸರಿಯಾಗಿ ಯೋಚಿಸಿ ತಕ್ಕ ಬುದ್ಧಿವಾದವನ್ನು ಅಪ್ಪಣೆ ಕೊಡಿಸಿದರೆ ಅದರಂತೆ ನಡೆದುಕೊಳ್ಳುವೆವು. ನಮ್ಮ ಕಾರ್ಯಗಳನ್ನು ನೆರವೇರಿಸಿ ಕೊಡಬೇಕೆಂಬುದೇ ಪ್ರಾರ್ಥನೆ.

ಕೃಷ್ಣ—ಅಯ್ಯಾ! ಇದು ನಮಗೆ ಬಹಳ ಸಂತೋಷ. ಈ ಸಂಬಂಧ ಮಾಡುವುದರಲ್ಲಿ ಯಾವದೋಷವೂ ಕಾಣಬರುವುದಿಲ್ಲ. ವಿರಾಟರಾಯನು ವಸುವಿನ ಕುಲದವನು. ನೀವು ಚಂದ್ರವಂಶದವರು. ಜಾತಿ ಕುಲಗೋತ್ರಗಳಲ್ಲಿ ಪರಸ್ಪರ ಸಂಬಂಧವು ಸರಿಯಾಗಿಯೇ ಇದೆ. ಕೊರತೆಯೊಂದೂ ಇಲ್ಲ. ಮಾತುಕಥೆಗಳೂ ಸರಿಯಾಗಿಯೇ ನಡೆದಿವೆ. ಶುಭಶಕುನಗಳಾದರೆ ಸಂತೋಷದಿಂದ ಮಂಗಳ ಮುಹೂರ್ತವು ಸಾಗಲಿ.

ಈ ಪ್ರಕಾರ ಶ್ರೀಕೃಷ್ಣನ ಅನುಮತಿ ಸಿಕ್ಕಿದ್ದರಿಂದ ಧರ್ಮರಾಯನು ಬಹು ಸಂತೋಷ ಪಟ್ಟನು. ಆಗ ಮಂಗಳವಾದ್ಯಗಳು ಮೊಳಗಿದುವು. ಪ್ರಜೆಗಳೆಲ್ಲರೂ ಉತ್ಸಾಹಗೊಂಡರು. ಶುಭಮುಹೂರ್ತವು ಸಮೀಪಿಸಿತು. ವೈದಿಕ ಮಂತ್ರಗಳಿಂದ ಕನ್ಯಾವರಣವು ನಡೆಯಿತು. ಅಭಿಮನ್ಯುಕುಮಾರನಿಗೆ ಅಲಂಕಾರ ಮಾಡಿದರು. ಯಾದವ

ಪಾಂಚಾಲ ಮತ್ಸ್ಯ ರಾಜರ ಗುಂಪಿನಲ್ಲಿ ವೆಟ್ಟಕ್ಕಿ, ಜೇರಿಗೆ ಬೆಲ್ಲ ಗಳು ಅನುವಾದುವು. ಶುಭಮುಹೂರ್ತದಲ್ಲಿ ಪುಣ್ಯಾಹಕರ್ಮ ನಡೆಯಿತು. ವಧೂವರರನ್ನು ವಿವಾಹ ಮಂಟಪಕ್ಕೆ ಕರೆದು ತಂದರು. ಋಷಿಗಳು ಹೋಮ ಮಾಡಲಿಕ್ಕೋಸ್ಕರ ಅಗ್ನಿ ಪ್ರತಿಷ್ಠೆಮಾಡಿದರು. ವಧೂವರರಿಬ್ಬರೂ ಯಜ್ಞೇಶ್ವರನಿಗೆ ಪ್ರದಕ್ಷಿಣೆ ಮಾಡಿದರು. ವಧುವು ವರನ ಬಳಿಯಲ್ಲಿಬಂದು ನಿಂತಳು. ಕನ್ಯಾದಾನವಾಯಿತು. ಎಲ್ಲಿನೋಡಿದರೂ ವೈಭವ, ಎಲ್ಲಿನೋಡಿದರೂ ಸಂತೋಷ, ಎಲ್ಲೆಲ್ಲಿಯೂ ಮಂಗಳವಾದ್ಯ, ಬ್ರಾಹ್ಮಣರಿಗೆಲ್ಲಾ ಭೋಜನ, ಭೂರಿದಕ್ಷಿಣೆ, ಬಂದಿದ್ದವರಿಗೆಲ್ಲಾ ಉಡುಗೊರೆ, ಮುತ್ತು ರತ್ನಾಭರಣಗಳು, ರಾಜಪತ್ನಿಯರಿಗೆ ಅವರವರ ಗೌರವಾನುಸಾರವಾಗಿ ಸತ್ಕಾರ, ದೀನರಿಗೂ ಕುರುಡರಿಗೂ,ಹೆಳವರಿಗೂ ಯಥೇಷ್ಟವಾದ ಆಹಾರ ಪಾನೀಯಗಳು ನಡೆದುವು. ಆಗ ಶ್ರೀಕೃಷ್ಣನ ಪತ್ನಿಯರು ಅಭಿಮನ್ಯುವಿಗೆ ಲೋಕೈಕವೀರನಾಗೆಂದು ಹರಸಿದರು.

ಇದು ಶುಭಪರಂಪರೆಯ ಗರುಡಿಯಮನೆ, ಸಂಪತ್ತಿಗೆ ನೆಲೆಮನೆ. ಸೊಂಪಿನ ಗಣಿ, ಆನಂದದ ಜನ್ಮಭೂಮಿ, ಲಕ್ಷ್ಮಿಯ ವಾಸದ ಮನೆ, ಅಭಿವೃದ್ಧಿಯ ಓಲಗಶಾಲೆ ಎಂಬಂತೆ ಅಭಿಮನ್ಯುವಿನ ವಿವಾಹ ಮಂಟಪವು ಶೋಭಾಯಮಾನವಾಗಿದ್ದಿತು. ಯಾದವರು, ವಿರಾಟರು, ಮತ್ಸ್ಯರು, ಸೋಮಕರು, ಮೊದಲಾದ ಬಂಧು ಜನರನ್ನೆಲ್ಲಾ ಪಾಂಡವರು ಸತ್ಕರಿಸಿದರು. ಭೂಮಿಯ ಜನರೆಲ್ಲರೂ ದ್ರವ್ಯದಿಂದಲೂ, ವಸ್ತ್ರಾಭರಣಗಳಿಂದಲೂ, ಮೃಷ್ಟಾನ್ನದಿಂದಲೂ ತೃಪ್ತಿಹೊಂದಿದರು.

ಮದುವೆಯಾದ ನಾಲ್ಕನೆಯ ದಿನ ಪುರದ ಮೆರೆವಣಿಗೆಯಾಯಿತು. ಚತುರಂಗಸೇನೆಯು ಬಿರುದುಗಳೊಂದಿಗೆ ಹೊರಟಿತು. ಮಾರನೆಯ ದಿನ ಅವಭೃತವೆಂದರೆ ದೀಕ್ಷಾಂತ ಸ್ನಾನ. ಚಿನ್ನದ ಕೊಪ್ಪರಿಗೆಗಳಲ್ಲಿ ಪನ್ನೀರು, ಕುಂಕುಮ ಕೇಸರಿಗಳಿಂದ ಮಾಡಿದ ಓಕುಳಿ

ಯನ್ನು ತುಂಬಿ, ಬಂಧು ಬಳಗದವರೊಂದಿಗೆ ಎಲ್ಲರೂ ವಸಂತವನ್ನಾಡಿದರು. ಶ್ರೀಕೃಷ್ಣನ ಹೆಂಡತಿಯರು, ಪಾಂಡವರ ಪತ್ನಿಯರು, ಪಾಂಚಾಲ ವಿರಾಟರ ಹೆಂಗಸರು, ಇವರೆಲ್ಲಾ ವಿನೋದದಿಂದ ಓಕುಳಿಯಾಡಿದರು. ಶ್ರೀಗಂಧರಸ, ಕಸ್ತೂರಿ, ಕುಂಕುಮ ಕೇಸರಿ, ಪನ್ನೀರು ಇವುಗಳ ಪ್ರವಾಹದಿಂದ ಭೂಮಿಯೆಲ್ಲಾ ನೆನೆಯಿತು. ದಿಕ್ಕುಗಳೆಲ್ಲವೂ ಘುಮಘುಮಿಸಿದುವು. ಸಮುದ್ರವು ತುಷಾರದಿಂದ ಉಕ್ಕಿತು. ಸೂರ್ಯನು ಪರಿಮಳಿಸಿದನು. ವಾಯುವು ಗಂಧಪೂರಿತವಾಯಿತು. ಸಕಲ ದೇವಗಣಗಳೂ ಸುವಾಸನೆಯಿಂದ ನಲಿದವು.

ವಿರಾಟರಾಜನು ತನ್ನ ಅಳಿಯನ ಬಲುವಳಿಯಾಗಿ ಭೂಮಿ, ಭಂಡಾರ, ಸ್ತ್ರೀಯರು, ಉತ್ತಮವಾದ ವಸ್ತುವಾಹನಗಳು, ಇವುಗಳನ್ನು ಕೊಟ್ಟು ಮನ್ನಿಸಿದನು. ಅಭಿಮನ್ಯುವಿನ ವಿವಾಹವು ಸಾಂಗವಾಗಿ ನೆರವೇರಿತು. ಜನರೆಲ್ಲರೂ ಸಂತೋಷದಿಂದ "ಆಹಾ! ನಾವೇ ಪುಣ್ಯವಂತರು, ಶ್ರೀಕೃಷ್ಣನ ಪಾದದರ್ಶನದಿಂದ ಧನ್ಯರಾದೆವು." ಎಂದು ತಮ್ಮ ಮನೆಗಳಿಗೆ ಹೋದರು. ಪಾಂಡವರು, "ನಾವು ರಾಜ್ಯವನ್ನು ಒತ್ತೆ ಇಟ್ಟೆವು. ಸತ್ಯವನ್ನು ಕಾಪಾಡಿದೆವು. ನಮಗೆ ಪರಮಾತ್ಮನಾದ ಶ್ರೀಕೃಷ್ಣನ ಅನುಗ್ರಹವು ಪೂರ್ಣವಾಗಿ ಇರುವುದರಿಂದ ಬಂದ ಕಷ್ಟಗಳೆಲ್ಲಾ ಪರಿಹಾರವಾದುವು" ಎಂದು ಸ್ವಾಮಿಯನ್ನು ಸ್ತುತಿಸಿದರು.

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ ।  
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ॥  
ಗೋಬ್ರಾಹ್ಮಣೇಭ್ಯಶ್ಶುಭಮಸ್ತು ನಿತ್ಯಂ ।  
ಲೋಕಾಸ್ಸಮಸ್ತಾಸ್ಸುಖಿನೋ ಭವಂತು ॥

—ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ—

——:0:——

# ಪ್ರಕಟನೆ.

"ಮಹಾಭಾರತಸಂಗ್ರಹ" ಎಂಬ ಹೆಸರಿನಿಂದ ಭಾರತದ ಕಥೆಯೆಲ್ಲವೂ 12 ಸಂಚಿಕೆಗಳಲ್ಲಿ ಮುಗಿಯುವಂತೆ ಸುಲಭವಾದ ಕನ್ನಡ ಶೈಲಿಯಲ್ಲಿ ಬರೆಯಿಸಿ ಮುದ್ರಿಸಲ್ಪಡುತ್ತಿದೆ. ಈಗ 200 ಪುಟಗಳುಳ್ಳ ವಿರಾಟಪರ್ವವೂ 250 ಪುಟಗಳುಳ್ಳ ಉದ್ಯೋಗ ಪರ್ವವೂ ಅಚ್ಚಾಗಿ ವಿಕರಿಗೆ ಸಿದ್ಧವಾಗಿವೆ. ಆದಿಪರ್ವವು ಅಚ್ಚಾಗು ತ್ತಿದೆ. ಸಮಗ್ರಪ್ರತಿಯು 2,500 ಪುಟಗಳಲ್ಲಿ ಪೂರಯಿಸಲ್ಪಡು ವುದು. ಬಿಡಿಸಂಚಿಕೆಗಳಿಗೆ ಕ್ರೌನ್ ಅಷ್ಟಪತ್ರದ ನೂರು ಪುಟ ಗಳಿಗೆ ಎಳಾಣೆಯಂತೆ ಬೆಲೆ ನಿಷ್ಕರ್ಷಿಸಿದೆ. ಗ್ರಂಥದ 12 ಸಂಚಿಕೆ ಗಳನ್ನೂ ಒಟ್ಟಾಗಿ ಪಡೆಯುವವರಿಗೆ 100 ಪುಟಗಳಿಗೆ ಆರಾಣೆ ಯಂತೆ ಬೆಲೆ ಇಟ್ಟಿದೆ. ಅಂತಹ ಅಪೇಕ್ಷೆಯುಳ್ಳವರು ಚಂದಾ ದಾರರಾಗುವೆವೆಂದು ಮುಂಗಡವಾಗಿ ಎರಡು ರೂಪಾಯಿಗಳನ್ನು ಕಳುಹಿದಲ್ಲಿ ಅವರ ಹೆಸರನ್ನು ರಿಜಿಸ್ಟರ್‌ಮಾಡಿಕೊಂಡು, ಸಂಚಿಕೆಗಳು ಸಿದ್ಧವಾದಹಾಗೆಲ್ಲಾ ರಿಯಾಯಿತಿ ಬೆಲೆಗೆ ವಿ. ಪಿ. ಮೂಲಕ ಪುಸ್ತಕ ಕಳುಹಿಸಲ್ಪಡುವುದು. ಮುಂಗಡವಾಗಿ ಕೊಟ್ಟಹಣವು ಕೊನೆಯ ಸಂಚಿಕೆಗಳಿಗೆ ಉಪಯೋಗಿಸಿಕೊಂಡು ಲೆಕ್ಕ ವ್ಯವಸ್ಥೆಮಾಡಲ್ಪ ಡುವುದು.

ಮೇಲಿನ ದರಗಳಲ್ಲಿ ಪೋಸ್ಟುವೆಚ್ಚವು ಸೇರಿಲ್ಲ.

ಪುಸ್ತಕಗಳನ್ನು ಅಪೇಕ್ಷಿಸುವವರು ಕೆಳಗಿನ ವಿಳಾಸದಾರರಿಗೆ ಬರೆದುಕೊಳ್ಳುವುದು.

ಬಿ. ಕೃಷ್ಣರಾವ್ರು,

ನಂ|| ೫, ಚಾಮರಾಜಪೇಟೆ ೧ನೇ ಬೀದಿ,

ಬೆಂಗಳೂರು ಸಿಟಿ